# ವೈಶಾಖಮಾಸ

## ವೈಶಾಖಮಾಸೆ ಕೃಷ್ಣಾಯಾಂ (ಶ್ರೀ ಆಂಜನೇಯ ಮಂಗಳಾಷ್ಟಕಂ)

ವೈಶಾಖಮಾಸೆ ಕೃಷ್ಣಾಯಾಂ ದಶಮ್ಯಾಂ ಮಂದವಾಸರೇ। ಪೂರ್ವಾಭಾದ್ರಾಪ್ರಭೂತಾಯ ಮಂಗಳಂ ಶ್ರೀ ಹನೂಮತೇ।। ಕರುಣಾರಸಪೂರ್ಣಾಯ ಫಲಾಪೂಪಪ್ರಿಯಾಯಚ। ಮಾಣಿಕ್ಯಹಾರಕಂಠಾಯ ಮಂಗಳಂ ಶ್ರೀ ಹನೂಮತೇ।। ಸುವರ್ಚಲಾಕಳತ್ರಾಯ ಚತುರ್ಭುಜಧರಾಯಚ। ಉಂಷ್ಟ್ರಾರೂಡಾಯ ವೀರಾಯ ಮಂಗಳಂ ಶ್ರೀ ಹನೂಮತೇ।। ದಿವ್ಯಮಂಗಳ ದೇಹಾಯ ಪೀತಾಂಬರಧರಾಯಚ। ತಪ್ತ ಕಾಂಚನ ವರ್ಣಾಯ ಮಂಗಳಂ ಶ್ರೀಹನೂಮತೇ।। ಭಕ್ತರಕ್ಷಣ ಶೀಲಾಯ ಜಾನಕೀ ಶೋಕ ಹಾರಿಣೇ। ಸೃಷ್ಟಿಕಾರಣ ಭೂತಾಯ ಮಂಗಳಂ ಶ್ರೀ ಹನೂಮತೇ।। ರಂಭಾವನವಿಹಾರಾಯ ಗಂಧಮಾದನ ವಾಸಿನೇ। ಸರ್ವ ಲೋಕೈಕ ನಾಥಾಯ ಮಂಗಳಂ ಶ್ರೀ ಹನೂಮತೇ।। ಪಂಚಾನನಾಯ ಭೀಮಾಯ ಕಾಲನೇಮಿ ಹರಾಯಚ। ಕೌಂಡಿನ್ಯ ಗೋತ್ರ ಜಾತಾಯ ಮಂಗಳಂ ಶ್ರೀ ಹನೂಮತೇ।। ಕೇಸರೀ ಪುತ್ರ ದಿವ್ಯಾಯ ಸೀತಾನ್ವೇಷ ಪರಾಯಚ। ವಾನರಾಣಾಂ ವರಿಷ್ಠಾಯ ಮಂಗಳಂ ಶ್ರೀ ಹನೂಮತೇ।।



## 9. ''ಶ್ರೀ ಮಧೂಸೂದನ'' ಮಾಸನಿಯಾಮಕ

ಯತ್ ಕೃತಂ ಯತ್ ಕರಿಷ್ಯಾಮಿ। ತತ್ ಸರ್ವತ್ರಂ ನಮಯಾಕೃತಮ್।
ತ್ವಯಾ ಕೃತಂ ತು ಫಲ ಭುಕ್। ತ್ವಮೇ ವಾ ಮಧುಸೂದನ।।

ಮಧುಸೂದನ ದಾನವ ಸಾದನ ವಂದೇ ದೈವತ ಮೋದಿತ ವೇದಿತ ಪಾದ।।

ಮಧುಸೂದನ ಮಧುಸೂದನ ಎಂದರೆ। ಮಧುಕೈಟಭರನ್ನು ಸಂಹಾರ ಮಾಡಲಾಗಿ।
ಮಧುಸೂದನ ಎನಿಸಿಕೊಂಡ।। ಕೇಶವಾಯ ನಮಃ।।

ಮತ್ಸ್ಯತೀರ್ಥದಲ್ಲಿ ಮಧುಸೂದನನಿದ್ದಾನೆ ರಾಮ ರಾಮ। ಮತ್ಸ್ಯತೀರ್ಥದಿ ಮಿಂದೆ
ಮಧುಸೂದನನ ದಯದಿಂದೆ ರಾಮ ರಾಮ।। ಕಾಶಿಯ ಹಾದಿಯಲಿ।।

ಮಧುಸೂದನ ಮಾರಜನಕ ।ಮದ। ಗಜಸೀಳಿ ಮಲ್ಲರ ಗೆಲಿದೆ ತವಕ।
ಒದಗಿ ಕಂಸನ ಕೊಂದ ಬಳಿಕ ।ನೀ। ಮುದುಕಗೆ ಪಟ್ಟವ ಕಟ್ಟಿದ್ಯೋಧನಿಕ ।।ಅಚ್ಯುತಾನಂತ।।

ಮೊದಲು ನಿನ್ನ ಪಾದಪೂಜೆ। ಮುದದಿ ಮಾಡುವೆನೈ ನಾನು।
ಹೃದಯದೊಳಗೆ ಹುದುಗಿಸಯ್ಯ। ಮಧುಸೂದನ।।ಈಶ ನಿನ್ನ।।

ಮುರಾರೀ ಮಾಧವಂ ಮತ್ಸ್ಯಂ। ಮುಕುಂದಂ ಮುಷ್ಠಿಮರ್ಧನಂ।
ಮುಂಜಕೇಶಂ ಮಾಹಾಬಾಹುಂ। ತಂ ವಂದೇ ಮಧುಸೂದನಂ।। ಓಂ ನಮೋ ಭಗವತೇ।।

ಮಧುವೆಂಬ ದೈತ್ಯನ ಸದೆದು ಮರ್ದಿಸಿದನೆ। ವಿದುರನ ಮನೆಯಲಿ ನಲಿದುಂಡ।
ವಿದುರನ ಮನೆಯಲಿ ನಲಿದುಂಡ ಶ್ರೀಕೃಷ್ಣ। ಮಧುಸೂದನ ನಮ್ಮ ಮನದೆ।।ರಂಗ ಬಾರೋ।।

### ಮಾಧವ ಮಧುಸೂದನ ಯಾದವಕುಲರನ್ನ

ಮಾಧವ ಮಧುಸೂದನ ಯಾದವಕುಲರನ್ನ। ಬಾರೆಂದು ಕರೆದಳ್ಯೆಶೋದೆ ಮುದ್ದಿಲಿ ಮಗನ॥ಪ॥ ಸಂಡಗಿಗರನೆಲ್ಲ ಬಿಟ್ಟು ಬಾರಯ್ಯ ಚೆಲುವ। ಮುಂಗಯ್ಯ ವಾಕು ಬೆರಳ್ಹೊನ್ನುಂಗುರ॥ ಝುಂಗಿಪ ಉಡಿಗೆಜ್ಜೆ ಉಡಿದಾರವ ಕಂಡು। ಅಂಗನೆಯರು ನಿನ್ನನೊಯ್ವರೊ॥ ನಿನ್ನಂಘ್ರಿಮೇಲೆನ್ನ ನೊಸಲನಿಡುವೆ ಕೃಷ್ಣ। ಕಂಗಳ ಸಿರಿಯೆ ಬಾರೊ ಮಗನೆ॥1॥ ಬಾಲಕರೊಡನಾಟ ಸಾಕು ಬಾರಯ್ಯ। ನೀಲಾಂಗ ನಿನ್ನ ಮುತ್ತಿನರಳೆಲೆ॥ ಕೀಲು ಮಗಾಯಿ ಹುಲಿಯುಗುರು ಕಂಡು। ಸೋಲ್ವರೊ ನಿನಗೆ ಸೊಬಗಿಯರು॥ ಶ್ರೀಲೋಲ ನೀನಾಳಿ ಕಂಸಾಸುರನ ತುಂಬಿದೊ। ಡ್ಡೋಲಗದೊಳು ರಕ್ಕಸರು ಪಂಥವಾಡಿ। ವೀಳ್ಯವ ಪಿಡಿದು ಕೋಡುವೆನೆಂದುನಿನ್ನ। ಕಾಲಿಗೆ ಎರಗುವೆ ಬಾರೊ ಮಗನೆ॥2॥ ಬೊಮ್ಮದ ಮರಿಯೆ ವಿಶ್ವವನೆಲ್ಲ ಹೃದಯದೋ। ಳೊಮ್ಮೆ ತೋರುವೆನೆಂದು ಕಂಡು ನಾ ಬಲ್ಲೆ॥ ಎನ್ನ ಮನಕೆ ಆಹ್ಲಾದನು ಉಪಾಯ। ದಿಂದ ಭಾಗವತರ ಪಾಲಿಸುತಿಪ್ಪ ಅ॥ ಗಮ್ಯಗೋಚರ ಶ್ರೀಪುರಂದರವಿಠಲ ತೊರೆ। ದಮ್ಮಿಯ ಕೊಡುವೆ ಬಾರೆಲೊ ಮಗನೆ॥3॥

### ಮಧುಸೂದನಾ ಮುರಾರೇ

ಮಧುಸೂದನಾ ಮುರಾರೇ। ಗೋವರ್ಧನ ಗಿರಿಧಾರ ಮುರಾರೇ॥ಪ॥ ಸುಂದರಲೀಲ ಆಶ್ರಿತ ಜನ ಪಾಲ। ಮಂದರೋದ್ಧಾರಾ। ಮಂಜುಳ ಗಾನವಿಲೋಲ॥ ನಾರಾಯಣ ಶ್ರೀರಮಣ ಸುಗುಣ ಪರಾಯಣ ನುತ ಚರಣ। ವೇದ್ದೋದ್ಧಾರಣ ಕರುಣಾ ಭರಣ। ನಾರದಾದಿ ಮುನಿ ವಂದಿತ ಜಗಧಾದಾರ॥1॥

### ಮಧುಸೂದನಾ ಹರೇ ಮಾಧವ

ಮಧುಸೂದನಾ ಹರೇ ಮಾಧವ। ಶ್ರೀ ವಾಸುದೇವ ಜನಾರ್ದನ॥ ಹರ ಕೇಶವ ನಾರಾಯಣ। ಶ್ರೀಹರಿ ಗೋವಿಂದ ಮನಮನೋಹನ॥1॥ ಜನಾರ್ಧನಾ ಜಗತ್ಪಾಲನಾ। ದೀನಾವನಾ ದುಃಖಭಂಜನ। ಅರವಿಂದ ಲೋಚನ ಆನಂದನ। ಶ್ರೀವಾಸುದೇವ ಜನಾರ್ದನ॥2॥

### ಕೃಷ್ಣಾ ಮಧುಸೂದನಾ

ಕೃಷ್ಣಾ ಮಧುಸೂದನಾ। ಮಧುಸೂಧನಾ ಕೃಷ್ಣಾ॥ ಗೋವಿಂದ ಗೋವಿಂದ ಗೋಪಾಲ। ರಾಧೇ ಗೋವಿಂದ ಗೋಪಾಲ ಜಯ ಗೋವಿಂದ ರಾಧೇ ಗೋಪಾಲ॥

### ಕೇಶವಾ ಮಾಧವಾ ಜಯ ದೇವಾ ಮಧುಸೂಧನ

ಕೇಶವಾ ಮಾಧವಾ ಜಯ ದೇವಾ ಮಧುಸೂಧನ॥ನೇತ್ರ ಕಮಲದಲ ಅತೀವ ಮನೋಹರ। ಅಂತರ್ಯಾಮಿ ಪ್ರಭು ಪರಮೇಶ್ವರ। ಮಾಯಾಮಾನುಷ ವೇಷಲೀಲಾಧರ। ಜಯದೇವ ಮಧುಸೂಧನಾ॥

### ಮಾಧವ ಮಧುಸೂದನ

ಮಾಧವ ಮಧುಸೂದನ ಯಾದವಕುಲರನ್ನ। ಬಾರೆಂದು ಕರೆದಳ್ಯೆಶೋದೆ ಮುದ್ದಿಲಿ ಮಗನ॥ಪ॥ ಸಂಗಡಿಗರನೆಲ್ಲ ಬಿಟ್ಟು ಬಾರಯ್ಯ ಚೆಲುವ। ಮುಂಗಯ್ಯ ವಾಕು ಬೆರಳ್ಹೊನ್ನುಂಗುರ॥ ಝುಂಗಿಪ ಉಡಿಗೆಜ್ಜೆ ಉಡಿದಾರವ ಕಂಡು। ಅಂಗನೆಯರು ನಿನ್ನನೊಯ್ವರೋ॥ ನಿನ್ನಂಘ್ರಿಮೇಲೆನ್ನ ನೊಸಲನಿಡುವೆ ಕೃಷ್ಣ। ಕಂಗಳ ಸಿರಿಯೆ ಬಾರೊ ಮಗನೆ॥1॥ ಬಾಲಕರೊಡನಾಟ ಸಾಕು ಬಾರಯ್ಯ। ನೀಲಾಂಗ ನಿನ್ನ ಮುತ್ತಿನರಳೆಲೆ। ಕೀಲುಮಾಗಾಯಿ ಹುಲಿಯುಗುರು ಕಂಡು। ಸೋಲ್ವರೊ ನಿನಗೆ ಸೊಬಗಿಯರು। ಶ್ರೀಲೋಲ ನೀನಾಳಿ ಕಂಸಾಸುರನ ತುಂಬಿದೊ। ಡ್ಡೋಲಗದೊಳು ರಕ್ಕಸರು ಪಂಥವಾಡಿ॥ ವೀಳ್ಯವ ಪಿಡಿದು ಕೊಡುವನೆಂದು ನಿನ್ನ। ಕಾಲಿಗೆ ಎರಗುವೆ ಬಾರೊ ಮಗನೆ॥2॥ ಬೊಮ್ಮನ ಮರಿಯೆ ವಿಶ್ವವನೆಲ್ಲ ಹೃದಯದೊ। ಳೊಮ್ಮೆ ತೋರುವೆನೆಂದು ಕಂಡು ನಾ ಬಲ್ಲೆ। ಎನ್ನ ಮನಕೆ ಆಹ್ಲಾದವನು ಉಪಾಯ। ದಿಂದ ಭಾಗವತರ ಪಾಲಿಸುತಿಪ್ಪ। ಅಗಮ್ಯಗೋಚರ ಶ್ರೀಪುರಂದರವಿಠ್ಠಲ ತೊರೆ। ದಮ್ಮಿಯ ಕೊಡುವೆ ಬಾರೆಲೊ ಮಗನೆ॥3॥



# 10. "ನರಸಿಂಹ ಜಯಂತಿ"

**ಉದಯರಾಗ**

**ಏಳು ಶ್ರೀ ನರಹರಿಯೇ** **ರಾಗ: ಸುರುಟಿ**

ಏಳು ಶ್ರೀ ನರಹರಿಯೇ ಏಳು ತ್ರಿದಶರ ಧೊರಿಯೇ। ಏಳು ಕರಿವರ ಕರೆಯೇ ಪಾಲಿಸಿದ ಹರಿಯೇ। ಏಳು ಭಕುತರು ನಿನ್ನ ಧೂಳಿದರುಶನಕಾಗಿ। ಆಲಯದಿ ಕಾದಿಹರು ಪಾಲಿಸಲು ಬೇಕೋ। ಆಲಯದಿ ಕಾದಿಹರು ಪಾಲಿಸಲು ಬೇಕೋ। ಪಾಲ ವಾರಿಧಿಶಯನ ಪೇಳಲೆನ್ನೊಳವೆ ತವ। ಕಾಳೀಯ ಮಥನಾದಿ ಲೀಲೆಗಳ ಮಾಡುತಲಿ। ಲೋಲನೇತ್ರೆಯರು ನಿಮ್ಮಾಲಯಾರಿಗಳ ಮೆಲ್ಲ। ಧೂಳಿ ಮಾರ್ಜನಗೈದು ಮೇಲಲಂಕರಿಸುವರೋ। ದೇಶದೇಶಗಳಿಂದ ಭೂಸುರ ಶ್ರೇಷ್ಠವಿ। ದ್ವಾಂಸರಿಲ್ಲಿಗೆ ಬಂದು ವ್ಯಾಸಮುನಿ ಆಜ್ಞೆಯಲಿ। ತೋಷ ಮುನಿಕೃತ ಸೂತ್ರಭಾಷ್ಯ ಸಹತತ್ವ ಪ್ರ। ಕಾಶ ಪ್ರವಚನದ ಫಲ ಶ್ರೀಶನಿಗರ್ಪಿಸಲು। ಕಾದಿಹರು ಸ್ವಾಮಿ। ತಂತ್ರ ಸಾರೋಕ್ತ ಮಹಾಮಂತ್ರಗಳ ಜಪಿಸುತ ನಿ। ರಂತರದಿ ಬುಧರು ಬಲು ಶಾಂತಮನದಲಿ ರಮಾ। ಕಾಂತ ನಿಮ್ಮಯ ಮೂರ್ತಿ ಚಿಂತನೆಯ ಮಾಡುತಲಿ ನಿಂತಹರೊ ಸ್ವಾಮಿ। ಅಂಬುಜಾಸನ ಪಿತನೆ ಶಂಭ್ವಾದಿನಿರ್ಜರ ಕ। ದಂಬ ಸೇವಿತ ತ್ವತ್ಪಾದಾಂಬುಜವೆ ಗತಿಯೆಂದು। ನಂಬಿರುವ ದಾಸಜನ ಕಾಂಬೆವೆನುತಲಿ ಪಿಡಿದು। ತಂಬೂರಿ ತಾಳಗಳ ಸಂಭ್ರಮದಿ ಪಾಡುವರೊ ಹರಿಯೆ। ರತಿಯ ಪಿತ ನಿನ್ನನುತಿಸಿ ಬೇಡುವೆನು। ದುರ್ಮತ ಮೇಘತತಿಗೆ ಮಾರುತನೆನಿಪ ಮಧ್ವಮುನಿ। ಕೃತ ಸರ್ವಗ್ರಂಥಗಳ ಸತತ ಪ್ರವಚನ ಮಾಳ್ಪ। ಕ್ಷಿತಿ ಸುರರ ಸಂಘವನು ಹಿತದಿ ಪಾಲಿಸಲುಹರಿಯೆ। ಕಂದ ಪ್ರಹ್ಲಾದನ್ನ ತಂದೆ ಬಾಧಿಸುತಿರಲು। ಬಂದು ಸ್ತಂಭದಲಿ ತ್ವರದಿಂದ ರಕ್ಷಿಸಿದ ನಿನ್ನ। ಪೊಂದಿ ಸೇವಿಪರ ಭವ ಬಂಧನವ ಬಿಡಿಸಿ ಆ। ನಂದ ಗರಿಯಲಿ ಬೇಕೊ ನಂದಕುವರ। ವರಕೃಷ್ಣತೀರ ಕಾರ್ಪರ ನಿಲಯನೆನಿಸಿ ಬಹು। ಶರಣು ಜನರನು ಪೊರೆವ ಸಿರಿನಾರಸಿಂಹ। ಅರುಣೋದಯದಲೆದ್ದು ಧರಣಿ ಸುರತರುಣಿಯರು। ಸ್ಮರಣೆ ಮಾಡುತಲಿಹರು ಕರುಣಿಸಬೇಕೋ॥

**ಮಾತಃ ಸುಧಾಫಲಲತೆ (ಶ್ರೀಯೋಗಾಲಕ್ಷ್ಮೀನರಸಿಂಹ ಸುಪ್ರಭಾತಂ)**

ಮಾತಃ ಸುಧಾಫಲಲತೆ ಮಹನೀಯಶೀಲೇ। ವಕ್ಷೋವಿಹಾರರಸಿಕೇ ನೃಹರೇರಜಸ್ರಂ। ಕ್ಷೀರಾಂಬುರಾಶಿತನಯೇ ಶ್ರಿತಕಲ್ಪವಲ್ಲಿ। ಶ್ರೀಮನ್ ನೃಸಿಂಹದಯಿತೇ ತವ ಸುಪ್ರಭಾತಂ॥1॥ ತವ ಸುಪ್ರಭಾತ ಮನವದ್ಯ ವೈಭವೇ। ಘಟಿಕೇಶಸದ್ಗುಣ ನಿವಾಸಭೂತಲೇ। ಘಟಿತಾಖಿಲಾರ್ಥ ಘಟಿಕಾದ್ರಿಶೇಖರೇ। ಘಟಿಕಾದ್ರಿ ನಾಥದಯಿತೇ ದಯಾನಿಧೇ॥2॥ ಅತ್ರ್ಯಾದಿಕಾ ಮುನಿಗಣಾ ವಿರಚಯ್ಯ ಸಂಧ್ಯಾಂ। ದಿವ್ಯಸ್ರವನ್ಮಧುರುರೀಕ ಸರೋರುಹಾಣಿ। ಪಾದಾರ್ಪಣಾಯ ಪರಿಗೃಹ್ಯ ಪುರಃ ಪ್ರಪನ್ನಾಃ। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ॥3॥ ಸಪ್ತರ್ಷಿಸಂಘಕೃತ ಸಂಸ್ತುತಿಸುಪ್ರಸನ್ನ। ಶ್ರೀಮನ್ನೃಸಿಂಹ ಗುಣರೂಪ ರಮಾಮಹೀಭ್ಯಾಂ। ಸಾಕಂ ನೃಸಿಂಹಗಿರಿ ಸತ್ಕೃತಾಧಿವಾಸ। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ॥4॥ ದೇವಾರಿ ಭಂಜನಮರುಸ್ತುತದತ್ತಶಂಖ। ಚಕ್ರಾತಪತ್ರಿತಫಣೇಶ್ವರಪತ್ರಿಶೇರ್ಷಿ। ದೇವೇಂದ್ರಮುಖ್ಯ ಸುರಪೂಜಿತ ಪಾದಪದ್ಮ। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ ॥5॥ ಸ್ವಾಮಿನ್ ಸುರೇಶ ಮಧುರೇಶ ಸಮಾಹಿತಾರ್ಥ। ಧ್ಯಾನಪ್ರವೀಣ ವಿನತಾವನಜಾಗರೂಕ। ಸರ್ವಜ್ಞ ಸಂತತಸಮೀರಿತಸರ್ವವೃತ್ತ। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ॥6॥ ಪ್ರಹ್ಲಾದರಕ್ಷಣ ನಿದಾನ ಕೃತಾವತಾರ। ಮಗ್ನಸ್ವಕೀಯ ನಖರೈಃ ಸ್ಫುಟಿತಾರಿವಕ್ಷಃ। ಸರ್ವಾಭಿವಂದ್ಯನಿಜವೈಭವ ಚಂದ್ರಕಾಂತ। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ॥7॥ ಭಕ್ತೋಚಿತಾದಿ ಸರಸಃ ಸುಗುಣಂ ಪ್ರಕೃಷ್ಟಂ। ತೀರ್ಥಂ ಸುವರ್ಣಘಟ ಪೂರಿತ ಮಾದರೇಣ। ಧೃತ್ವಾ ಶ್ರುತಿಪ್ರವಚನೈಕಪರಾ ಲಸಂತಿ। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ॥8॥ ಸಂಶ್ಲಾಘನೀಯಪರಮೋತ್ತರ ರಂಗವಾಸಿ। ಸೂರಿಸ್ತುತಿಪ್ರಥಿತ ವಿಗ್ರಹಕಾಂತಿಕಾಂತ। ಸದ್ಭಿಃ ಸಮರ್ಚಿತ ಪದಾಂಬುಜ ಸಾಧುರಕ್ಷಿನ್। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ॥9॥ ತೀರ್ಥಾನಿ ಗೋಮುಖಗತಾನ್ಯಖಿಲಾನಿ ಧೃತ್ವಾ। ಭವ್ಯಾನಿ ಭವ್ಯನಿಕರಾಃ ಪರಿತೋ ಲಸಂತಿ। ಗಾಯಂತಿ ಗಾನಚತುರಾಸ್ತವ ದಿವ್ಯವೃತ್ತಂ। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ ॥10॥ ವಾರಾಣಸಿಪ್ರಥಿತ ವಿಷ್ಣುಪದಿಪ್ರಯಾಗ। ವಿಖ್ಯಾತವಿಶ್ವನತಸದ್ಘಟಿಕಾ ಚಲೇಂದ್ರ। ಸಂಪ್ರಾರ್ಥಿತಾರ್ಥ

ಪರಿದಾನಕೃತೈಕ ದೀಕ್ಷ। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ॥11॥ ಪಾರ್ಶ್ವದ್ವಯ ಸ್ಥಿತರಮಾ ಮಹಿಶೋಭಮಾನ। ಶ್ರೀಚೋಲ ಸಿಂಹಪುರಭಾಗ್ಯಕೃತಾವತಾರ। ಸ್ವಾಮಿನ್ ಸುಶೀಲ ಸುಲಭಾಶ್ರಿತಪಾರಿಜಾತ। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ ॥12॥ ಶ್ರೀ ಶ್ರೀನಿವಾಸಘನದೇಶಿಕವರ್ಯ ಭಕ್ತಿಸಂವರ್ಧಿತ ಪ್ರತಿದಿನೋತ್ಸವಶೋಭಮಾನ। ಕಲ್ಯಾಣಚೇಲ ಕನಕೋಜ್ಜ್ವಲ ಭೂಷಣಾಢ್ಯ। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ॥13॥ ಶ್ರೀಬ್ರಹ್ಮತೀರ್ಥ ತಟಮಾಗತಮಂಜನಾಭಂ। ದೇವಂ ಪ್ರಣಮ್ಯ ವರದಂ ಘಟಿಕಾದ್ರಿಮೇತ್ಯ। ವಾಧೂಲಮಾ ನಿಧಿಮಹಾಗುರುರೇಷ ಅಸ್ತೇ। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ॥14॥ ಆಚಾರ್ಯ ಪೂರುಷವರಾಹ್ಯಭಿರಾಮವೃದ್ಧಾ ಅರ್ಹಾಭಿಪೂಜ್ಯತರ ಮಂಗಲವಸ್ತು ಹಸ್ತಾಃ। ತ್ವತ್ಪಾದಪಂಕಜ ನೀಷೇವಿಷಯಾ ಪ್ರಪನ್ನಾಃ। ಶ್ರೀಮನ್ನೃಸಿಂಹ ವಿಜಯೀಭವ ಸುಪ್ರಭಾತಂ॥15॥ ಶ್ರೀಮನ್ನೃಸಿಂಹ ಗಿರಿಶೇಖರ ಸುಪ್ರಭಾತಂ। ಯೇಮಾನವಾಃ ಪ್ರತಿದಿನಂ ಪಠಿತುಂ ಪ್ರವೃತ್ತಾಃ। ತೇಭ್ಯಃ ಪ್ರಸನ್ನವದನಃ ಕಮಲ ಸಹಾಯಃ। ಸರ್ವಾಣೀ ವಾಂಛಿತಫಲಾನಿ ದದಾತಿ ಕಾಮಂ॥16॥ ಇತಿ ಶ್ರೀಯೋಗಾಲಕ್ಷ್ಮೀ ನರಸಿಂಹ ಸುಪ್ರಭಾತಂ ಸಮಾಪ್ತಂ॥

### ಏಳಿ ಶ್ರೀ ನರಸಿಂಹಸ್ವಾಮಿ ನೀವೇಳಿ — ರಾಗ: ಭೌಳಿ

ಏಳಿ ಶ್ರೀ ನರಸಿಂಹಸ್ವಾಮಿ ನೀವೇಳಿ। ಏಳಿರೀ ಸುಪ್ರಭಾತದಲಿ ನೀವೇಳಿ ॥ಪ॥ ಏಳಿ ಶ್ರೀರಾಮನೆ ಏಳಿ ಲಕ್ಷ್ಮಣನಪ್ರಿಯನೆ ಏಳಿ ಶ್ರೀ ಮದನಮೋಹನ ಶ್ರೀನಿವಾಸಾ। ಏಳಿರಿ ಶಾಮಸುಂದರರೂಪ ನೀವೇಳಿ। ಏಳಿರೀ ಸುಪ್ರಭಾತ ಸಮಯದಲಿ ನೀವೇಳಿ॥1॥ ಗಂಗೆ ಬಂದಳು ಪಾದಪದ್ಮವನು ತೊಳೆಯಲ್ಕೆ। ಅಂಗನಾ ರಮೆಯು ಆರತಿಯ ಬೆಳಗುವಳು ಸಿಂಗನಡುವಿನ ಸುಂದರಿ ಶಾಂತ ಸಮಯದಲಿ ಮಂಗಳಾಂಗನೆ ನಿನ್ನ ಲೀಲೆ ಪಾಡುವಳು॥2॥ ಗಜರಾಜ ಬಂದ ಧ್ರುವ ಬಂದ ನಾರದ ಬಂದ। ಅಜಮಿಳನು ಬಂದ ಅಕ್ರೂರ ಬಂದ। ವಿಜಯ ಬಂದನು ವಿಭೀಷಣನು ಬಂದ। ನಿಜಭಕ್ತರೆಲ್ಲರು ಬಂದರು ಕೃಷ್ಣ ಸಹಿತ॥3॥ ಗರುಡ ಬಂದನು ಜಾಂಬುವಂತನು ಬಂದ ಜಯ ಬಂದ। ಚಿರಂಜೀವಿ ಬಂದ ಹನುಮಂತ ಬಂದ। ಪರಮ ಮುತ್ತೈದೆ ತುಳಸೀ ದೇವಿಗರ್ಪಿಸಲು। ಹರಿಯ ದೇಗುಲ ಪುರಿಯ ನೆರೆಯ ನಿಂತಿಹರು॥4॥ ಕಾಸಿದಾ ಕೆನೆಹಾಲು, ಸೋಸಿ ದ್ರಾಕ್ಷೆಯನಿಕ್ಕಿ ಘಾಸಿಸಲು ಶರ್ಕರಾದಿಗಳನು ಸುರಿದು ಶ್ರೀಶ ಪ್ರಹ್ಲಾದವರದನೆ ಸಮರ್ಪಿಸುತಿಹೆನು ಈ ಸುಪ್ರಭಾತದಲಿ ಪ್ರತಿಭಾಂಕುರೇಶ॥5॥

### ಮಹದಾದಿ ದೇವ — ರಾಗ: ಭೂಪಾಲ್

ಮಹದಾದಿ ದೇವ। ಮಹಾಮಹಿಮ। ಪ್ರಹ್ಲಾದ ವರದ। ಅಹೋಬಲ ನಾರಸಿಂಹ॥1॥ ನೀಲಮೇಘಶ್ಯಾಮವರ್ಣ। ಭಕ್ತರ ಹೃದಯವಾಸಿ। ನರಸಿಂಹ ರೂಪದಲ್ಲಿ। ಕಂಬದೊಳಗಿಂದ ಬಂದ ದೇವನೇ। ನಿನಗೆ ತವ ಸುಪ್ರಭಾತ॥2॥ ಮನೋಹರ ರೂಪಿ। ಶ್ರೀಲಕ್ಷ್ಮೀನೃಸಿಂಹನೆ। ಸರ್ವರಿಗೂ। ಮುಕ್ತಿಯ ನೀಡುವ ದೇವನೇ। ನಿನಗೆ ತವ ಸುಪ್ರಭಾತ॥3॥



### ನಮೋ ನಮಸ್ತೇ ನರಸಿಂಹದೇವ — ರಾಗ: ಶಂಕರಾಭರಣ–ಆದಿತಾಳ

ನಮೋ ನಮಸ್ತೇ ನರಸಿಂಹದೇವ। ಸ್ಮರಿಸುವವರ ಕಾವ ಸುಮಹಾತ್ಮ ನಿನಗೆಣೆ॥ಪ॥ ಲೋಕದೊಳಾವ ತ್ರಿಭುವನ ಸಂಜೀವ। ಉಮೆಯರಸನ ಹೃತ್ಕಮಲದ್ಯುಮಣಿಮಾ। ರಮಣ ಕನಕ ಸಂಯಮಿ ವರವರದ॥ಅ.ಪ॥ ಕ್ಷೇತ್ರಜ್ಞಾಕ್ಷೇಮ ಭಾಮ ಭೂಮ। ದಾನವ ಕುಲಭೀಮಾ। ಗಾತ್ರ ಸನ್ನುತ ಬ್ರಹ್ಮಾದಿಸ್ತೋಮ। ಸನ್ಮಂಗಳ ನಾಮಾ। ಚಿತ್ರಮಹಿಮ ನಕ್ಷತ್ರನೇಮಿ ಸರ್ವತ್ರಮಿತ್ರ ಸುಚರಿತ್ರ ಪವಿತ್ರ॥1॥ ಅಪರಾಜಿತ ಅನಘ ಅನಿರ್ವಿಣ್ಣ ಲೋಕೈಕ ಶರಣ್ಯ। ಶಫರಕೇತು ಕೋಟಿ ಲಾವಣ್ಯ। ದೈತ್ಯೇಂದ್ರ ಹಿರಣ್ಯ-ಕಶಿಪುಸುತನ ಕಾಯ್ದಪೆನೆನುತಲಿ ನಿಷ್ಕಪಟ ಮನುಜ ಹರಿವಪುಷ ನೀನಾದೆ॥2॥ ತಪನಕೋಟಿ ಪ್ರಭಾ ಶರೀರ। ದುರಿತೌಘವಿದೂರ। ಪ್ರತಿತಾಮಹಮಂದಾರ। ಖಳವಿಪಿನಕುಠಾರ। ಕೃಪಣಬಂಧು ತವ ನಿಪುಣತನಕೆ ನಾನುಪಮೆಗಾಣೆ ಕಾಶ್ಯಪವರ ವಾಹನ॥3॥ ವೇದ ವೇದಾಂಗ ವೇದ ವೇದ್ಯಸಾಧ್ಯ ಅಸಾಧ್ಯ। ಶ್ರೀದಮುಕ್ತಾಮುಕ್ತರಾರಾಧ್ಯ।

ಅನುಪಮ ಅನವದ್ಯ। ಮೋದಮಯನೆ ಪ್ರಹ್ಲಾದ ವರದ ನಿತ್ಯೋದಯ ಮಂಗಳ ಪಾದಕಮಲಕೆ॥4॥ ಅನಿಮಿತ್ತ ಬಂಧು ಜಗನ್ನಾಥ ವಿಠಲ ಸಾಂಪ್ರತ। ನಿನಗೆ ಬಿನ್ನೈಸುವೆ ಎನ್ನಯುವಮಾತ। ಲಾಲಿಸುವುದು ತಾತ। ಗಣನೆಯಿಲ್ಲದವಗುಣವೆಣಿಸದೆ ಪ್ರತಿ। ಕ್ಷಣಕೆ ಕಥಾಮೃತ ಉಣಿಸು ಕರುಣದಿ॥5॥

### ಶ್ರೀರಮಣಿ ಕರಕಮಲ (ಹರಿಕಥಾಮೃತಸಾರ-ಜಗನ್ನಾಥದಾಸರು)

ಶ್ರೀರಮಣಿ ಕರಕಮಲ ಪೂಜಿತ। ಚಾರು ಚರಣಸರೋಜ ಬ್ರಹ್ಮಸ। ಮೀರವಾಣಿ ಫಣೀಂದ್ರ ವೀಂದ್ರ ಭವೇಂದ್ರ ಮುಖವಿನುತ॥ ನೀರಜ ಭವಾಂಡೋದಯಸ್ಥಿತಿ। ಕಾರಣನೆ ಕೈವಲ್ಯದಾಯಕ। ನಾರಸಿಂಹನೆ ನಮಿಪೆ ಕರುಣಿಪುದೆಮಗೆ ಮಂಗಳವಾ॥

### ಭೂರಮಾವರ (ಶಂಕರ ವಿಜಯ-ಸಾಲಿಗ್ರಾಮ ಶ್ರೀಕಂಠಶಾಸ್ತ್ರಿ)

ಭೂರಮಾವರ ಲೋಕವಂದಿತ। ಚಾರುಚರಣಾಂಭೋಜಯುಗ್ಮಸು। ರಾರಿಕುಲಸಂಹಾರ ಭಕ್ತಿಪ್ರಿಯಸದಾಧಾರ॥ ಮಾಪಿತಕಂಸಾರಿ ಭವಭಯ। ದೂರ ಪರಮವಿಚಾರಪಾರಾ। ವಾರ ನರಹರ್ಯಕ್ಷ ರಕ್ಷಿಪುದೆಂದನಾ ಯತಿಪ॥

ನಾರಸಿಂಹನೆ ನಿನ್ನ ನಾಮೋ। ಚ್ಚಾರಣೆಯ ಮಾತ್ರದಲಿ ಬಹುವಿಧ। ಘೋರ ಭೂತಪ್ರೇತಪೈಶಾಚಾದಿ ಬಾಧೆಗಳು। ಸೇರಲಮ್ಮವು ಸನಿಹಕೆನಲು ಸು। ರಾರಿಗಳು ಮತ್ತಾರು ನಿನ್ನಯ। ವೈರದಲಿ ನಿಲ್ಲಬಲ್ಲರೆಂದನು ಯತಿಕುಲೇಶ್ವರನು॥

### ವಂದೇ ಮುಕುಂದ ನಮೋ — ರಾಗ: ಆನಂದಭೈರವಿ-ಆದಿತಾಳ

ವಂದೇ ಮುಕುಂದ ನಮೋ। ವಂದೇ ಮುಕುಂದನಮೋ। ವೃಂದಾರ ಕೇಶ ನಮೋ। ನಂದ ಮೂರುತಿ ಪರಮಾನಂದ ನರಸಿಂಹಾ॥ ಬಿಸಜ ಪೀಠನ ವರವ ಪಡೆದು ಮಹಾರಾಜೇಂದ್ರ। ವಸುಮತಿಗೆ ತಾನೆ ಸ್ವಾಮಿ ಎಂದು। ಹಸುಳೆಯನು ಬಾಧಿಸಲು ಮೊರೆಯಿಡಲಾಕ್ಷಣ। ಮಿಸಣಿಪ ಕಂಭದಿ ಬಂದ ಭಳಿರೆ ನರಸಿಂಹಾ। ರೋಷವನೆ ತಾಳಿ ನಿಟ್ಟುಸಿರಗೈಸಿ ಕೊಳುತಾ। ಸೂಸಿ ಕಿಡಿಗಳನುದುರೆ ಕುಪ್ಪಳಿಸುತ ಕಮ। ಲಾಸನಾದ್ಯರ ಪಾಲಿಸಿದ ನರಸಿಂಹಾ। ಅಜವಾಣಿ ನೆಲೆಯಲ್ಲಿ ವಾಸವಾಗಿದ್ದ ನರ। ಗಜಪಗೀಯ ಮೊಗನೆ ಆನಂದ ಮಗನೇ। ಭಜಿಸುವನು ಗತಿ ಕೊಡುವ ಜನಮೇಜಯ ನೃಪವರದ। ವಿಜಯವಿಠ್ಠಲ ವರದಾತೀರ ನರಸಿಂಹಾ॥

### ವಂದಿಸುವೆ ಪ್ರಹ್ಲಾದ ವರದ — ರಾಗ: ಬಾಗೇಶ್ರೀ-ತ್ರಿಪುಟತಾಳ

ವಂದಿಸುವೆ ಪ್ರಹ್ಲಾದ ವರದ ನರಸಿಂಹಾ।ಮೂಲಮೂರುತಿ ಅಹೋಬಲ ನರಸಿಂಹಾ॥ಪ॥ ಗಲಿಗಲಿಯ ನರಸಿಂಹ। ಶೂರ್ಪಾಲಿನರಸಿಂಹ। ತೊರವಿಯ ನರಸಿಂಹ। ನೀರಾ ನರಸಿಂಹ॥ಧೂಮಾ ನರಸಿಂಹ। ಜ್ವಾಲಾ ನರಸಿಂಹ। ಯೋಗ ನರಸಿಂಹ। ಶ್ರೀ ಭೋಗ ನರಸಿಂಹಾ॥ ಮಂಗಲಾ- ಚಲದಲ್ಲಿ ಪಾನಕದ ನರಸಿಂಹಾ। ಸಿಂಹಾಚಲವಾಸ ಭೂವರಾಹ ನರಸಿಂಹಾ॥ ತುಂಗಾತಟಾಕ ಷೋಡಶಬಾಹು ನರಸಿಂಹ। ಮಂಗಲಪ್ರದ ಸಕಲ ಅಶ್ವತ್ಥ ನರಸಿಂಹ॥2॥ ಅಪರೂಪ ನರಹರಿಯ ಮೂರ್ತಿಗಳ ಸ್ಮರಿಸಿದರೆ ಪಾಪ ಪರಿಹಾರ ಆಪತ್ತು ದೂರಾ ॥ ತಾಪತ್ರಯಗಳಿಲ್ಲದ ಸುಪವಿತ್ರವೀ ಜನ್ಮ। ಭೂಪತಿ ವಿಠ್ಠಲನ ಅಪರೋಕ್ಷವಾಗುವದು॥3॥

### ನಮೋ ನಮೋ ನರಮೃಗರಾಜ — ರಾಗ:ತೋಡಿ

ನಮೋ ನಮೋ ನರಮೃಗರಾಜ । ಸದಾ ನಮಿಪ ಸುಜನರಿಗೆ ಅಮರಮಹಿಜ॥ಪ॥ ಕಮಲಸಂಭವಸುಮನಸೇಂದ್ರ ಪ್ರಮುಖ- ನಮಿತಸುಮಹಿಮ ಗಜರಿಪು-ದಮನ ದ್ವಿಜವರಗಮನ ಗುಣನಿಧಿ। ಕಮಲೆಯಳಮುಖಕುಮುದ ಹಿಮಕರ॥ಅ.ಪ.॥ ಜಾತರಹಿತ ಜಗದೀಶ ದನು- ಜಾತವ್ರಾತಾರಣ್ಯ ಜಾತವೇಧಸ। ಶೀತಾಂಶುಭಾನುಸಂಕಾಶ ಶ್ರೀಭೂನಾಥ ಭೂದೇಶ ಹೃತ್ವಾಥೋಜವಾಸ॥ ಶಾತಕುಂಭಕಶ್ಯಪನ ಗರ್ವಜೀ। ಮೂತವೃಂದಕೆ ವಾತನೆನಿಸುತ। ಪೋತ ಪ್ರಹ್ಲಾದನಿಗೆ

ಒಲಿದು ಸಂ। ಪ್ರೀತಿಯಲಿ ಪೊರೆದಾತ ದಾತನೆ॥1॥ ಮಾತುಳವೈರಿ ಗೋಪಾಲ ವೇಣು-ಗೀತಸಂಪ್ರೀತಶ್ರೀರುಕ್ಮಿಣೀಲೋಲ। ಧಾತಾಂಡೋದರ ವನಮಾಲಾ ದೃತ। ಪೂತನ ಬಕ ಶಕಟಾದಿ ಹೃತ್‌ಶೂಲ॥ ಪಾತಕಾದ್ರಿ ಶತಧಾರ ಶುಭಕರ। ಶ್ವೇತದ್ವೀಪಾನಂತಪೀಠ ಪು। ನೀತವರ- ವೈಕುಂಠಘನಸು। ನಿಕೇತನತ್ರಯ ವೀತಭವಭಯ॥2॥ ಮಾರಜನಕ ಶುಭಕಾಯ ಕೃಷ್ಣ। ತೀರ ಸುಶೋಭಿತ ಕಾರ್ಪರ ನಿಲಯ। ದೂರನೋಡದೆ ಪಿಡಿ ಕೈಯ್ಯ ಶ್ರೀಸ- ಮೀರಸನ್ನುತ ಶ್ಯಾಮಸುಂದರರೇಯ ವಾರಿಚರ, ಗಿರಿಭಾರಧರ, ಭೂ- ಚೋರಹರ, ಗಂಭೀರ, ವಟು ಕು- ಠಾರಕರ, ರಘುವೀರ, ನಂದಕುಮಾರ, ವಸನವಿ ದೂರ, ಹಯದ್ವಜ॥3॥

### ನಮೋಸ್ತು ನಾರಾಯಣ (ಶ್ರೀಲಕ್ಷ್ಮೀ ನೃಸಿಂಹ ಸ್ತೋತ್ರ)

ನಮೋಸ್ತು ನಾರಾಯಣ ನಾರಸಿಂಹ। ನಮೋಸ್ತು ನಾರಾಯಣ ವೀರಸಿಂಹ। ನಮೋಸ್ತು ನಾರಾಯಣ ಕ್ರೂರಸಿಂಹ। ನಮೋಸ್ತು ನಾರಾಯಣ ದಿವ್ಯಸಿಂಹ॥1॥ ನಮೋಸ್ತು ನಾರಾಯಣ ವ್ಯಾಘ್ರಸಿಂಹ। ನಮೋಸ್ತು ನಾರಾಯಣ ಪುಚ್ಛ ಸಿಂಹ। ನಮೋಸ್ತು ನಾರಾಯಣ ಪೂರ್ಣಸಿಂಹ। ನಮೋಸ್ತು ನಾರಾಯಣ ರೌದ್ರಸಿಂಹ॥2॥ ನಮೋ ನಮೋ ಭೀಷಣ ಭದ್ರಸಿಂಹ। ನಮೋ ನಮೋ ವಿಹ್ವಲ ನೇತ್ರ ಸಿಂಹ। ನಮೋ ನಮೋ ಬೃಂಹಿತ ಭೂತ ಸಿಂಹ। ನಮೋ ನಮೋ ನಿರ್ಮಲ ಚಿತ್ತ ಸಿಂಹ॥3॥ ನಮೋ ನಮೋ ನಿರ್ಜಿತ ಕಾಲ ಸಿಂಹ। ನಮೋ ನಮೋ ಕಲ್ಪಿತ ಕಲ್ಪ ಸಿಂಹ। ನಮೋ ನಮೋ ಕಾಮದ ಕಾಮ ಸಿಂಹ। ನಮೋ ನಮಸ್ತೇ ಭುವನೈಕ ಸಿಂಹ॥4॥



### ಶರಧಿ ತೀರಗ ಸಿಂಹಪುರಿ — ರಾಗ: ಸಿಂಧುಭೈರವಿ–ಆದಿತಾಳ

ಶರಧಿ ತೀರಗ ಸಿಂಹಪುರಿ ನಿಲಯ ದೇವಾ। ಪರಮ ಕರುಣಾ ಸಿಂಧು ಹರಿಸು ಭವನೋವಾ॥ಪ॥ ಹರಿಯೆ ಪರದೈವವೆಂದು। ಮೊರೆಯುತಿಹ ಬಾಲಕನ। ಪರಿಪರೀ ಹಿಂಸಿಸಲು। ಪರಿಚರರಿಗ್ವೊರೆಯೇ। ತರಳ ಪ್ರಹ್ಲಾದನ। ಕರೆದೊಯ್ದು ಕಬ್ಬಿಯಲಿ। ಹೊರದೂಡಿ ಪರಿಶಿಲೆಯ। ಶಿರದ ಮೇಲಿಡಲೂ॥1॥ ಹರಿಗೆ ನಿನ್ನಯ ರೂಪ। ವಿರದೆಂಬ ಸುಜ್ಞಾನ। ಮರೆಸಿ ಮೋಹಕನಾಗಿ। ಸುರ ವಿರೋಧಿಗಳಾ। ನರಕ ಭಾಜನರೆನಿಸಿ। ಪರಿ ಪರಿಯ ಹಿಂಸೆಗಳಿ। ಗೆರವು ಮಾಡುವೆ ಗುರೂ। ಗೋವಿಂದ ವಿಠಲಾ॥2॥

### ಬಾಗಿಲನು ತೆರೆದು — ರಾಗ: ಅಠಾಣ–ಝಂಪೆತಾಳ

ಬಾಗಿಲನು ತೆರೆದು ಸೇವೆಯನು ಕೊಡು ಹರಿಯೆ। ಕೂಗಿದರು ದ್ವನಿ ಕೇಳಲಿಲ್ಲವೇ ನರಹರಿಯೆ॥ಪ॥ ಪರಮಪದದೊಳಗೆ ವಿಷಧರನ ತಲ್ಪದಲಿ ನೀ। ಸಿರಿ ಸಹಿತ ಕ್ಷೀರವಾರಿಧಿಯೊಳಿರಲು॥ ಕರಿರಾಜ ಕಷ್ಟದಲಿ ಆದಿಮೂಲಾ ಎಂದು। ಕರೆಯಲಾಕ್ಷಣ ಬಂದು ಒದಗಿದೆಯೊ ನರಹರಿಯೆ॥1॥ ಕಡುಕೋಪದಿಂ ಖಳನು ಖಡುಗವನು ಪಿಡಿದು ನಿನ್ನೊಡೆಯನೆಲ್ಲಿಹನೆಂದು ನುಡಿಯೆ॥ ದೃಢಭಕುತಿಯಲಿ ಶಿಶುವು ಬಿಡದೆ ನಿನ್ನನು ಭಜಿಸೆ। ಸಡಗರದಿ ಕಂಬದಿಂದೊಡೆದೆ ನರಹರಿಯೆ॥2॥ ಯಮಸುತನರಾಣಿಗಕ್ಷಯವಸನವನಿತ್ತೆ। ಸಮಯದಲಿ ಅಜಮಿಳನ ಪೊರೆದೆ। ಸಮಯಾಸಮಯವುಂಟೆ ಭಕ್ತವತ್ಸಲ ನಿನಗೆ। ಕಮಲಾಕ್ಷ ಕಾಗಿನೆಲೆಯಾದಿ ಕೇಶವನೆ॥3॥

### ನಾರಸಿಂಹನೆ ಘೋರರೂಪನೆ — ರಾಗ: ತೋಡಿ

ನಾರಸಿಂಹನೆ ಘೋರರೂಪನೆ। ತೋರು ಮೊಗವನು ಕರುಣದಿ॥ ಪ ॥ ಚಾರುಗಾತ್ರನೆ ಬೀರು ತ್ರಾತನೆ ಸೇರಿಹೆನು ತವಚರಣದಿ ॥ ಅ.ಪ. ॥ ಘೋರತರ ಸಂಹಾರ ಶರಧಿಯ ತೀರಗಾಣೆನು ಧೀರನೆ। ಪಾರುಗಾಣೆ- ಪೋದ್ಧಾರ ಕಾಣೆನುಯಾವ ಭವರುಜಹಾರನೇ ॥ 1 ॥ ದಾನವನ ತಪಜ್ವಾಲೆಯಿಂದಲಿ ಮಾನುಷರು ಕಳವಳನೆಯಾ। ಸೂನು ತಾರಣ ನೆವದಿ ದಿವಿಜರ ಮಾನವನು ನೆರೆ ಕಾಯ್ದೆಯಾ॥ 2 ॥ ದುಷ್ಟಸಂಹರ ಶಿಷ್ಟಪಾಲಕನೆಂಬ ಬಿರುದೆತ್ತಿಹುದಲಾ। ಸೃಷ್ಟಿಗೀಶನೆ ಕಷ್ಟ ತೊಲಗಿಸೋ ಶಿಷ್ಟ ನರಸಿಂಹ ವಿಟ್ಠಲಾ ॥ 3 ॥

**ನೃಹರೇ ನಿಮ್ಮ ಚರಣ** **ರಾಗ: ಗರುಡಧ್ವನಿ**

ನೃಹರೇ ನಿಮ್ಮ ಚರಣ ತೋರೋ ವಿಹಗ ಗಮನ ಕರುಣದಿ॥ಪ॥ ವಾರಿಜೋದರ ದಿವ್ಯ ಘನಸಾರ ಶೋಭಿತ ಮುನಿ ಮಂದಾರ। ಮಾಧವ ಮೇರು ಗಂಭೀರ ಭವದುರಿತ ದೂರ ॥1॥ ಸಾರಸಾಕ್ಷ ಮಾರಜನಕ ಘೋರ ದನುಜ ಸಂಹಾರ। ಜಂಭಾರಿ ವಿನುತ ಮೇಘ ಫಲದ ಶ್ರೀರಮಾ ರಮಣನುತ ಚರಿತ ॥2॥ ಉರಗಶಯನ ಗರುಡಗಮನ ಧರಣೀ ಧರ ಮುರಾರಿ। ಹೆನ್ನೆ ಪುರನಿವಾಸ ನಾರಸಿಂಹ ತರಣಿ ಕೋಟಿ ಧಾಮರಾಮ॥3॥

**ಹರಿ ಬಾರನೇ** **ರಾಗ: ಹಿಂದೋಳ**

ಹರಿ ಬಾರನೇ ನರಹರಿ ಬಾರನೇ। ಕರಿಭಯಹರ ಮುರಾರಿ ಬಾರನೆ॥ಪ॥ ವೃಂದಾವನ ಗೋವಿಂದ ಬಾರನೆ। ಕಂದರ್ಪನ ತಂದೆ ಮುಕುಂದ ಬಾರನೆ ॥1 ॥ ಎಂದು ಕಾಂಬೆವೊ ನಾವವನ ನೆಂದು ಕಾಂಬೆವೊ। ಇಂದಿರೆಯರಸನ ನೆಂದು ಕಾಂಬೆವೊ॥ 2 ॥ ಧನ ನಿತ್ಯವೆ ಯೌವನ ನಿತ್ಯವೆ। ಜನ ನಿತ್ಯವೆ ಕರಣ ನಿತ್ಯವೆ॥ 3 ॥ ಭವಗೊಲಿದ ಪಾಂಡವಗೊಲಿದ। ಧೃವಗೊಲಿದ ಮಾಧವಗೊಲಿದ॥ 4 ॥ ಇಂದು ವರ್ಣದ ಹಯವದನನಾದ। ಮಂದರ ಧರನ ಸಖಿ ತಂದು ತೋರೆನಗೆ॥5॥



**ಬಾರೋ ಶ್ರೀ ನರಹರಿಯೆ** **ರಾಗ: ಆರಭಿ–ಅಟ್ಟತಾಳ**

ಬಾರೋ ಶ್ರೀ ನರಹರಿಯೆ ಭವಬಂಧ ಮೋಚಕ ॥ಪ॥ ನಂದ ಗೋಪನ ಕಂದ ಹರಿಮುಕುಂದ। ಸುಂದರ ಮಂದರೋದ್ಧರ। ಸಿಂಧು ಶಯನ ಗೋವಿಂದ ಇಂದಿನ। ಮಂದಮತಿಗೆ ಸ್ವಾನಂದ ವೀಯಲು ॥ಅ.ಪ॥ ಗಾಡಾಂಧಕಾರದೊಳು ಸ್ವೇಚ್ಛೆಯಲಿ ನಾಕಿಡಿಗೇಡಿ ಜೀವನನಾಗಲು। ನೀಡದಂದದಲಿಪ್ಪ ಲಿಂಗದಿ। ಆಡುತಾಡುತ ದೂಡಿ ಎನ್ನನು। ಬೇಡಿಗೊಳಿಸಿ ಕಾಡೊಳಟ್ಟಿದ। ನಾಡರಕ್ಷಿಪ ಗಾಡಿಕಾರನೆ॥1॥ ಏಸು ಜನುಮಗಳ್ಹೋ- ದವೊ। ಈ ವಿಧದಿ ಮುಂದೇಸು ಜನುಮಗಳುಳಿದವೋ। ದಾಸನಾಗಿಹೆ ಕ್ಲೇಶದಿಂದ ಘಾಸಿಯಾಗುವೆ। ಮೋಸ ಮಾಡದೆ। ಶ್ರೀಶ ಈ ಭವ ಪಾಶದಿಂದಲಿ ಪೋಷಿಸಯ್ಯ ವಾಸುದೇವನೆ ॥2॥ ಪ್ರಾರಬ್ಧವದಾವುದೋ ನಿನ್ನಿಚ್ಛೆಯಲ್ಲದೆ। ಬೇರಿಹುದಲ್ಲಾವುದೋ। ದಾರಿಗಾಣೆನೊ ದೂರನೋಡದೇ ಪಾರುಮಾಡ್ವದನಂತ ಮಹಿಮನೆ। ಸೇರಿಸೋ ತವಪಾದ ಕಮಲಕೆ। ಮಾರಪಿತ ಗುರು ಶ್ರೀಶವಿಠಲಾ॥3॥

**ಸಾಗಿ ಬಾ ಜಗದೇಕ ದೊರೆಯೆ** **ರಾಗ: ತಿಲಂಗ–ಕೇಹರವಾತಾಳ**

ಸಾಗಿ ಬಾ ಜಗದೇಕ ದೊರೆಯೆ। ಯೋಗಾ ನರಸಿಂಹ ಪ್ರಭುವೆ॥ಪ॥ ಯೋಗಿಗಳರಸನೆ ಭಾಗವತ ಜನ-। ಸಾಗರ ನಿನ್ನಾಗಮನ ಕಾಯುತಿದೆ ॥ಅ.ಪ.॥ ಭಸಿತ ಚಂದನ ತಿಲಕಾಲಂಕೃತ। ಶಶಿ ಸೂರ್ಯಾಭರಣ ತೋರಣ। ಭೂಸುರರೆಲ್ಲ ಸುಭಾವ ಸ್ವರದಲಿ। ಭಾಸಿಸುತಿರೆ ನಿಮ್ಮ ನಾಮ ವಿಶೇಷ॥ ವಾಸುಕೀಶಯನ ವಿಶೇಷ ರಥವನೇರಿ। ದಾಸವರ್ಗದಭಿಲಾಷೆ ನೀಡು ಬಾ॥1॥ ಪ್ರತ್ಯಂತರ ಪ್ರಪತ್ತಿ ಭಕುತಿ ಪಥ। ಸತ್ಯಂವದ ಧರ್ಮಾಚರಣೆ ಸುಖ॥ ನಿತ್ಯ ನಿರಂತರ ಮುಕುತಿಜ್ಞಾನಾದಿ। ಭೃತ್ಯರಿಗಿತ್ತು ಸಲಹೋ ಶ್ರೀನಿಧಿ। ಸತ್ಯದೇವ ಪಿತ ಸರ್ವೋತ್ತಮ ನೀ। ಪ್ರತ್ಯಕ್ಷವಾಗಿ ಬಾ ಈ ರಥದ ಮಧ್ಯದಲಿ॥2॥ ಸಾಸಿರನಾಮಂಗಳ ಘೋಷಣೆ ಕೂಗುತ। ಲೇಸಾಗಿ ತಾಳ ಮದ್ದಳೆ ಕಂಗಳೆ ಮೊಳಗಿರೆ॥ ಅಸುರನ ವರಿಸಿ ಪ್ರಹ್ಲಾದನ ಸಲಹಿದಾ। ಶೇಷಶಯನ ನಿನ್ನಾಸರೇ ನೀಡು ಬಾ॥ ದೋಷ ವಿವರ್ಜಿತ ದಾಸರ ರಕ್ಷಕ। ಶ್ರೀ ಶ್ರೀ ಶ್ರೀಪ್ರಸನ್ವೇಂಕಟ ನಾಯಕಾ॥3॥

**ಬಾಗಿ ನಮಿಪೆ ಬೇಗ ಬಾರೋ** **ರಾಗ: ಬಿಲಹರಿ**

ಬಾಗಿ ನಮಿಪೆ ಬೇಗ ಬಾರೋ ಶ್ರೀ ನರಹರಿಯೆ॥ಪ॥ ಭಾಗವತರು ನಿನ್ನ ಕೂಗಿ ಕರೆವರಯ್ಯ॥ಅ.ಪ.॥ ನಾಗಶಯನ ನಿನ್ನ ನಾಗರಾಜ ಸ್ತುತಿಸೆ। ಬೇಗ ಸಲಹಿದಿ ಬಂದು ನಾಗಾರಿವಾಹನ॥1॥ ಸ್ತಂಭದಿಂದಲಿ ಬಂದು ಡಿಂಭ- ಗೊಲಿದವನೆಂದು।

ನಂಬಿದ ಭಕುತರ ಹಂಬಲ ಪೂರ್ತಿಸಲು॥2॥ ಕಾರ್ಪರ ಋಷಿ ತಪಕೆ ಒಪ್ಪಿ ಭುವಿಯೊಳ್ ಬಂದು। ಪಿಪ್ಪಲ ತರುವಿನೊಳ್ ಇಪ್ಪ ಶ್ರೀ ನರಹರಿಯೇ॥3॥

**ಬಾಬಾಬಾ ಮೆಲ್ಲಡಿ ಇಡುತಲಿ** ರಾಗ: ಮೋಹನ

ಬಾಬಾಬಾ ಮೆಲ್ಲಡಿ ಇಡುತಲಿ ಕರಿಗಿರಿ ನರಹರಿ॥ಪ॥ ಪದ್ಮಸಂಭವ ಪಿತ ಪದ್ಮನಾಭ ಹೃತ್ಪದ್ಮದಿ ನೆಲಸುತ ಪದ್ಮಿನಿಯೊಡನೆ॥1॥ ದಾಸರ ಮೇಳವ ಶ್ರೀಶನೆ ಕೇಳುತ। ವಾಸುದೇವ ತಮ್ಮ ಆಶೆ ಪೂರೈಸಲು॥2॥ ರಂಗ ಉತ್ತುಂಗ ಕಾಳಿಂಗಮರ್ದನ ಯದು। ಪುಂಗವ ಶ್ರೀಭೂಸಂಗದಿ ರಥದಲಿ॥3॥ ಶುದ್ಧ ಸಾತ್ವಕನಮ್ಮ ಉದ್ಧಾರಕ ತಂದೆ। ಮುದ್ದು ಮೋಹನರಾ ಮುದ್ದಿನ ದೇವನೆ॥4॥ ಆಪದ್ಬಾಂದವ ಶ್ರೀಪತಿ ಕರುಣದಿ। ಗೋಪಾಲಕೃಷ್ಣ ವಿಠಲ ಸರ್ವೇಶ್ವರ॥5॥

**ಬಾಗಿಲು ತೆರೆದಿದೆ ಬಾರಯ್ಯ** ರಾಗ: ರೀತಿಗೌಳ

ಬಾಗಿಲು ತೆರೆದಿದೆ ಬಾರಯ್ಯ ಮನೆಗೆ। ನಾಗಶಯನ ನರಸಿಂಹ ನಾರಾಯಣ ॥ಪ॥ ಅಡ್ಡಗಟ್ಟುವ ಐದು ಬಂಟರ ಸೆರೆಗಿಟ್ಟು। ಅಡ್ಡಿ ಮಾಡುವ ಆರು ದುಷ್ಟರ ದೂರವಿಟ್ಟು। ದೊಡ್ಡದಲ್ಲವು ದಿಟ ದಿಡ್ಡಿ ಬಾಗಿಲು ಇಲ್ಲ। ಗಿಡ್ಡವಿರಲೇನಿದು ಒಳಗೆ ಅನಂತ॥1 ॥ ಎರಡು ಕೊಳದ ಶುದ್ಧ ನೀರಲಿ ಸಾರಿಸಿ। ಹರಿವ ರೋಮಾಂಚದ ರಂಗವಲ್ಲಿಯ ನಿರಿಸಿ। ಬಿರಿದ ಪುಲಕದ ಪುಷ್ಪರಾಶಿಯ ನಣಿಮಾಡಿ। ಸುರಿವ ಆನಂದದ ಹೃದಯಕಲಶವ ಹಿಡಿದು॥2॥ ಹೊರನೋಟವೇಕಿನ್ನು ಒಳಗಿರುತಿರೆ ಸಾಕು। ದೊರೆ ನೀನು ಬರದಿರಲು ಬರಿದಾಯ್ತು ಬಯಕೆ। ಕೊರಗಿಲ್ಲ ಮರೆವಿಲ್ಲ ಮರೆವೆನು ಸಮಸ್ತವ। ಸಿರಿಪತಿ ಚೆನ್ನಕೇಶವ ನಿನ್ನನೆನ್ನೊಳಗಿಟ್ಟು॥3॥



**ಅವತರಿಸಿದ ನೃಸಿಂಹ** ರಾಗ: ಅಠಾಣ

ಅವತರಿಸಿದ ನೃಸಿಂಹ। ಶ್ರೀಹರಿ ಪರಬ್ರಹ್ಮ॥ ಪ॥ ಅವತರಿಸಿದ ತನ್ನ- ವರನು ಪಾಲಿಸುವ। ತವಕದಿ ಭೂ ಭಾರವನಿಳುಹುವುದಕೆ॥ಅ.ಪ॥ ದಡಿಗ ರಕ್ಕಸನು ಖಡುಗದಿ ಕಂಬವ। ಹೊಡೆದ ಮಾತ್ರದಲಿ ಗುಡುಗಿನಂತೆ ವಡ। ನೊಡನೆ ಘುಡುಘುಡಿಸಿ ಕಿಡಿಗಳುದುರೆ ಕೋಟಿ। ಸಿಡಿಲಿದೆನ್ನತ ಕಿವಿಡುಗೊಳೆ ಲೋಕವು॥1॥ ಭೂ ನಭೋಂತರಾಳದಲಿ ಭಯಂಕರ। ಧ್ವಾನ ತುಂಬಿ ಪೊಗೆಸುತ್ತಿ ಉರಿಯಲು ಶತಾನಂದಾದ್ಯಮರರು ಕರಗಳ ಮುಗಿದಾನತರಾಗಿ ನಮೋ ನಮೋಯೆನಲ್॥2॥ ಚಿಟಿಲು ಚಿಟಿಲು ನಿರ್ ನಿಟಿಲು ಶಬ್ದದಿ-। ಕ್ಕಟಗಳೊಡೆಯೆ ಲಟಕಟಿಸೆ ಭುವನಚಯ। ಹಟ ಯೋಗದ ಮುನಿ ಕಟಕವು ಗುರುರಾಮ। ವಿಠಲನ ಪೊಗಳುತ ಮಿಟಿಮಿಟಿ ನೋಡಲು॥3॥

**ಬಂದ ಸಿಂಹ ನಾರಸಿಂಹ** ರಾಗ: ದರ್ಬಾರ್

ಬಂದ ಸಿಂಹ ನಾರಸಿಂಹ ಬಂದ ನೋಡ್ಯೆ। ಇಂದಿರೇಶ ಕಂಬ ಒಡೆದು ಬಂದ ಬೇಡ್ಯೆ ಅದೋ ಬಂದ ನೋಡ್ಯೆ॥1॥ ಎಲ್ಲರಲ್ಲಿ ಮೇಲು ಎಂಬ ಛಲವು ಬೇಡ್ಯೆ। ಎಲ್ಲವನು ನಮ್ಮ ಹರಿಗೆ ದಾನ ಮಾಡ್ಯೆ। ಇದೊ ದಾನ ಮಾಡ್ಯೆ॥2॥ ಹರಿಯು ಮೊರೆಯ ಕೇಳಿ ಓಡಿ ಬಂದ ನೋಡ್ಯೆ। ಧರಿಸಲಿಲ್ಲ ಪೂರ್ಣ ಸಿಂಹ ವೇಶ ನೋಡ್ಯೆ। ಇದೋ ವೇಶ ನೋಡ್ಯೆ॥3॥ ಹರಿಯ ಪಾದಕೆ ನಮಿಸಿ ದಯದಿ ಭಿಕ್ಷೆ ಬೇಡ್ಯೆ। ಚರಣ ಸುಧೆಯ ಗರೆವ ವಿಮಲ ಚಂದ್ರ ನೋಡ್ಯೆ। ಅದೋ ಬಂದ ನೋಡ್ಯೆ॥4॥ ಭಕ್ತವತ್ಸಲ ಪುರಂದರ ವಿಠಲ ಬಂದ ನೋಡ್ಯೆ। ಮುಕ್ತಿ ಕೊಡುವ ದಾತ ನಮಗೆ ಬಂದ ನೋಡ್ಯೆ। ಅದೋ ಬಂದ ನೋಡ್ಯೆ॥5॥

**ಕಂಡೆನಾ ತಂಡತಂಡದ ಹಿಂಡುದೈವ** ರಾಗ: ನಾಟ–ಝಂಪೆತಾಳ

ಕಂಡೆನಾ ತಂಡತಂಡದ ಹಿಂಡುದೈವ ಪ್ರಚಂಡರಿಪು। ಗಂಡ ಉದ್ದಂಡ ನರಸಿಂಹನ ಕಂಡೆನಯ್ಯ॥ಪ॥ ಘುಡುಘುಡಿಸಿ ಕಂಭದಲಿ ಧಡಧಡ ಸಿಡಿಲು ಸಿಡಿಯೆ। ಕಿಡಿಕಿಡಿಸೆ ನುಡಿಯಡಗಲೊಡನೆ ಮುಡಿವಿಡಿದು। ಫಡಫಡನೆ ನಡುನಡುಗೆ

ಘುಡುಘುಡಿಸಿ ಸಭೆ ಬೆದರೆ। ಹಿಡಿಹಿಡಿದು ಹಿರಣ್ಯಕನ ತೊಡೆಯೊಳಿಡೆ ಕೆಡಹಿದನು॥1॥ ಉದರದೊಳಪ್ಪಳಿಸಿ ಅರಿ ಬಸಿರ ಸರಸರನೆ ಸೀಳಿ। ಪರಿಪರಿಯಲಿ ಚರ್ಮ ಎಳೆದೆಳೆದು ಎಲುವು ನರ। ನರವನು ತೆಗೆದು ನಿರ್ಗಳಿತ ಶೋಣಿತ ಸುರಿಯೆ। ಹರಿಹರಿದು ಕರುಳ ಕೊರಳೊಳಿಟ್ಟವನ॥2॥ ಪುರಜನರು ಹಾಯೆನಲು ಸುರರು ಹೂಮಳೆಗರೆಯೆ। ತರತರದ ವಾದ್ಯ ಸಂಭ್ರಮಗಳಿಂದ। ಹರಿಹರಿ ಶರಣೆಂದು ಸ್ತುತಿಸಿ ಶಿಶು ಮೊರೆಯಿಡುವ। ಕರುಣಾಳು ಕಾಗಿನೆಲೆಯಾದಿ ಕೇಶವನ॥3॥

**ಇದು ಏನಂಗ ಮೋಹನಾಂಗ** **ರಾಗ: ದರ್ಬಾರ್–ಅಟ್ಟತಾಳ**

ಇದು ಏನಂಗ ಮೋಹನಾಂಗ॥ಪ॥ ಮದನ ಜನಕ ತೊರವೆಯ ನರಸಿಂಗ॥ಅ.ಪ.॥ ಸುರರು ಸ್ತುತಿಸಿ ಕರೆಯೆ ತುಟಿಯ ಮಿಸುಕದವ। ಬರಿದೆ ಏತಕೆ ಬಾಯ ತೆರೆದೆ ಹೇಳೊಮ್ಮೆ ॥1॥ ವರನೀಲ ಮುತ್ತು ಮಾಣಿಕ ಹಾರಗಳಿರೆ। ಕೊರಳಲ್ಲಿ ಕರುಳ ಮಾಲೆಯ ಹಾಕಿ ಮೆರೆವುದು॥2॥ ತೊರವೆಯ ನರಹರಿ ಪುರಂದರ ವಿಠಲ। ಸಿರಿಯಿಪ್ಪ ತೊಡೆಯೊಳು ಅರಿಯ ನಿಟ್ಟಿರುವುದು॥3॥

**ನೋಡಿದೆ ನಾ ಪಾಡಿದೆ** **ರಾಗ: ಮಧ್ಯಮಾವತಿ**

ನೋಡಿದೆ ನಾ ಪಾಡಿದೆ ಕೊಂಡಾಡಿದೇ। ವರವ ಬೇಡಿದೆ ಪರಕಿಲ್‌ವಾಸ ಶ್ರೀ ನರಸಿಂಹನನೂ ॥ಪ॥ ಕರುಳ ಕೊರಳಲ್ಲಿ ಇಟ್ಟು ಸಿರಿಯ ತೊಡೆಯಲಿಟ್ಟು। ಇದೇ ಭೂವೈಕುಂಠವೆಂದು ಹಸ್ತ ತೋರಿದವನ॥1॥ ಶುಕ್ರವಾರದಿ ಭಜನೆಲಿ ಶೋಭಿಪನ। ಭಕ್ತರೋದ್ಧಾರನ ಭಯನಿವಾರಣ। ಮೋಕ್ಷದಾತನ ಮನ್ಮಥ ಜನಕನ। ಪ್ರಥಮಯುಗದವನ ಅಮ್ಮಾಳುಪ್ರಿಯ ನರಸಿಂಹನ॥2॥

**ರಂಗ ಬಂದ ಮನೆಗೆ** **ರಾಗ: ವಸಂತ**

ರಂಗ ಬಂದ ಮನೆಗೆ ನರಸಿಂಗ ಬಂದ ಮನೆಗೆ। ಭಕ್ತರ ಕರೆಗೆ ಥಟ್ಟನೆ ಒಪ್ಪುತ॥ಪ॥ ಮಂಗಳ ಮಹಿಮನು ದೇವೋತ್ತುಂಗನು। ಚೆಲುವ ಗೋಪಿಯರ ಹೃದಯತರಂಗನು॥ 1 ॥ ನವನೀತ ಚೋರನು ಭಕ್ತ ಮಂದಾರನು। ನಂದನ ಕಂದ ತಂದೆ ಮುಕುಂದನು॥ 2 ॥ ಮಂದಹಾಸನು ಅರವಿಂದ ನಯನನು। ಸುಂದರ ವಿಗ್ರಹ ಭಕ್ತ ಮಂದಾರನು॥ 3 ॥ ಪಾರ್ಥಸಾರಥಿ ವಿಠ್ಠಲನು ಪತಿತ ಪಾವನನು। ವಂದಿಪ ಭಕ್ತರ ಅಂದದಿ ಪೊರೆವನು॥ 4 ॥

**ತೋರಿದ ರೂಪವ ಶಿರಿ** **ರಾಗ: ಸಾರಂಗ**

ತೋರಿದ ರೂಪವ। ಶಿರಿ ನರಸಿಂಹ। ಘೋರನಾದೆನ್ನಯ ಕರದೊಳು ನಿಂದೂ॥ಪ॥ ಕರಿಗಿರಿಯಿಂದಲಿ। ತ್ವರಿತದಿಂದಲಿ ಬಂದು।ತರಳಾಗೆ ಬೀರಿದ ಪರಮ ಹರುಷವಾ॥ಅ.ಪ.॥ ಶಂಖ ಚಕ್ರವ ಧರಿಸಿ। ಪಂಕಜಮಣಿಯೊಡನೆ। ಶಂಖಿಯ ಹರಿಸಲು। ಕರುಣದಿ ಸಾಧು ವರೇಣ್ಯ॥1॥ ಎಂದಿನಂದದಿಯೆನ್ನ। ಕನಸಿನಲಿ ನಿಂದು। ತಂದು ತೋರಿದ ತನ್ನ। ನಿಜಮಂದಿರವಾ। ಅಂದು ಆ ಭಕುತನ। ಹರಸಬೇಕೆಂದೆನುತ। ಬಂದ ದೈತ್ಯನ ಕರುಳ ಬಗೆದಾ। ನರಸಿಂಹ ದಾಸಾನುದಾಸರ। ಸಲಹ ಬೇಕೆಂದು॥2॥ ಆ ದೂರ್ವಾಸಮುನಿಯ। ಕರಗಾತವಾಗಿ। ನೆಲಸಿದೆ ಶಿರಿಯೊಡನೆ। ನೆಲಪಟ್ಟಣದಲ್ಲಿ। ರಘುರಾಮ ವಿಠಲಾನೆ ನಿನಗೆಣೆ ಕಾಣೆ॥3॥

**ರಥದಿ ಕುಳಿತಿಹ** **ರಾಗ: ನಾದನಾಮಕ್ರಿಯ**

ರಥದಿ ಕುಳಿತಿಹ ನೋಡಮ್ಮ । ಭೋಗಾ ನೃಸಿಂಹ॥ ಪರಮ ಪಾವನೆಯೊಡನೇ। ಕಡುಹರುಷದಿಂದಾ॥ ದಾಸರೆಲ್ಲನು ಕೂಡಿ। ಈಶಾ ಸಲಹೊ ಎಂದು। ಸಾಸೀರ ನಾಮದಿ। ಸ್ತುತಿಸಿ ಕೊಂಬುವ ಹರಿಯು। ಫಾಲ್ಗುಣ ಶುದ್ಧ। ಹುಣ್ಣಿಮೀಯಲೀ। ಭಕುತರಿಗೆ। ವಲಿದೂ। ದಾಸಸಮೂಹದಿ ಬೆರೆತೂ। ದಾಸಾನು ದಾಸರಾ। ಸೇವೆ ಕೈಗೊಳ್ಳುತಾ। ಪರಮಾನಂದದಿ ಕೂಡಿ। ಪರಿಪೂರ್ಣರೂಪನೂ। ಪ್ರಹ್ಲಾದ ವರದ ತಾನೂ। ಲಕುಮಿ ಒಡಗೂಡೀ। ನೆಲಪಟ್ಟಣದಿ ನೆಲಸೀ। ಬಂದು ರೂಪದಿ। ಯೋಗಮುದ್ರೆಯ ತೊಟ್ಟೂ। ಯೋಗಾಸನದಿಂ ಕುಳಿತು। ಯೋಗದಿಂದೊಪ್ಪುತಾ। ಯೋಗಾ ನೃಸಿಂಹನೂ। ದವನೋತ್ಸವ

ನೋಡಲೂ ಕಡು ಹರುಷದಿಂದಾ। ಬ್ರಹ್ಮಾದಿ ಸಮೂಹವೂ। ನಾರದಾದಿಗಳೆಲ್ಲಾ ಸ್ತೋತ್ರವ ಗೈಯ್ಯುವ। ರಘುರಾಮ ವಿಠ್ಠಲನು ಸೊಬಗಿನಿಂದೊಪ್ಪುತಾ॥

**ನರಹರಿ ಬಂದು ಮೂಡಿದಾ** **ರಾಗ: ಕಾಪಿ**

ನರಹರಿ ಬಂದು ಮೂಡಿದಾ। ಶರಣಗದಯವಾ ಮಾಡಿದಾ॥ಪ॥ ತಟತಟ ಬಿರಿಯಲು ಕುಂಭವವಳಗಿನ। ಛಟಛಟ ಶಬ್ದವ ತೋರುತಾ। ಕಟಕಟ ಬ್ರಹ್ಮಾಂಡಹೊಡೆಯಿತೋ ನೋಡಲು। ಪಟಪಟ ತಾರೆಗಳ್ಹಾರಲು ತಾ॥1॥ ಗುಡಗುಡ ಗುಟ್ಟಿ ಬಾಯೊಳಗಗ್ನಿಯ। ಧಡಧಡ ಕಿಡಿಗಳನುಗುಳುತಾ। ಗಡಬಡಿಸಲು ಸಮುದ್ರಗಳೆಲ್ಲವು। ಬುಡುಬುಡು ಗುಳ್ಳೆಗಳೇಳಲುತಾ॥2॥ ಫಳಫಳ ಭೂಮಿಯು ಬಿಚ್ಚಿತು ಗಿರಿಗಳು। ಹಳಹಳ ಕಲ್ಲುಗಳುದುರಿದುವು। ಭಳ ಭಳ ಭಾಸಮಗಡಿಶತ ತೇಜನ। ಥಳಥಳ ಮಿಂಚುಗಳಾಡಿದವು॥3॥ ಮಾಗ್ಗಿತು ಧನಿಯನು ಕೇಳುತ ಕೇಳವು। ಮುಗ್ಗಿತು ಕಂಗಾಣದೆ ಹಲವು। ಅಗ್ಗಳ ದೈತ್ಯರು ದೂರದಿ ಬಿಸುಟರು। ನುಗ್ಗಾದವು ಅವರಾಯುಧವು॥4॥ ಸರಸಿಜಭವ ಭವ ಸುರಮುನಿ ಇಂದ್ರರು। ಇರದೆವೆ ಮುರಿಯನು ಸಾರಿದರು। ಗುರುವರ ಮಹಿಪತಿ ನಂದನ ಸಾರಥಿ ಶರಣೆಂದೆನುತಲಿ ಹೊಗಳಿದನು॥5॥

**ಕಂಬದಲಿ ತೋರಿದನು ಬಾಲಕನು** **ರಾಗ: ವಸಂತ**

ಕಂಬದಲಿ ತೋರಿದನು ಬಾಲಕನು ಹರಿಯಾ। ಕುಂಭಿನಿಯೊಳೆಲ್ಲೆಲ್ಲು ತುಂಬಿರುವ ಪರಿಯಾ॥ಪ॥ ಸನಕಸನಂದರ ಘನಶಾಪದಿಂದ ದನುಜಾತಾ ಹುಟ್ಟಿದನು ಹಿರಣ್ಯಾಕ್ಷನನುಜ। ಆ ಶಾಪವಿಮೋಚನೆಗೆ ಕಾರಣನು ತಾನೆನುತ। ಪ್ರಹ್ಲಾದನು ಜನಿಸಿದನಾ ಖಳನಾ ಉದರದಲಿ॥1॥ ತರಳನ ಮನತುಂಬಿ ಹರಿನಾಮ ಬರಲು। ಜನಕ ತಾ ಬೋಧಿಸಿದ ಶಿವನಾಮ ಮಂತ್ರ। ತರಳಾ ತಾ ಬಿಡಲೊಲ್ಲ ಹರಿನಾಮ ಸ್ಮರಣೆ। ಕರಿರಾಜ ವರದ ಶ್ರೀ ನರಹರಿಯ ಭಜನೆ॥2॥ ಎಲ್ಲಿರುವನೋ ನಿನ್ನಯ ಹರಿಯ ತೋರೆನಲು। ಎಲ್ಲೆಲ್ಲು ತುಂಬಿಹನು ನೀನೇ ನೋಡೆನಲು। ಕಲ್ಲಿನಾ ಕಂಬವಾ ಕಾಲಿನಿಂದೊದೆದು। ಇಲ್ಲಿಯೇ ತೋರೆನುತ ನುಡಿದನಾ ಖೂಳಾ॥3॥ ನರಸಿಂಹ ರೂಪವ ತಾಳಿತಾ ಹರಿಯು। ಭರದಿ ಕಂಬವನೊಡೆದು ಬಂದು ನರಹರಿಯು। ಆ ದುರುಳಾ ರಕ್ಕಸನನ್ನು ತೊಡೆಯೊಳಗಿಟ್ಟು। ಕರುಳ ಬಗೆದು ತಾನು ಸರವಾಗಿ ಧರಿಸೆ॥4॥ ಅಂದು ಕಂದನ ಕರೆಗೆ ಕಂಬದಿಂ ತಾ ಬಂದು ಮುಂದೆ ವ್ಯಾಸರಿಗೊಲಿದು ಕುಣಿದಾ ಕಮಲೇಶ। ಇಂದು ವೀಣೆಯ ಮಧುರದಿಂಚರಕೆ ಮನಸೋತು। ಬಂದು ನಿಂದಿಹನು ವೇಣುನಾದ ಬೆರೆಸುತಲಿ॥5॥

**ಪ್ರಾದುರ್ಭವಿಸಿದ ನರಸಿಂಹನು ತಾ** **ರಾಗ: ವರಾಳಿ**

ಪ್ರಾದುರ್ಭವಿಸಿದ ನರಸಿಂಹನು ತಾ। ಕ್ರೋಧಾಕ್ಷಿಗಳಿಂದ ಜ್ವಾಲೆ ಸುರಿಸುತಾ॥ಪ॥ ಶ್ರೀಧರ ಸೌಮ್ಯ ತಾನಲ್ಲೆಂದು ಸಾರುತಾ। ಪ್ರಾಧಾನ್ಯವಾಗಿ ತನ್ನ ಜಿಹ್ವೆ ಹೊರ ಚಾಚುತಾ ॥ಅ.ಪ.॥ ಪ್ರಥಮ ಯುಗದಿ ಅಂಗೀರಸ ಸಂವತ್ಸರ। ಚತುರ್ದಶಿ ವೈಶಾಖ ಶುದ್ಧ ಮಂದವಾರ॥ ಹೊತ್ತು ಹೋಗಿ ಮುಸ್ಸಂಜೆ ಮುಸುಕಿರೆ। ಅತ್ಯುತ್ತಮ ಯೋಗ ಪರಿಘಾಸಂದಿರೆ॥1॥ ಪಟ ಪಟ ಮುಷ್ಟಿಯಿಂದ ಕಂಬವ ಹೊಡೆಯೆ। ಛಟಛಟವೆಂದು ಸ್ತಂಭವು ಸಿಡಿಯೇ॥ ತಟಿತ್ ತಟಿತ್ ಎಂದು ಮಿಂಚುಗಳ್ಹೊಳೆಯೇ। ದಿಟ ದಿಟ ಬರುವನೆಂದು ಪುಟ್ಟನು ನುಡಿಯೇ॥2॥ ಒಡನೆ ಬ್ರಹ್ಮಾಂಡ ಒಡೆದು ಹೋಗಲು। ತಡವಿಲ್ಲದೆ ಮಹ ಪ್ರಳಯ ಸಂಭವಿಸಲು॥ ಪೊಡವಿಪಾಲಕರೆಲ್ಲ ಗಡಗಡ ನಡುಗಲು। ಒಡೆಯ ಮಂಗಳಾಂಗ ಹರಿವಿಠಲ ಶ್ರೀಲೋಲ॥3॥

**ಕಂಬ ಸೀಳುತ ಬಂದ** **ರಾಗ: ರೇವತಿ**

ಕಂಬ ಸೀಳುತ ಬಂದ ನರಸಿಂಹ ನರಸಿಂಹ। ಖಳನ ಉದರವ ಸೀಳ್ದ ನರಸಿಂಹ ನರಸಿಂಹ। ಕರುಳ ಮಾಲೆಯ ಧರಿಸಿ ಹೂಂಕರಿಸಿ ಝೇಂಕರಿಸಿ। ಖಳಗೆ ಮುಕ್ತಿಯನ್ನಿತ್ತ ನರಸಿಂಹ ನರಸಿಂಹ। ನರಸಿಂಹ ಪಾಹಿಮಾಂ। ನರಸಿಂಹ ರಕ್ಷಮಾಂ॥1॥ ದೇವಾದಿದೇವರ್‌ಗಳು ದೇವ ದೇವನ ಉಗ್ರ। ರೂಪವನು ತಾ ಕಂಡು ಬೆದರುತಲಿ ನಡುಗುತಿರೆ। ದೇವ ದೇವನ ಅರಸಿ

ಮಹಾಲಕ್ಷ್ಮೀ ಜಗನ್ಮಾತಾ। ದೇವನೆಡೆ ಬಂದು ತಾ ಶಾಂತಿಯನು ಕೋರುತಿರೆ। ನರಸಿಂಹ ಪಾಹಿಮಾಂ ನರಸಿಂಹ ರಕ್ಷಮಾಂ।।2।। ವರಕುವರ ಪ್ರಹ್ಲಾದ ಭಕ್ತಿಯೊಳು ಸ್ತುತಿಸುತಿರೆ। ಘೋರರೂಪವನಿಳುಹಿ ಶಾಂತ ಸ್ವರೂಪಾಗಿ। ಅಭಯ ಹಸ್ತವ ಶಿರದೊಳ್ ಇಟ್ಟು ತಾ ಹರಸುತಿರೆ। ಜಯಘೋಷ ಎಲ್ಲೆಲ್ಲೂ ತುಂಬಿ ತಾ ತುಳುಕುತಿರೆ। ಶಂಖಚಕ್ರವ ಪಿಡಿದು ಶ್ರೀನಿಧಿಯು ಹೊಳೆಯುತಿರೆ। ನರಸಿಂಹ ಪಾಹಿಮಾಂ। ನರಸಿಂಹ ರಕ್ಷಮಾಂ।।3।। ಪುಷ್ಪವೃಷ್ಟಿಯ ದೇವರು ಮಳೆಯಂತೆ ಸುರಿಸುತಿರೆ। ಮಂಗಳವ ಪಾಡುತ್ತ ಆರತಿಯ ಬೆಳಗುತಿರೆ। ಶಾರದಾದಾಸಿ ವಂದಿತ ನರಸಿಂಹ ಸ್ತೋತ್ರವನು ಪಾಡಲು। ಶುಭಫಲವು ಎಲ್ಲರಿಗೂ। ದೊರಕುವುದು ನಿಜವಹುದು। ಇದು ಸತ್ಯ ಇದು ಸತ್ಯ ಇದು ಸತ್ಯ। ನರಸಿಂಹ ಪಾಹಿಮಾಂ। ನರಸಿಂಹ ರಕ್ಷಮಾಂ।।

**ಸಿಂಹರೂಪನಾದ ಶ್ರೀ ಹರಿ** **ರಾಗ: ಮಧ್ಯಮಾವತಿ**

ಸಿಂಹರೂಪನಾದ ಶ್ರೀ ಹರಿ ನಾಮಗಿರೀಶನೆ।।ಪ।। ಒಮ್ಮನದಿಂದಲಿ ನಿಮ್ಮನು ಭಜಿಸೇ। ಸಮ್ಮತದಿಂದಲಿ ಕಾಯ್ವ ನರಹರೇ।।ಅ.ಪ।। ತರಳನು ಕರೆಯೇ ಸ್ಥಂಭವು ಬಿರಿಯೇ। ತುಂಬ ಉಗ್ರವನು ತೋರಿದನು। ಕರುಳನು ಬಗೆದು ತನ್ನ ಕೊರಳೊಳಗಿಟ್ಟು। ತರಳನ ಸಲಹಿದ ಶ್ರೀ ನರಸಿಂಹನೇ।।1।। ಭಕ್ತರೆಲ್ಲ ಕೂಡಿ ಬಹುದೂರ ಓಡಿ। ಪರಮ ಶಾಂತಿಯನು ಬೇಡಿದರು। ಕರೆತಂದು। ಸಿರಿಯನು ತೊಡೆಯಮೇಲ್ ಕುಳ್ಳಿರಿಸಿ। ಪರಮ ಹರುಷ- ವನು ಪೊಂದಿದ ಶ್ರೀಹರಿ।।2।। ಜಯ ಜಯ ಜಯವೆಂದು ಹೂವನೆ ತಂದು। ಹರಿ ಹರಿ ಹರಿ ಎಂದು ಸುರರೆಲ್ಲ ಸುರಿಯೆ। ಭಯ ನಿವಾರಣ ಭಾಗ್ಯ ಸ್ವರೂಪನೆ। ಪರಮ ಪುರುಷ ಶ್ರೀ ಪುರಂದರ ವಿಠಲನೆ।।2।।



**ನಾರಸಿಂಹನೆಂಬೊ ದೇವನು** **ರಾಗ: ಆನಂದಭೈರವಿ**

ನಾರಸಿಂಹನೆಂಬೊ ದೇವನು। ನಂಬಿದಂಥ ನರರಿಗೆಲ್ಲಾ ವರವ ಕೊಡುವನು।।ಪ।। ಆದಿಯಲ್ಲಿ ಲಕ್ಷ್ಮಿ ಸಹಿತದಿ ಮಲಗಿರಲು। ಬಂದರಾಗ ಸನತ್‌ಕುಮಾರರು। ಆಗ ದ್ವಾರಪಾಲಕರು ತಡೆಯಲಾಗ ಕೋಪದಿಂದ। ಮೂರು ಜನ್ಮದಲ್ಲಿ ನೀವು ಅಸುರರಾಗಿ ಪುಟ್ಟಿರೆಂದರು।।1।। ದಿತಿಯ ಗರ್ಭದಲ್ಲಿ ಜನಿಸಿದ ಹಿರಣ್ಯಾಕ್ಷ ಹಿರಣ್ಯಕಶಿಪುರೆಂಬ ಭ್ರಾತೃರು। ಪೃಥ್ವಿಯನ್ನು ಮುಳುಗಿಸಿದ ಕಾರಣಾದಿ ಶ್ರೀಹರಿಯು। ತೃತೀಯ ರೂಪದಿಂದ ಖಳನ ಕೊಂದು ಧರೆಯನುಳಿಹಿದನು।।2।। ಅನುಜನಾದ ಹಿರಣ್ಯಾಕ್ಷನ ಮರಣವನ್ನು ಕೇಳಿ ಆಗ ನಡೆದ ತಪಸಿಗೆ। ಹರಿಯ ಮೇಲೆ ಸಿಟ್ಟಿನಿಂದ ಉಗ್ರ ತಪಸ್ಸನ್ನು ಮಾಡಿ ಬ್ರಹ್ಮನಿಂದ ವರಗಳನ್ನು ಪಡೆದುಕೊಂಡು ಬಂದನಾಗ।।3।। ಇಂದ್ರಲೋಕ ಸೂರೆ ಮಾಡಿದ।। ಮೂರು ಲೋಕಕೆ ಅಸುರ ತನ್ನ ಭಯವ ತೋರಿದ।। ಗರ್ಭಿಣಿ ಕಯಾದುವನ್ನು ಬ್ರಹ್ಮಪುತ್ರ ಬಂದು ಆಗ। ದೈತ್ಯರಾಜ ಹಿರಣ್ಯಕಶಿಪುವಿಗೆ ಒಪ್ಪಿಸಿದನು।।4।। ನವಮಾಸಗಳು ತುಂಬಲು। ಕಯಾದು ಆಗ ಪುತ್ರರತ್ನವನ್ನು ಪಡೆದಳು।। ನಾಮಕರಣವನ್ನು ಮಾಡಿ ವಿಪ್ರರನ್ನು ಕರೆಸಿ ಬೇಗ। ದೈತ್ಯ ತನ್ನ ಸುತಗೆ ಪ್ರಹ್ಲಾದನೆಂದು ಕರೆಸಿದನು।।5।। ಬಾಲಚಂದ್ರನಂತೆ ಹೊಳೆಯುತಾ ಇರುತಿರಲು ಐದು ವರ್ಷ ತುಂಬಿತಾಗಲೇ। ಗುರುಗಳನ್ನು ಕರೆಸಿ ಬೇಗ ಸಕಲ ವಿದ್ಯೆ ಕಲಿಸಿರೆಂದು। ಗುರುಗಳಿಗೆ ಮಗನನ್ನು ಒಪ್ಪಿಸಿದ ದೈತ್ಯ ತಾನು।।6।। ಓಂ ನಮಃ ಶಿವಾಯ ಎನುತಲಿ। ಅಸುರ ತನ್ನ ಸುತನ ಬರೆದು ತೋರು ಎಂದಾಗ।। ನರಹರಿಯ ನಾಮವನ್ನು ನಗುನಗುತಲೆ ಬರೆಯುತ್ತಿರಲು। ಎಡದತೊಡೆಯ ಮೇಲೆ ಶಿಶುವ ಧರೆಗೆ ಬಡೆದು ನೂಕಿದನು।।7।। ಸುತ್ತು ಜನರ ಕರೆಸಿ ಬೇಗದಿ ಅಸುರ ತನ್ನ। ಸುತನ ಕೊಲ್ಲಿಸಬೇಕೆಂದಾಗ।। ಅಟ್ಟ ಅಡಿಗೆಯೋಳ್ ವಿಷವನಿಟ್ಟು ಭೋಜನಂಗಳ್ ಮಾಡಿ। ಹರಿಯ ಸ್ಮರಣೆ ಮಾಡುತಲೆ ಕುಂಜಿ ತಿಳಿದ ಜಟ್ಟಿ ಹಾಂಗೆ।।8।। ಅಂಬುಧಿಯೋಳ್ ಮಗನ ಮಲಗಿಸಿ। ಮೇಲೆ ದೊಡ್ಡ ಬೆಟ್ಟವನ್ನು ಇಟ್ಟು ಬನ್ನಿರೊ। ಹರಿಯ ಕೃಪೆಗೆ ವಶನಾದ ತರಳನೆಂದು ವರುಣದೇವ ಮರಣಇಲ್ಲದ್ಹಾಗೆ ಮಾಡಿ ಮನೆಗೆ ಕೊಟ್ಟು ಕಳುಹಿದನು।।9।। ಬೆಟ್ಟದಿಂದ ಕಟ್ಟಿ ಉರುಳಿಸಿ ಅಸುರ ತನ್ನ। ಪಟ್ಟದಾನೆ ಕಾಲಲಿ ಮೆಟ್ಟಿಸಿ। ಹರಲು ಮನೆಯ ಮಾಡಿ ಸುಟ್ಟು ಹುಲಿಯ ಬೋನಿನಲ್ಲಿ ಇಟ್ಟು। ಯತ್ನವಿಲ್ಲದೆ ಸುತನ ಕೊಲ್ಲಲಿಕ್ಕೆ ಶಕ್ತನಲ್ಲದೆ ಪೋದನಂತೆ।।10।। ನಿನ್ನ

ದೇವ ಇದ್ದ ಎಡೆಯನು ತೋರು ಎನುತ। ಪಿತನು ತನ್ನ ಸುತನ ಕೋರಲು॥ ಎನ್ನ ದೇವ ಇಲ್ಲದಂಥ ಎಡೆಗಳುಂಟೆ ಲೋಕದಲ್ಲಿ। ಕಂಬದಲ್ಲು ಇರುವನೆಂದು ಕೈಯಮುಗಿದು ತೋರ್ದನಾಗ॥11॥ ವರ ಕಂಬವನ್ನು ಒದೆಯಲು ನರಹರಿಯು। ಉಗ್ರಕೋಪವನ್ನು ತಾಳಿದ ಕಟಕಟೆಂಬ ಧ್ವನಿಯಮಾಡಿ ನಖಗಳಿಂದ ಪಿಡಿದು ಒತ್ತಿ। ಕರುಳ ಬಗಿದು ಮಾಲೆ ಹಾಕಿ ಕಂದ ಭಕ್ತ ನಪ್ಪಿಕೊಂಡ॥12॥ ಅಂತರಿಕ್ಷದಲ್ಲಿ ಅಮರರು ನೋಡಿ ಆಗ। ಪುಷ್ಪವೃಷ್ಟಿಯನ್ನೆ ಕರೆಯಲು। ಅಜನ ಪಡೆದ ದೇವಿ ಬಂದು ತೊಡೆಯ ಮೇಲೆ ಕುಳಿತುಕೊಂಡು। ಅಮರಪತಿಯರೆಲ್ಲ ನೋಡಿ ಅಂಜಬೇಡೆಂದಭಯ ಕೊಟ್ಟ॥13॥ ಲಕ್ಷ್ಮೀನಾರಸಿಂಹನ ಚರಿತೆಯ। ಉದಯಕಾಲ ಪಠಿಸುವಂಥ ನರರಿಗೆಲ್ಲ॥ ಪುತ್ರಸಂತಾನಂಗಳಿತ್ತು ಮತ್ತು ಬೇಡಿದ್ದಾಗೆ ಕೊಟ್ಟು ಭಕ್ತವತ್ಸಲ ಮುಕ್ತಿಕೊಡುವ ಪುರಂದರ ವಿಠ್ಠಲರಾಯ॥14॥

**ಹರುಷದಿಂದಲಿ ಹಿರಣ್ಯಕಗೆ (ಪ್ರಹ್ಲಾದ ಚರಿತ್ರೆ)** **ರಾಗ: ಆನಂದಭೈರವಿ**

ಹರುಷದಿಂದಲಿ ಹಿರಣ್ಯಕಗೆ। ನಾರದರು ಬಂದು ನಿನ್ನರಸಿ ಗರ್ಭಿಣಿ ಎನಲು। ನಿನ್ನ ಹೊಟ್ಟೇಲಿ ಪ್ರಹ್ಲಾದ ಹುಟ್ಟುವನು। ನಿನ್ನ ಕುಲಕೆ ಮೃತ್ಯು ತಂದಾನು॥ ಅವನಿಂದ ಮರಣ ನಿನಗೆ। ಎಂಬುದನೆ ಕೇಳಿ ಕರೆಸಿದಾತನ್ನ ಭೃತ್ಯರ॥1॥ ಬಂದು ನಿಂತರು ಚಾರಕರು। ಕರಗಳನೆ ಮುಗಿದು। ನಿಂದು ವೃತ್ತವ ಹೇಳೆನಲು। ಹತ್ತೆಂಟಾಷದಿ ಮತ್ತೆ ತನ್ನಿರೆಂದ। ಒಪ್ಪದಿಕುಟ್ಟಿಹದ ಮಾಡಿರೆಂದ। ಗರ್ಭವಿಘಾತಮಾಡೆಂದ। ಪ್ರಹ್ಲಾದನು ತಾನು ಉತ್ಪತ್ತಿಯಾಗಿ ಜನಿಸಿದನು॥2॥ ಹೆತ್ತತಾಯಿಗೆ ಮುತ್ತೈದೇರ್ ಬಂದು ಉತ್ತಮ ಪ್ರಹ್ಲಾದಗೆ ನೀರೆರೆದು ಮುತ್ತಿನ ತೊಡಿಗೆ ತೊಡಿಸಿದರಾಗ। ಒಂದರ್ಥಿ ಓಲಗದಿಂದಲಿ ಪ್ರಹ್ಲಾದನು ತಾನು ಶುಕ್ಲಚಂದ್ರಮನ ಸೂಸುತ್ತ॥3॥ ಮುತ್ತು ತುಂಬಿ ಹರಿವಾಣದೊಳಗಿಟ್ಟು। ಒಪ್ಪದಲಡ್ಡಿಗೆ ಐದುಂಡೆಗಳ ಸಕ್ಕರೆ ಬಿಳಿಎಳ್ಳು ಕಬ್ಬುಗಳ ಮತ್ತೆ ಸರಸ್ವತಿ ಗಣಪಗೆ ಪೂಜೆಗಳನುಮಾಡಿ। ಅಕ್ಷರಗಳ ಬರೆದರು॥4॥ ಓಂ ನಮಃ ಶಿವನೆಂದು ಬರೆ ಬೇಗೆಂದರೆ। ಓಂ ನಮೋ ನಾರಾಯಣನೆಂದೇ ಬರೆಯುವನು। ಹಾಗಲ್ಲೋ ನಮ್ಮ ಶಿವನೆಂದು ಬರೆಯೆನೆ। ಶ್ರೀ ನಮೋನಾರಾಯಣ॥5॥ ಬರೆದಕ್ಷರವ ನೋಡಿದನಸುರ। ಎದೆ ಝಲ್ಲೆಂದು ಮೂರ್ಛೆಗೈದನು। ವರಚಿತ್ರ ಮಂಟಪದಿ ಒರಗಿದನು ಗುರುಮೂರ್ತಿಗಳು ಮೂರ್ಛೆಕಳೆಯಲು। ಬಲುಕ್ರೋಧ ಮನದಿ ತಂದು। ಪ್ರಹ್ಲಾದನ ನೋಡಿ। ಸುಡಿಸುವೆ ನಿನ್ನನೆಂದಾ॥6॥ ಜನನೀ ಖಯಾದು ಕಂಡಳು। ಪ್ರಹ್ಲಾದನ ಧೂಳ। ತೊಡೆದು ಎತ್ತಿಕೊಂಡಳು। ಶುಕ್ಲ ಉದಯಕೆ ಏಳು ಪ್ರಹ್ಲಾದನೆ। ಬಿಡುಬಿಡು ಹರಿಯೆಂಬೊ ಶಬ್ದವನು। ನಿಮ್ಮಯ್ಯನ ವೈರಿ ಹರಿಯು ಎಂದೊಡೆ। ರಕ್ಕಸಮಕ್ಕಳ ಬಳಿಗೆ ನಡೆತಂದ। ಮತ್ತೆ ಶಿವಶಿವ ಎನ್ನು ಎನ್ನಲು ಹರಿಹರಿ ಎಂದು ದಿಟ್ಟ ಪ್ರಹ್ಲಾದ ತಾ ನಿಂತ॥7॥ ಹಿರಣ್ಯಕ ದೂತರಿಗಪ್ಪಣೆಕೊಡಲು। ಗಿರಿಗಹ್ವರದೊಳುಉರುಳಿಸಿ ಬಿಟ್ಟರೂ ಹರಿಹರಿ ಎಂದರೆ ಪಾಶಗಳು ಕಳೆದ್ಹೋಗಲು। ಸೆಳೆದುತಂದಾರು ಬೇಗನೆ। ಸಮುದ್ರದ ಒಳಗೆ ಹಾಕಿರೆಂದನು॥8॥ ಕೃಷ್ಣಹರಿ ರಾಮ ಎನ್ನುತ ಆಡುತ್ತ ಪ್ರಹ್ಲಾದನು। ದೃಷ್ಟಿಗೆ ಬಂದುನಿಂತ। ವಿಷದ ಲಡ್ಡಿಗೆ ಅನ್ನವು ವಿಷಗಳನೆ ಕುಡಿಸಿ। ಸುಡಿಸಿದ ಶ್ರಮದಿಂದಲಿ ಮದದಾನೆಯ ಕಾಲಿಗೆ ಕಟ್ಟಿಸಿದರೆ। ಓಡಿ ಬಂದು ನಾರಾಯಣನೆಂದಾಡಿದನು। ಹಿಡಿತಂದು ಸರ್ಪವ ಕಚ್ಚಿಸಿದರೆ। ಲಕ್ಷ್ಮೀನಾರಾಯಣನೆಂದಾಡಿದನು॥9॥ ತೋರೋ ನಿನ್ನೊಡೆಯನೆಂದಾ। ಎನ್ನೊಡೆಯನು ಇಹನೀನವರತ್ನ ಕಂಭದಲಿ। ಪ್ರತ್ಯಕ್ಷನೋಡೆಂದನು। ಸೃಷ್ಟಿನುಂಗುವಕೋಪದಿ ಬಂದು। ಉಕ್ಕಿನ ಕಂಭವ ಕಾಲಲಿ ಒದ್ದ। ಹಿರಣ್ಯಕನ ದರ್ಪವನೋಡೆಂದನು॥10॥ ಘುಡುಘುಡು ಘುಡುಗುಟ್ಟುತಾ। ನರಸಿಂಹಸ್ವಾಮಿ ಜಗಕೆ ಘರ್ಜನೆಯತೋರುತ್ತ। ಅಷ್ಟಭುಜಗಳಾ ಎತ್ತಿತೋರುತ। ದೃಷ್ಟನ ಇರುವಿಕೆ ಅರಿದ್ರೆನೆಂದೆನುತ। ಒಂದಷ್ಟು ವದನವನೆ ತೆಗೆದನು ನರಸಿಂಹಸ್ವಾಮಿ। ದುಷ್ಟ ಹಿರಣ್ಯಕನನ್ನು। ಅವನ್ನೆತ್ತಿ ತೊಡೆಯೊಳಿಟ್ಟನು। ನಖಗಳನೆ ಒತ್ತಿ ದುಷ್ಟನ ಕರುಳ ಬಗೆದ॥11॥ ಮಂಗಳ ಮೂರುತಿ ನರಸಿಂಹಸೀಳ್ದ। ಕೊಂದಸುರನ ರಕ್ತವಪೂಸಿದನು। ಒಂದೇ ಸಲದಿ ಯಮಲೋಕಕೆ। ಕಳುಹಿದನು। ಭೃಂಗನರಸಿಂಗಸೀಳ್ದನು। ಕರುಳಮಾಲೆಯ ತನ್ನ ಅಂಗಕ್ಕೆ ಧರಿಸಿದನು॥12॥ ಉರಗ ವೈಜಯಂತಿವನಮಾಲೆ। ಕರುಳ್ಮಾಲೆಯ ತನ್ನ ಕೊರಳಲ್ಲಿ ಧರಿಸಿದನು। ಹದಿನಾಲ್ಕು ಭುವನಂಗಳ ನಡುವೆ। ಸುರದುಂದುಭಿಗಳು ಮೊಳಗುತಲಿರಲು। ಸುರರು ಕಂಗೆಟ್ಟು ಓಡಾಡೆ। ನರಸಿಂಹನ ನೋಡಿ। ಜಯಜಯಜಯವೆಂದರು॥13॥ ಈತನೇ ಶ್ರೀಪತಿಯು ಗತಿಯೆಂದು। ಶೃಂಗಾರದ ಲಕ್ಷ್ಮಿ

ಭಯದಿಂದ ಬಂದು ನಿಂತ್ಲು। ಸ್ತ್ರೀ ಅಂಜಿದಳೆಂದು ನಯನವ ಮುಚ್ಚಿ। ವದನವ ಪಾಲಿಸಿ। ಶ್ರೀಯ ಪಾಲಿಸಿಕೊಂಡನು।। ನರಸಿಂಹ ಮೂರುತಿ ಶಾಂತಮೂರುತಿಯಾದನು।। ಪ್ರಹ್ಲಾದನ ಕರೆದು ತನ್ನ ತೊಡೆಯೊಳಿಟ್ಟನು।।114।। ಸೃಷ್ಟಿ ಪಾಲಿಪೆನೆಂದು ದುಷ್ಟ ಸಂಹಾರಕ। ಮುದ್ದು ಮೂರುತಿ ವರದವಿಠಲನೆಂದು। ಉಭಯ ಕಾವೇರಿ ಮಧ್ಯದಿ। ಪಶ್ಚಿಮ ರಂಗನ। ವರಮೂರುತಿ ಪುರಂಧರವಿಠಲನ ಕಂಡರು।।15 ।।

**ಭಳಿರೆ ಭಳಿರೆ ನಾರಸಿಂಹ** **ರಾಗ: ಹಂಸಧ್ವನಿ**

ಭಳಿರೆ ಭಳಿರೆ ನಾರಸಿಂಹ ಮಹಸಿಂಹ।।ಪ।। ಮಲಮಲಾ ಮಲತವರ ವೈರಿ ಉರಿ ಮಾರಿ।।ಅ.ಪ.।। ನಗನಗ ನಗಗಳಲ್ಲಾಡೆ ಚತುರ್ದಶ। ಜಗಜಗಜಗವೆಲ್ಲ ಕಂಪಿಸಿ ಕೆಂಪಾಗೆ। ಹಗೆಹಗೆ ಹಗೆ ಬಲವ ದಶೆಗೆಡಿಸಿ ರೋಷನೀಡಿ। ಉಗುಉಗುಉಗುಳುತ್ತ ಬಂದ ನರಸಿಂಹ।।1।। ಬಿಗಿಬಿಗಿಬಿಗಿದು ಹುಬ್ಬಗಂಟನೆ ಹಾಕಿ। ಹೊಗೆಹೊಗೆಹೊಗೆ ಸುತ್ತೆ ಸರ್ವರು ಅಂಜೇ। ನೆಗೆನೆಗೆನೆಗೆ ನೆಗೆದು ಕುಪ್ಪಳಿಸಿ ಅಸುರನ್ನ। ಮಗುಮಗು ಮಗು ಬೇಡಿಕೊಂಡ ನರಸಿಂಹ।।2।। ಉಗು ಉಗು ಉಗುರಿಂದ ಕ್ರೂರನ್ನಹೇರೊಡಲ। ಬಗೆಬಗೆಬಗೆ ಬಗೆದು ರಕುತವನ್ನು। ಉಗಿ ಉಗಿ ಉಗಿ ಉಗಿದು ಚೆಲ್ಲಿ ಕೊರಳಿಗೆ ಕರುಳ। ತೆಗೆ ತೆಗೆ ತೆಗೆ ತೆಗೆದು ಇಟ್ಟ ನರಸಿಂಹ।।3।। ಯುಗ ಯುಗ ಯುಗದೊಳಗೆ ಪ್ರಣತಾರ್ತಿಹರನೆಂದು। ಝುಗಝುಗ ಝುಗ ಝುಗಿಪ ಮಕುಟ ತೂಗೆ। ನಗು ನಗು ನಗು ನಗುತ ಸುರರು ಗಗನದಿ ನೆರೆದು। ಮಿಗಿ ಮಿಗಿ ಮಿಗಿಲೆನೆ ನಾರಸಿಂಹ।।4।। ಒಂದೊಂದೊಂದೊಂದು ಮುನಿಗಳಿಗೆ ಒಲಿದು। ಅಂದಂದಂದಂದದಿ ಗಾಯತ ಒಲಿದು। ಅಂದರಿದಂದಂದಂದವ ಕಾವ ಚೋಳಿಂಗಿರಿ। ಮಂದಿರನೇ ವಿಜಯವಿಠಲ ನಾರಸಿಂಹ।।

**ರಂಗ ಮಾನವ ಸಿಂಗನಾದನು** **ರಾಗ: ಕಾಂಬೋಧಿ**

ರಂಗ ಮಾನವ ಸಿಂಗನಾದನು।।ಪ।। ರಂಗ ಮಾನವ ಸಿಂಗನಾಗಲು। ಭಂಗಾರ ಗಿರಿಯ ಶೃಂಗಗಳಲ್ಲಾಡೆ। ಹಿಂಗದೆ ಎಂಟು ಮಾತಂಗ ಸಪುತ ದ್ವೀ। ಪಂಗಳು ಕಂಪಿಸೆ ವಿಗಡದಿ।।ಅ.ಪ.।। ವನಜ ಭವನಂದ ನರಾನಂದದಿ। ವನಧಿಯೊಳಿದ್ದ ವನಜನಾಭನ। ವನಜಾಂಘ್ರಿ ದರುಶನಕ್ಕೋಸುಗದಿ। ಘನ ವೈಕುಂಠ ಪಟ್ಟಣ ಸಾರೆ। ವಿನಯರಲ್ಲಿದ ಜಯನು ವಿಜಯವ। ರನು ತಡೆಯಲು ಮುನಿದೀರ್ವರಿಗೆ। ದನುಜಾಂಗದಿಂದ ಜನಿಸಿರೋ ಎಂದು। ಮುನಿಗಳು ಶಾಪವನ್ನು ಈಯೆ।।1।। ದಿಕ್ಕು ಎಂಟರೊಳು ರಕ್ಕಸರೆನಿಸಿ। ದಿಕ್ಕುಪಾಲಕರ ಲೆಕ್ಕಿಸದಲೇವೆ। ಸೊಕ್ಕಿ ತಿರುಗುವ ರಕ್ಕಸರಾಗಲು। ಮುಕ್ಕಣ್ಣ ಬಲದಿಂದೆಕ್ಕೆ ಜದಿ। ನಕ್ಕು ಪರಿಹಾಸ್ಯಕಿಕ್ಕಿ ಸರ್ವರನು। ಚಕ್ರವರ್ತಿಯಾಗಿ ವಕ್ರರ ಶೌರ್ಯದಿ। ಮುಕ್ಕಿ ಮುಣಗಿ ಧರ್ಮಕೆ ವಿರೋಧಿಸಿ। ಸಿಕ್ಕದಂತಲ್ಲಲ್ಲಿ ತುಕ್ಕುತಿರೆ।।2।।ಇತ್ತ ಶಾಪದಿಂದಲಿತ್ತ ಲೀರ್ವರಿಗಾ। ಪೊತ್ತ ಸುರಾಂಗದಲಿತ್ತ ಲೋರ್ವನಿಯು। ಕಿತ್ತು ಒಯ್ಯಲು ಬೆಂಬತ್ತಿ ಹರಿಯು ಕೊಲ್ಲೆ। ಇತ್ತ ಹಿರಣ್ಯನುನ್ಮತ್ತದಿಂದ। ಸುತ್ತುತಿರುವಾಗ ಪುತ್ರನು ಭಾಗವ। ತೋತ್ತಮನಾಗಿ ಸರ್ವೋತ್ತಮ ಬ್ರಹ್ಮನ। ಪೆತ್ತ ಹರಿಯೆಂದು ಎತ್ತಿ ಕರೆವಲೋ। ಕತ್ರಯವರಿವಂತೆ ಬಿತ್ತಿದನು।।3।। ಸೊಲ್ಲು ಕೇಳುತಲಿ ಎಲ್ಲೆಲ್ಲೊ ನಿನ್ನ ದೈ। ವೆಲ್ಲೊ ಮತ್ತಾವಲ್ಲೆಲ್ಲಿಹನೆನುತಲಿ। ನಿಲ್ಲದರ್ಭಕನ್ನ ಕಲ್ಲುಕೊಳ್ಳಿ ಮುಳ್ಳು। ಭಲ್ಲೆ ಕರವಾಳ ಬಿಲ್ಲು ನಾನಾ। ಎಲ್ಲಿ ಬಾಧೆಯನ್ನು ನಿಲ್ಲದೆ ಬಿಡಿಸೆ। ಎಳ್ಳನಿತಂಜದೆ ಎಲ್ಲೆಲ್ಲಿಪ್ಪನೆಂದು। ಪುಲ್ಲಲೋಚನ ಶ್ರೀವಲ್ಲಭ ಎನ್ನಯ। ಸೊಲ್ಲನು ಬೇಗದಿ ಸಲ್ಲಿಸೆನೆ।।4।। ಏನು ಕರುಣಾಳೊ ಏನು ದಯಾಬ್ಧಿಯೊ। ಏನು ಭಕ್ತರಾಧೀನನೊ ಏನೇನು। ನಾನಾ ಮಹಿಮನೊ ಏನೇನು। ಏನೊ ಈತನಲೀಲೇ ಕಡೆಗಾಣರಾರೊ। ದಾನವಾಭಾಸನ ಮಾನಹಾನಿಗೈಯೆ। ಸ್ಥಾಣು ಮೊದಲಾದ ಸ್ಥಾನದಲ್ಲಿ ಸರ್ವ। ನಾನೆ ವ್ಯಾಪ್ತನು ಎಂಬಾ ನುಡಿತೋರುತ್ತ। ದೀನರಿಗೆ ದತ್ತ ಪ್ರಾಣನಾಗ।।5।। ತುಟಿಯು ನಡುಗೆ ಕಟಕಟ ಪಲ್ಲು। ಕಟನೆ ಕಡಿದು ನೇಟನೆ ಚಾಚುತ। ಪುಟಪುಟ ನಸಪುಟದ ರಭಸ। ಕಠಿಣ ಹೂಂಕಾರ ಘಟುಕಾರ। ನಿಟಿಲ ನಯನ ಸ್ಫುಟಿತ ಕಿಗ್ಗಿಡಿ। ಮಿಟಿಯೆ ಹುಬ್ಬಿನ ನಿಟಿಲ ರೋಷದಿ। ಮಿಟಿಯೆ ಚಂಚು ಪುಟದಂತೆರೋಮ। ಚಟುಲ ವಿಕ್ರಮುದ್ಧಟ ದೈವ।।6।। ನಡು ಕಂಭದಿಂದ ಒಡೆದು ಮೂಡಿದ। ಕಡು ದೈವವು ಸಂಗಡಲೆ ಚೀರಲು। ಬಡ ಜೀವಿಗಳು ನಡುಗಿ ಭಯವ। ಪಡುತಲಿ ಬಾಯ ಬಿಡುತಿರೆ। ಕಡೆಯೆಲ್ಲೊ ಹೆಸರಿಡಬಲ್ಲವರಾರೊ। ತುಡುಗಿ

ದುಷ್ಟನ ಪಡೆದವರವ। ಪಿಡಿದು ಅವನ ಕೆಡಿಸಿ ಹೊಸ್ತಿಲೊ। ಳಡಗೆಡಹಿದನು ಪವಾಡದಲಿ।।7।। ವೈರಿಯ ಪಿಡಿದು ಊರುಗಳಲ್ಲಿಟ್ಟು। ಘೋರ ನಖದಿಂದ ಕೊರೆದು ಉದರವ। ದಾರುಣ ಕರುಳ ಹಾರ ಕೊರಳಲ್ಲಿ। ಚಾರುವಾಗಿರಲು ಮಾರಮಣ। ಸಾರಿಗೆ ಭಕ್ತಗೆ ಕಾರುಣ್ಯಮಾಡಿ ಶ್ರೀ। ನಾರೀಶನಾನಂದದಿ ತೋರುತಿರೆ ಸುರ। ವರನ್ರರೆದು ಅಪಾರ ತುತಿಸಿ ಪೂ। ಧಾರೆ ವರುಷ ವಿಸ್ತಾರ ಗೈಯೆ।।8।। ನೃಕೇಸರಿಯಾಗ ಭಕುತಗೆ ಬಂದ। ದುಃಖವ ಕಳೆದು ಸುಖವ ನೀವುತ್ತ। ಅಕಳಂಕದೇವ ಲಕುಮಿಪತಿ ತಾ। ರಕ ಮಂತ್ರಾಧೀಶ ಸುಕುಮಾರ। ಅಖಿಳ ಲೋಕ ಪಾಲಕ ಪ್ರಹ್ಲಾದಗೆ। ಸಖನಾಗಿ ಇಪ್ಪ ಸಕಲ ಕಾಲದಿ। ಶಕಟ ಭಂಜನ ವಿಜಯವಿಠ್ಠಲ। ಮುಕುತಿ ಈವ ಭಜಕರಿಗೆ।।9।।

**ಪ್ರಹ್ಲಾದವರದ ಭಯಗಜಕೆ** **ರಾಗ: ಕಾಂಬೋಧಿ-ಝಂಪೆತಾಳ**

ಪ್ರಹ್ಲಾದವರದ ಭಯಗಜಕೆ ಸಿಂಹಪರಮ। ಆಹ್ಲಾದ ಪದವಿತ್ತು ಪೊರೆಯೊ ನರಸಿಂಹ।।ಪ।। ಹಿಂದೆ ಹಿರಣ್ಯಕನುದರದಲಿ ಜನಿಸಿ ಪ್ರಹ್ಲಾದ। ನೊಂದವನ ಬಾಧೆಯಲಿ ಮರಗಿ ಕೊರಗಿ। ಇಂದಿರೇಶ ಸಲಹೆನಲು ಗಾಢ ಸ್ತಂಭದ- ಲೊದಗಿ। ಬಂದವನುದರ ಬಗಿದು ರುಧಿರವನು ಸವಿದೆ।।1।। ಅಸುರ ಕೆಡೆಲದ ಕಂಡು ಅತಿ ಹರುಷದಿಂದ ತ್ರಿ-ದಶರಂಬರದಿ ಪೂಮಳೆ ಗರೆಯಲು। ಶಿಶುವೇಕ ಮಾನಸದಿ ಮೊರೆಹೊಕ್ಕು ಪೊಗಳುತಿರೆ। ಬಿಸಜಾಕ್ಷನ ಕರುಣದಿಂದವನ ಸಲಹಿದೆಯಾಗಿ।।2।। ಹಲವು ಯೋನಿಗಳಲ್ಲಿ ತಿರುಗಿ ಬಳಲಿದೆನಯ್ಯ। ನಳಿನಾಕ್ಷ ನಿಮ್ಮ ಗುರುತವ ಕಾಣದೆ। ಇಳೆಯಲ್ಲಿ ದ್ವಿಜನಾಗಿ ಪುಟ್ಟಿ ತವ ಪದವಿಡಿದೆ। ಗೆಲಿಸು ಭವ ದುರಿತವ ಪ್ರಸನ್ವೆಂಕಟ ನರಸಿಂಹ ।।3।।

**ಶ್ರೀ ನರಸಿಂಹ ದೇವ ಶರಣ ರಕ್ಷಕನೆ** **ರಾಗ: ಸಾಮ**

ಶ್ರೀ ನರಸಿಂಹ ದೇವ ಶರಣ ರಕ್ಷಕನೆ ದಾನವಾರಿ ಸುಭಕ್ತಾಧೀನ ಮೂರುತಿಯೆ।।ಪ।। ಹರಿ ತನ್ನ ದೈವವೆಂದು ಸ್ಮ ರಿಸುತಿರಲು ಬಾಲನಿರವ ಕಾಣದೆ ದುಷ್ಟಹಿರಣ್ಯಕಾಸುರನು। ಪರಿಪರಿ ಹಿಂಸಿಸೆ ಮೊರೆದು ಕೋಪದೊಳೆದ್ದು ತರಳಗೊಲಿದೆ ಬಹು ಕರುಣಾನಿಧಿಯೆ।।1।। ಛಿಟಿಛಿಟಿಲೆಂದಾರ್ಭಟಿಸಿ ಸಿಡಿಯೆ ಕಟಿಕಟಿ ಮಸಿದಗ್ನಿ ನಿಟ್ಟುಸಿರಿನಿಂ ಹಲ್ಗಳ ಕಟಿ ಕಟಿ ಕಡಿವುತುಬ್ಬಸ ತೋರಿನಿಂದ ಕಠಿಣ ಮೂರುತಿಯೆ।।2।। ಕೊಬ್ಬಿದ ಹಿರಣ್ಯಕನುಬ್ಬ ಮುರಿವೆನೆಂದು ಹೆಬ್ಬಾಗಿಲೊಳು ಸಂಜೆ ಮಬ್ಬಿನಲಿ ಧನುಜನ। ಗರ್ಭವ ನಖದಿಂದ ಇಬ್ಭಾಗವನು ಮಾಡಿ ಹಬ್ಬಿದ ಕರುಳನು ಹರುಷದಿ ಧರಿಸಿದೆ।।3।। ಭೀತರಾದ ಸುರವ್ರಾತ ಪ್ರಾರ್ಥಿಸೆ ಬಹು ಪ್ರೀತಿಯ ಭಕ್ತನ ಮಾತನು ಮನ್ನಿಸಿ ಅತಿ ಶಾಂತನಾಗಿ ಸಂತೋಷಪಡಿಸಿದ ಅನಾಥ ರಕ್ಷಕನೆ ಕಾತರವಳಿದೆ।।4।। ಖಳನ ಮರ್ದಿಸಿ ಬಹು ಇಳೆಯ ಪಾಲಿಸಿದೆ ನಳಿನ ಸಂಭವಗೆ ಬಲು ಹರುಷವನಿತ್ತೆ। ಹೆಳವನಕಟ್ಟೆ ಶ್ರೀರಂಗ ದಾಗಿನಕಟ್ಟೆ ನೆಲೆವಾಸ ಕಂಬದ ನರಸಿಂಹದೇವ।।5।।

**ಉದ್ಭವಿಸಿದ ಕಂಬದಿ (ಕಥನಾತ್ಮ ಕ ಗೀತೆ)** **ರಾಗ: ಕೇದಾರ**

ಉದ್ಭವಿಸಿದ ಕಂಬದಿ। ಶ್ರೀನಾರಸಿಂಹ। ಉದ್ಭವಿಸಿದ ಕಂಬದಿ।।ಪ।। ಉದ್ಭವಿಸಿದ ಬೇಗ ಪದ್ಮ ಸಂಭವಪಿತ। ಮುದ್ದು ಬಾಲಕನ ಉದ್ಧರಿಸುವೆನೆಂದು ।।ಅ.ಪ।। ದುರುಳನು ಪ್ರಹ್ಲಾದನ। ಪರಿಪರಿಯಿಂದ ಕರಕರಪಡಿಸೆ ಕುವರನ। ನರಹರಿ ಎನ್ನನು ಪೊರೆ ಎಂದು ಮೊರೆಯಿಡೆ। ಸುರರು ನೋಡುತಿರೆ ಭೋರ್ಗರೆಯುತ ಆ ಕ್ಷಣ ।।1।। ಎಲ್ಲಿರುವನು ಹರಿ ಎಂದು। ದೈತ್ಯನು ಮಗನ ಇಲ್ಲಿ ಸ್ಥಂಭದಿ ತೋರೆಂದು। ಖುಲ್ಲನು ಹಿಂಸಿಸೆ ಸರ್ವತ್ರದಿ। ಶ್ರೀನಲ್ಲನಿರುವನೆಂದು ಸಾಧಿಸೆ ಭಕ್ತನು।।2।। ತನಯನ ನುಡಿ ಉಳಿಸಲು। ನರಹರಿ ಹೊಸಲೊಳ್ ಇನನು ತಾ ಮುಳುಗುತ್ತಿರಲು। ದನುಜನ ತೊಡೆಯ ಮೇಲಿಟ್ಟು ನಖದಲಿ। ಕನಲಿ ಸೀಳಿ ಕರುಳ್ಮಾ ಲೆ ಧರಿಸುತ।।3।। ಸುರರು ಜಯ ಜಯವೆನ್ನುತ। ಪೊಗಳುತ್ತಲಿರೆ ನರಹರಿ ಉಗ್ರ ತಾಳುತ। ಸುರರು ಬೆದರಿ ಪ್ರಹ್ಲಾದನ ಕಳುಹಲು। ಕರಿಗಿರಿ ನರಹರಿ ಶಾಂತನೆನಿಸಿದ।।4।। ತಾಪವಡಗಿತು ಗದಲಿ। ವರ ಭಕ್ತನಿಂದ ಶ್ರೀಪತಿ ಲಕುಮಿಸಹಿತಲಿ। ಗೋಪಾಲಕೃಷ್ಣ ವಿಠ್ಠಲಗುರುವರದ। ಈ ಪರಿಯಿಂದ ಭಕ್ತರಪೊರೆಯಲು।।5।।

**ಕೆಸರೊಳಗಿನ ಮಾಣಿಕದಂದದಿ (ಪ್ರಹ್ಲಾದ ಚರಿತ್ರೆ)** **ರಾಗ: ಆನಂದಭೈರವಿ**

ಕೆಸರೊಳಗಿನ ಮಾಣಿಕದಂದದಿ ಹೆಸರಿಗೆ ಪ್ರಹ್ಲಾದನು ಜನಿಸಿದನು॥1॥ ಮಿಸುಣಿಯಂದದಿ ಶಿಶು ಹೊಳೆಯುತಿರಲು ಕುಶಲದಿ ರಕ್ಕಸರೊಳು ವರ್ಧಿಸಿದ॥2॥ ದುರುಳ ಹಿರಣ್ಯಗೆ ಅವ ದುರು ಮಂತ್ರಿ ಬರಹ ಕಲಿಸಬೇಕೆನುತಲೆ ತಂತ್ರಿ॥3॥ ಓದೋ ಮಠಕೆ ಪ್ರಹ್ಲಾದನು ನಡೆತಂದ ಓ ಮಂಟಪದಿ ನೆರೆದರು ಬಾಲಕರು॥4॥ ಕಾಯುವ ದೈತ್ಯರು ಕೋಟಿ ಮುಚ್ಚಿದರು ಮಾಧವ ನಂದಿಯ ಪ್ರಿಯದ ಮಗನ॥5॥ ಓಂ ನಮಃ ಶಿವಾಯ ಬರೆಯೆಂದರೆ ಅವನು ಓಂ ನಮೋ ನಾರಾಯಣನೆಂದು ಬರೆದ॥6॥ ಬಿಡೆಯ ನೀನು ಹಯವದನನೆನುವುದನು ಬಿಡು ಬಿಡು ಎಂದರೆ ಬಿಡ ಬಾಲಕನು॥7॥ ಚಂದ್ರಾಯುಧವಾ ನೆತ್ತೀಲೊಗೆದ ಕೋಟಿಹಾವಿನಲಿ ಕಚ್ಚಿಸಿದ॥8॥ ಹಾಲಲಿ ವಿಷವನು ಬೆರಸಿರಿ ಎಂದ ಗುಡ್ಡ ಬೆಟ್ಟಗಳ ಮೇಲ್ ಹಾಕಿಸಿದ॥9॥ ಉಪ್ಪರಿಗೆಯಿಂದ ಹತ್ತಿ ಧುಮುಕಿಸಿದ ಹಸೆ ಬಂಡೇ ಮೇಲೆ ಬಿಸಿ ಹಾಕಿಸಿದ॥10॥ ಕಳಕಳಿಸೋ ಅಗ್ನೀಲ್ ಹಾಕಿಸಿದ ಭೋರೆಂಬೋ ಸಾಗರದಲಿ ಮುಳುಗಿಸಿದ॥11॥ ಪಟ್ಟದಾನೇ ತಾ ಬಿಟ್ಟು ತನ್ನಿರೆನಲು ಅಲಗಿಲಿ ತಿವಿಯಿರೋ ತರಳನಿಗೆನಲು॥12॥ ತಲೇಮೋರೆ ತುಂಡಾಗುತ್ತಿರಲು ಹರಿಗುರು ಎನುತಿರೆ ತಾ ಬೆರಗಾದ॥13॥ ಇಲ್ಲೇ ತೋರೋ ನಿನ್ ಒಡೆಯನ್ನ ಈ ಕಲ್ಲು ಕಂಬದಲಿ ಕರೆ ಮತ್ತವನ॥14॥ ಮೊಟ್ಟಮೊದಲು ತೋರೋ ಎನಗೆ ನಟ್ಟ ನಡುವೆ ಈ ಕಂಬದಲವನ॥15॥ ಅಹುದಾಗಲಿ ಎನುತಾಗಲೆ ಪ್ರಹ್ಲಾದನು ಕಣ್ಣುಮುಚ್ಚಿ ಕರಗಳನೇ ಮುಗಿದ॥16॥ ಮತ್ಸ್ಯಕೂರ್ಮಾ ವರಾಹನೆ ನೀ ಬಾರೋ ಅಚ್ಯುತ ನರಸಿಂಹನೆ ನೀ ಬಾರೋ॥17॥ ಹೆಚ್ಚಿನ ವಾಮನ ಭಾರ್ಗವ ನೀ ಬಾರೋ ಲಕ್ಷ್ಮೀಪತಿ ಶ್ರೀರಾಮನೆ ನೀ ಬಾರೋ॥18॥ ಕೃಷ್ಣ ಬೌದ್ಧ ಕಲ್ಕ್ಯನೆ ನೀ ಬಾರೋ ದುಷ್ಟ ಹಿರಣ್ಯನ ಬಾಧೆಯ ಬಿಡಿಸೋ॥19॥ ಚಿಮ್ಮು ಚಿಟಿಲು ಭುಗಿಲೆನ್ನುತಲೆ ಅಜ ಬ್ರಹ್ಮಾಂಡವ ಪಕ್ಕಕೊತ್ತಿಸಿದ॥20॥ ಕಂದನ ಮೇಲೆಕರುಣವನಿಟ್ಟು ಕೊಂದು ಹಿರಣ್ಯನ ಅವ ಭೋರಿಟ್ಟ॥21॥ ತರಳನ ಮೇಲೆ ಕರುಣವನಿಟ್ಟ ಕರುಳಾ ಕೊರಳ ಮಾಲೆಯನಿಟ್ಟ॥22॥ ಕೇಸರಿ ರೂಪಿಲಿ ನಡೆತಂದನು ದುರುಳ ಹಿರಣ್ಯನ ಅವ ಕೊಂದನು॥23॥ ಶ್ರೀ ಲಕ್ಷ್ಮೀ ಸಮ್ಮೇಳದಿ ಬಂದ ನರಸಿಂಹನ ಅವತಾರದಿ ನಿಂದ॥24॥

**ನರಸಿಂಹಾವತಾರ ಕಥೆ ಪರಮಾನಂದ ಸುಧೆ** **ರಾಗ: ಶ್ರೀ**

ನರಸಿಂಹಾವತಾರ ಕಥೆ ಪರಮಾನಂದ ಸುಧೆ। ಪರಮಾನಂದ ಸುಧೆ। ಧರೆಯಲಿ ಧರ್ಮವನುಳಿಸಲು ಹರಿಯೆ ದಶರೂಪವನು ತಳೆದ ಕಥೆ।।ಪ॥ ಶಾಪವಶದಲಿ ಜಯವಿಜಯರು। ಈ ಜಗದಿ ಅಸುರರಾಗಿ ಜನಿಸಿರಲು। ಹಿಂಸಾತ್ಮಕ ಹಿರಣ್ಯಾಕ್ಷನಾ। ವರಾಹ ಮೂರ್ತಿ ವಧಿಸಿರಲು। ಅವನ ಅನುಜನೆ ಕನಕಕಶಿಪುವೇ। ಶ್ರೀಹರಿಯನ್ನೇ ದ್ವೇಶಿಸುತಿರಲು॥1॥ ದಾನವೇಶ್ವರನ ಮಗನಾಗಿ। ಬಾಲ ಪ್ರಹ್ಲಾದನೆ ಪ್ರಭವಿಸಿದ। ಬಾಲ್ಯ ದಿಂದಲೀ ಭಕ್ತಿಭಾವದಲಿ। ಶ್ರೀಹರಿಪಾದವ ಸೇವಿಸಿದ। ಮಹಾವಿಷ್ಣುವೇ ಎಲ್ಲಾ ಕಾಲದಲಿ ತನ್ನ ಕೈ ಬಿಡದೆ ಸಲಹುವನೆಂದಾ॥2॥ ಅಗಣಿತ ಮಹಿಮನ ನಾಮವ ಸಹಿಸದೆ। ಹಿರಣ್ಯ ಕಶಿಪು ಹಿಂಸಿಸಿದಾ। ಎಲ್ಲಿಹನಾ ಗೋವಿಂದನೆಂದೂ ಬಾಲ ಪ್ರಹ್ಲಾದನ ಪ್ರಶ್ನಿಸಿದಾ। ಕಂಭದಿಂದಲೇ ಉದಯ ಹೊಂದಿದಾ। ನರಸಿಂಹನೆ ಧನುಜನ ಸಂಹರಿಸಿದಾ॥3॥ ಸಿಂಹದ ರೂಪಿನ ವಿಷ್ಣುವ ಕಂಡು। ಭಕ್ತ ಪ್ರಹ್ಲಾದ ಹರ್ಷಿಸಿದ। ತಂದೆಗೆ ಮುಕ್ತಿಯ ಪಾಲಿಸೆಂದು। ನರಸಿಂಹನನು ಪ್ರಾರ್ಥಿಸಿದ ॥4॥

**ಶ್ರೀಶನೊಲುಮೆಯ (ಶ್ರೀನೃಸಿಂಹ ವಿಜಯ-ಗೀತಮಾಲಿಕಾಕೃತಿ)**

ಶ್ರೀಶನೊಲುಮೆಯ ಕಡೆಗಣ್ಣ ನೋಟ। ದಾಸ ಜನರ ಸಂಸಾರ ಕ್ಲೇಶ ಕಳೆದು। ರಾಶಿ ಸುಖಗಳನಿತ್ತು ಸಂರಕ್ಷಿಸುವುದು। ಅಸುರ ಬಾಲನ ನೃಹರಿ ರಕ್ಷಿಸಿದ ಹಾಂಗೆ॥1॥ ಅಸುರ ಕನಕಕಶಿಪುವಿನ ಶಿಶುವು ತಾನು। ಬಸುರಿನಲೆ ನಾರದರುಪದೇಶ ಸಿರಿ ಪೊಂದಿ। ಭಾಸುರಾಗರ್ಭ ವೈಷ್ಣವ ದಾಸನಾದ। ಆ ಶಿಶುವಿನ ಸಂರಕ್ಷಕ ಶ್ರೀಶನಾದ॥2॥ ಹ್ಲಾದ ವಿಷ್ಣುವು; ವೈಷ್ಣವ ಹ್ಲಾದ; ಅದರ। ನಾದರಿಸುವ ಜನ ಜಗತಿಗೆ ಹ್ಲಾದ; ಅಸುರ। ನಾರದರು ಶಿಶುವತಿ ಪ್ರೇಷ್ಟನಾದ; ಹರಿಯ। ಪ್ರೇಮ ಪಾತ್ರನು ಪ್ರಹ್ಲಾದನಾಮನಾದ॥3॥ ದೈತ್ಯದಾನವ ಗುರುಕುಲದಧಿಪರಾದ। ದಿತಿಜ ಕುಲಗುರು ಶುಕ್ರರಿಗಿತ್ತು ಸುತನ। "ದೈತ್ಯದಾನವ ಪಕ್ಷದ ಪ್ರೀತಿ ಬೆಳೆಸಿ ಹಿತವ ಮಾಡಿರಿ ನನಗೆ"ಂದ ಹೇಮ ಕಶಿಪು॥4॥ ಸಾಮ, ದಾನ, ದಂಡೋಪಾಯ ಸಾಧನೆಗಳು।

ಕಾಮಿತಾರ್ಥವೀಯದಿರೆ ಶುಕ್ರಜರು ನೋಡಿ, ಕಾಮನಯ್ಯನ ಸುಸ್ಥಿರ ಪ್ರೇಮ ಬಿಡದ। ಈ ಮರಿಯ ನೈಜ ವನಪಾಯವೆಂದು ತಿಳಿದು॥5॥ "ಜೀವರ ನೈಜ ಭಾವವು ಸ್ಥಿರತಮವದು। ಯಾವ ಶಕ್ತಿಗು ವ್ಯತ್ಯಾಸ ವಾಗದಧಿಪ! ಇವನು ವಿಷ್ಣುಗ್ರಹಾವಿಷ್ಟನಿವಗೆ ದೈತ್ಯ। ವಿದ್ಯೆ ಬರದೆ"ಂದು ಗುರುಗಳು ಬಿಟ್ಟರವನ॥6॥ "ದೈತ್ಯ ದಾನವಕುಲ ವೈರಿ", ನನ್ನನುಜನ ಅಂತಗೊಳಿಸಿದ ಸುರಪಕ್ಷಪಾತಿ ವಿಷ್ಣು! ಅಂಥ ಶತ್ರುವಿನಭಿಮಾನಿ ಆದನಿವನು। ಎಂಥ ಆಪತ್ತು ಬಂತೆಂದು ಹಿತವ ತೊರೆದು॥7॥ "ವೀರವೈಷ್ಣವನಿವ; ನನ್ನ ವೈರಿ" ಎಂದು, ಔರಸ ಪ್ರೀತಿ ತೊರೆದು, ಸಂಹಾರ ಮಾಳ್ಪ ಮಾರಕಾನೇಕ ಅಭಿಚಾರ ಮಾಡಿ ಮಾಡಿ। ಪಾರಗಾಣದೆ ಪರಿತಾಪ ಭಾರನಾದ॥8॥ "ಏನು ಮಾಡಿದರಿವ 'ಹರಿ' ಎಂಬುದು ಬಿಡ, ಆ ಹರಿಯ ತೋರಲವನ ಸಂಹಾರ ಮಾಡಿ। ತರುವೆನಿವನ ದಾರಿಗೆ" ನುತ ಕರೆದು ಸುತನ। "ಹರಿಯ ತೋರೆ"ಂದು ಕಿಡಿಕಾರಿ ಚೀರಿ ಅಸುರ,॥9॥ "ಹರಿ ಹರಿ ಹರಿ ಎಂದುಬಿಡದೆ ಹಲುವುತಿರುವೆ। ಎಲ್ಲಿಹನೊ ! ನಿನ್ನ ಹರಿ ತೋರು; ಗುಲ್ಲು ಬೇಡ। ಎಲ್ಲಿಹನವ, ಎಲ್ಲಿಹನವ, ಎಲ್ಲಿ ತೋರು। ಇಲ್ಲದಿದ್ದರೆ ನಿನ್ನ ನಾ ಕೊಲ್ಲದೆ ಬಿಡೆ"॥10॥ ಇಂತು ಚೀರುವವನ ಮುಂದೆ ಶಾಂತನಾಗಿ। "ಎಲ್ಲಿ ನೋಡಿದರಲ್ಲಲ್ಲೆ ಇರುವ ಹರಿಯು;। ಫುಲ್ಲಲೋಚನ ಶ್ರೀಹರಿ ಇಲ್ಲದಣುವ। ಕಾಣೆ; ಅಣುರೇಣು ತೃಣ ಕಾಷ್ಟಪೂರ್ಣನವನು"॥11॥ ಚಿಂತೆ ಬಿಟ್ಟು ಶ್ರೀಕಾಂತನೇಕಾಂತ ಭಕ್ತ ಇಂತು ಪೇಳಲು, ಕೇಳಿ ಆ ಹೊಂತಕಾರಿ ಅಂತಪುರದೊಂದುರು ಸ್ತಂಭದತ್ತ ನೋಡಿ, ಸಂತಸದಿ- ನಿಂದ ಪ್ರಹ್ಲಾದಗಿಂತು ನುಡಿದ॥12॥ "ಎಲ್ಲಕಡೆ ಇದ್ದರವನು ಈ ಕಲ್ಲುಕಂಬದಲ್ಲಿ ಇರುವನೇ? ತೋರು, ಇದ್ದರವನನ್ನು ಬಲಿ ಕೊಡುವೆ ನನ್ನನುಜಗೆ"ಂದು ಛಲದಿ ಹೊಡೆದ ಮುನಿದು ಕರವಾಲ ಪಿಡಿದ ಮುಷ್ಟಿಯಿಂದ॥13॥ ಪೆಳ್ಳು ಪೆಳ್ಳೆಂದು ಕಂಬವು ಸೀಳಿತಾಗ; ಪದುಮ ಜಾಂಡವೆ ವೊಡೆಯಿತೋ! ಪ್ರಳಯವೀಗ। ಬಂದಿತೋ! ಎಂದಸುರ ಭಯದಿಂದ ನೋಡೆ। ಅತ್ಯಭೂತಾದ್ಭುತಾಕಾರವವ- ತರಿಸಿತು॥14॥ ಸತ್ಯ ಮಾಡಲು ನಂಬಿದ ಭೃತ್ಯರ ನುಡಿ,। ನಿತ್ಯ ಸರ್ವತ್ರ ವ್ಯಾಪ್ತತ್ವ ಸತ್ಯವೆಂಬ। ತತ್ವ ತೋರಲು, ತಕ್ಷಣ ಸ್ತಂಭದಿಂದ। ಭಕ್ತ ವತ್ಸಲ ಶ್ರೀಹರಿ ಬಂದು ನಿಂತ॥15॥ ನರನು ಅಲ್ಲ, ಮೃಗವು ಅಲ್ಲ, ನರಮೃಗಯುಗ। ಉರು ಶರೀರ ಧರಿಸಿ ಬಂದ; ಧರೆ ನಡುಗಿತು;। ಗಿರಿ ಶಿಖರಗಳುರುಳಿತು, ಸಾಗರಗಳುಕ್ಕಿ। ಭೋರ್ಗರೆ- ದವು; ಆರ್ಭಟಿಸಿ ತಾ ಘರ್ಘರಿಸಲು॥16॥ ಖೇಚರಗಳಾದವು ಕೆರಳಿ ಕೇಸರಗಳು,। ಗೋಚರಿಸಿದೆ ದಿನಕರ ನಿಮ್ಲೋಚನಾದ ಕೇಸರಗಳ ಮೇಘಾ ವೃತಾಕಾಶದಲ್ಲಿ;। ತೋರಿತು ಹರಿನೇತ್ರತ್ರಯಾಂಗಾರ ತಟಿತು॥17॥ ಅದ್ಭುತ ಭಯಾನಕ ರಸಗಳುದ್ಭವಿಸಿತು। ದೈತ್ಯರಾಟ್ ಹೃದ್ಗದದಲಿ; ಗದ್ಗದಿಸಿತು ಎದೆ;। ಸಿಡಿಲೊಡಲಿಗೆ ಹೊಡದಹಾಂಗೆ ದೃಢತರತನು। ಮಿಡುಗಿತೊಂದು ಕ್ಷಣ; ಪೊಡವಿ ಕೆಡವಿತವನ॥18॥ ಬಿದ್ದ ನೆಲದ ಮೇಲ್ಚೇತರಿಸೆದ್ದ; ಮುಂದೆ। ನೋಡಿ "ಅಹೋ ಇದೇನಿದೇನು! ಅರಮನೆಯ ನೊಡೆದು ಬೆಳೆದು ನಿಂತಿದೆ ಭೂತ! ನೋಡಲಿಲ್ಲ। ಇಂಥ ನರಮೃಗ ರೂಪವನೆಂದು ನಾನು"॥19॥ "ಇಷ್ಟು ದಿನ ನನ್ನ ಮಗು ನನ್ನ ಎದುರಿಸಿದ್ದು। ಈ ಪೆಡಂಭೂತನಾಸರೆ ಇಂದಲೇನೆ। ಇವನೆ ಸೂಕರ ರೂಪದಿಂದೆನ್ನನುಜನ। ಸಂಹರಿಸಿದ ಹರಿ; ಇವನು ಶತ್ರುವೆನಗೆ"॥20॥ ಮರಣಕಾಲದ ಸನ್ನಿ ತಾ ಕೆರಳಿ ಬರಲು। "ಹಗೆ! ಹಗೆ! ಹಗೆ! ತೀರಿಸುವೆನು ಹಗೆಯ" ನೆಂದು। ಹಗೆ ಹೊಗೆಯನೆಬ್ಬಿಸಿ ಉರಿಯೆ, ಹಲ್ಲುಕಡದ। ಪಟಪಟನೆ ಉಪ್ಪು ಉರಿಯಲಿ ಸ್ಫುಟಿಸಿದಂತೆ॥21॥ ಕುತಪ ಮಾರ್ತಾಂಡ ಮಂಡಲಾಕೃತಿ ಧರಿಸಿದ। ಅತಿಭಯಾನಕ ನೇತ್ರತ್ರಯ ಮಿಟುಕರಿಸಿ। ದಿತಿಜನ ಕಡೆ ನೋಡುತ ಬಾಯಿ ತೆರೆದು ಕೋರೆ। ಹಲ್ಲುಗಳ ಕಾಣೆ ಚೀರಿದ ಹರಿ ಮುರಾರಿ॥22॥ ಒಡೆಯುತಿದೆ ದೈತ್ಯರೊಡೆಯಗೆ; ಬಿಡದೆ ಯತುನ। ಹಿಡಿಹಿಡಿದೆದೆಯ ಧೈರ್ಯವ, ಬಿಡದೆ ಬಿಂಕ,। ಹಿಡಿದು ಗದೆಯ, ನಡೆದ, ವೈರ ಹೆಚ್ಚಿತೊಡನೆ;। ಗುಡುಗಿದ ಮದಗಜ ಕೆರಳಿ ಕೂಗಿದಂತೆ॥23॥ ನರಹರಿ, ಸುರವೈರಿ ಸಮರ, ಹರಿಕರಿಗಳು। ಕೆರಳಿ ಹೋರಾಡಿದ ತೆರದಿ ಮೆರೆಯೆ, ಸುರರು। ನೆರೆದು ಅಂಬರದಲಿ ಜಯಗೆರೆಯೆ ಹರಿಗೆ,। ಅಸುರರು ನೃಹರಿಯನೆದುರಿಸಿದರಾಗ!॥24॥ ಹರಿಸಟಾನಿಶಿತಾಗ್ರ ಪ್ರಹಾರದಿಂದ। ಸುರವೈರಿ ಸೈನ್ಯ ಸಮೂಲ ತರಿದು ಹೋಗೆ,। ನರಹರಿ ಸುರಾರಿ ಸಂಹಾರ ನಿರತನಾದ। ತರಣಿ ಪಶ್ಚಿಮಾಂಬೋಧಿಯತ್ತ ಪಯಣಿಸಿದ॥25॥ ಪಿಡಿದು ಪನ್ನಗವ ಸುಪರ್ಣ ಕ್ರೀಡಿಪಂತೆ,। ಹಿಡಿದು ರಕ್ಕಸನ ನೃಸಿಂಹನಾಡು- ತಿರಲು,। ನೋಡಿ ಸುರರು ನರಹರಿಯ ಕ್ರೀಡೆಯನ್ನು। ಬೇಡಿಕೊಂಡರು "ಹೇ ದೇವ! ಕ್ರೀಡೆ ಬೇಡ, ॥26॥ ಅಸುರರುನ್ನಾಹ ಕಾಲವೀ ಅಸುರ ಸಂಜೆ,। ಅಸುರನಾಲಸ್ಯ ಮಾಡದೆ ಅಂತ್ಯಗೊಳಿಸು,। ಈ ಸುರಾರಿ ನಮಗೆ ಬಲು ಹಿಂಸೆ ಕೊಟ್ಟ। ವಿಶ್ವಮಸ್ತಕ ಜ್ವರನಿವ; ಬೇಗ ಕೊಲ್ಲು"॥27॥

ಸುರರು ಮೊರೆ ಇಡೆ ಈ ಪರಿ, ಹರಿ ಅಸುರನ। ವಜ್ರ ಸದೃಶ ಮಹೋದಗ್ರ ಪಂಚನಖರ। ಹಸ್ತ ಪಂಜರದಿ ಹಿಡಿದು, ಹಗಲು ಅಲ್ಲ। ಇರುಳು ಅಲ್ಲದಪರಕಾಲ ಬರಲು ಕಂಡು।।28।। ಒಳಗು ಹೊರಗಲ್ಲ ಕುಳಿತು ತಾ ಹೊಸ್ತಲಲ್ಲಿ। ನೆಲದ ಮೇಲಲ್ಲ ಆಗಸದಲ್ಲಿಯು ಅಲ್ಲ। ಮಲಗಿಸಿ ತೊಡೆಯ ಮೇಲೆ, ಕೆರಳಿ ನರಹರಿ। ಜೀವ ನಿರ್ಜೀವಲ್ಲದ ನಖಾವಳಿಗಳು।।29।। ಅಸ್ತ್ರವೂ ಅಲ್ಲ ಶಸ್ತ್ರವೂ ಅಲ್ಲ- ವೆಂದು,। ನರನು ಮೃಗವು ತಾನಲ್ಲದ ನಾರಸಿಂಹ,। ತನ್ನ ನಾಭಿಸಂಭವ ಹಿಂದೆ ದೈತ್ಯಗಿತ್ತ। ವರಗಳನು ಸುಳ್ಳು ಮಾಡದೆಭಕ್ತ ವರದ, ।।30।। ಕೊಲ್ಲಲುದ್ಯಮಿಸಿದ- ಸುರನ ಘೋರರೂಪ। ಪ್ರಖರ ದಂಭೋಳಿ ನಖಗಳಿಂದ। ಅಸುರನುದರ ಕೆದರಿ ಅಸೃಗಾರ್ದ್ರಮಸೃಣ। ಕೋಕನದ ಸದೃಶಾಂತ್ರಗಳ್ಕೊರಳಲಿಟ್ಟು ।।31।। ವಧಿಸಿಜರ್ಝರಿಸುತ ಕೋಪವ ವರ್ಜಿಸದಿರೆ,। ನಿರ್ಜರರಜ- ಭವಾದಿಗಳ್ನಿಗಮಸಾರ। ನಿರ್ಭರಸ್ತುತಿಗಳು ಮಾಡಿ ನಿಂತು ಮುಂದೆ ।।32।। "ಮುಕ್ತಕಂಟಕರಾದೆವು ಭಕ್ತವರದ! ಶಕ್ತನೀನೋರ್ವನೆ ಇವನ ಸವರುವುದಕೆ!-। ಇಷ್ಟು ಅಷ್ಟಲ್ಲ ಇವನಿಂದ ಪಟ್ಟ ಕಷ್ಟ! ಪ್ರೇಷ್ಟನೀನಾಗಿ ಈ ನಮ್ಮ ಕಷ್ಟಕಳೆದೆ!।।33।। ಸ್ವಾಮೀ! ಲೋಕಭೀಕರ ರೂಪ ಸಾಕು ಮಾಡು; ಶಾಂತನಾಗು, ಭಕ್ತ ಜನ ಪ್ರಸನ್ನನಾಗು;। ಇಂತು ಕೊಂಡಾಡಿದರು ಬಿಡದಿರಲು ಕ್ರೋಧ। ಮೋದ ಮಾನಸ ಪ್ರಹ್ಲಾದ ಪಾದಕೆರಗಿ,।।34।। ನಾರದೋಕ್ತಾಗಮಾರ್ಥಸುಸಾರ ಶುದ್ಧ। ವಾಕ್ಪ್ರಸೂನ- ಗಳರ್ಪಿಸಿ, ಬಗ್ಗಿ ನಿಲ್ಲೆ,। ಪರಮ ಶಾಂತನಾಗಿ ನೃಹರಿ ಕರುಣೆಯಿಂದ। ಕರವ ಶಿರದಲಿಡುತ "ಬೇಡು ವರವ"ನೆಂದ।।35।। "ಬೇಡ ಬೇಡನ್ಯ ವರಗಳು ಬೇಡಿಕೊಂಬೆ ನೀಡು ನಿನ್ನನೇಕಾಂತದಿ ನೋಡಿ ನಲಿವ। ಈಡು ಕಾಣದ ವರವನ್ನು ಹೇ ನರಹರಿ!। ಮಧುರವದು ವರ ಸುರನಾಥ ಪದವಿಗಿಂತ! ಮಧುರವದು ವರ ವೈಕುಂಠ ಸದನಕಿಂತ"।।36।। ಇಂತು ಪೇಳ್ದಪ್ರಹ್ಲಾದನೇಕಾಂತ ಭಕ್ತಿ। ಸಂತಸವ ತರಲಾಗ ಶ್ರೀಕಾಂತ "ನನ್ನ ಭಕ್ತ ಸಂತತಿ ಪ್ರತಿನಿಧಿ ಪಾತ್ರನಾಗು। ಮುಕ್ತಿಸಾಧಕನಾಗೆ"ಂದು ಮುದದಿ ಹರಸಿ ಶಾಂತ- ಮೂರುತಿ ನರಹರಿ ಅಂತರಿಸಿದ।।37।। ಹರಿ ಒಲಿದ ಕುವರನಲಿ ತಾನನಿಲದೇವ। ಮೆರೆದನಾ- ವಿಷ್ಣನಾಗಿ. ಅಸುರ ಗುರುಗಳು। ಉಶನಸರನು ಕರೆಸಿ ಸುಮನಸರು ಮುದದಿ। ಹರಿ ಭಕುತಗೆ ಮಾಡಿದರು ಪಟ್ಟಾಭಿಷೇಕ ।।38।। "ಜಯ ಜಯ ಹರಿಗೆ ನೃಹರಿಗೆ ಜಯ ಜಯ ಹರಿ। ಭಕುತ ಪ್ರಹ್ಲಾದರಾಯಗೆ! ಜಯ ಜಯ ಜಯ। ಜ್ಞಾನಸಾಗರ ಮಾಧವನ ಭಕುತರಿಗೆ"। ಇನಿತು ಹರಿಸಿ ಜಯವ, ಪೋದರೆಲ್ಲ ಸುರರು। ತಮ್ಮ ತಮ್ಮ ಲೋಕಗಳಿಗೆ ಹೆಮ್ಮೆ ಇಂದ।।39।।

ಶ್ರೀ 108 ಶ್ರೀ ವಿದ್ಯಾಸಾಗರ ಮಾಧವತೀರ್ಥ, ಶ್ರೀಪಾದಂಗಳವರು, ಶ್ರೀಮಾಧವತೀರ್ಥಮಠ, ತಂಬಿಹಳ್ಳಿ.



**ನರಸಿಂಹ ಪಾದ ಭಜನೆಯ** — ರಾಗ:ಹಿಂದೋಳ–ಆದಿತಾಳ

ನರಸಿಂಹ ಪಾದ ಭಜನೆಯ ಮಾಡೊ।।ಪ।। ನರಸಿಂಹನ ಪಾದ। ಭಜನೆಯ ಮಾಡಲು। ದುರಿತ ಪರ್ವತವ ಖಂಡಿಸುವ ಕುಲಿಶ ದಂತೆ।।ಅ.ಪ.।। ಸುರರೆಲ್ಲ ನಡುಗಲು। ಸಿರಿದೇವಿ ಮೊರೆಯಿಡೆ। ವರಕಂಭದಿಂ ಬಂದ। ಸಿರಿ ನರಹರಿನಮ್ಮ ।।1।। ತರಳನ ಮೊರೆ ಕೇಳಿ। ತ್ವರಿತದಿಂದಲಿ ಬಂದು। ದುರುಳನ ಕರುಳ ತನ್ನ। ಕೊರಳಲ್ಲಿ ಧರಿಸಿದ ।।2।। ಹರಿ ವಿರಿಂಚಾದ್ಯರು। ಕರವೆತ್ತಿ ಮುಗಿಯಲು। ಪರಮಶಾಂತನಾದ ಶ್ರೀ। ಪುರಂದರ ವಿಠಲ।।3।।

**ನರಹರಿಯೆನ ಬಾರದೇ** — ರಾಗ:ಕಲ್ಯಾಣಿ–ಅಟ್ಟತಾಳ

ನರಹರಿಯೆನ ಬಾರದೇ।।ಪ।। ಬಾರಿ ಬಾರಿಗೀ ಶರೀರವು ಬಾರಧಾಗೆ ಮಾಡೋ ನಾಮವು। ಘೋರಿಸಿದ ಪ್ರಹ್ಲಾದನ ಜನಕನ ಉರವ ಸೀಳಿದ ನಾಮವು।।ಅ.ಪ.।। ದಾರಿದ್ರ್ಯಾದಿ ಭಯವೊಂದು ಇಲ್ಲ ದಾರಿ ವೈಕುಂಠಕ್ಕೆ ತೋರೋದಲ್ಲ। ನಾರಾಯಣ ನಿಮ್ಮ ನಾಮವುಚ್ಚರಿಸಿದ ನಾರದ ದೇವ ಖುಷಿಯಾದನು।।1।। ಜಪತಪದಲಿ ಮಾಡು ಮತಿ ಜಪಿತ ಮಾರ್ಗವಿದು ಕಠಿನವಲ್ಲ। ಶ್ರೀಪತಿಯೆಂದ ದ್ರೌಪದಿಯ ಅಭಿಮಾನವ ಕಾಯಿದ ಶ್ರೀನಾಮವು।।2।। ಮಂಗಳ ಮೂರುತಿಯೆ ಹಿಂಗದ ಭಕ್ತಿರಸದಲ್ಲಿ ಮುಣುಗಿದೇ। ರಂಗ ಪುರಂದರ ವಿಠಲರಾಯನ ಉರಗಶಯನನಾದ ನಾಮವು।।3।।

**ದಾನವನ ಕೊಂದದ್ದಲ್ಲ** ರಾಗ:ತೋಡಿ-ಆದಿತಾಳ

ದಾನವನ ಕೊಂದದ್ದಲ್ಲ ಕಾಣಿರೋ।।ಪ।। ಗಾನವಿನೋದಿ ನಮ್ಮ ತೊರವೆಯ ನರಸಿಂಹ ।।ಅ.ಪ.।। ಅಚ್ಚ ಪುರುಷನೆಂಬ ಸ್ವಚ್ಛ ರತ್ನ ಒಡಲೊಳು। ಬಿಚ್ಚಿ ನೋಡಿದರಿನ್ನೆಷ್ಟು ಇದ್ದಾವೊ ಎಂದು।।1।। ನೆಂಟತನವು ಬೆಳೆಯ ಬೇಕೆಂದು ಕರುಳ ಕೊರಳೊಳು। ಗಂಟುಹಾಕಿ ಕೊಂಡನಲ್ಲದೆ ದೇಹ ಸಂಬಂಧದಿಂದ।।2।। ತೊರವೆಯ ನರಸಿಂಹ ಪ್ರಹ್ಲಾದ ಪಾಲಕ। ಉರಿಮೋರೆ ದೇವ ನಮ್ಮ ಪುರಂದರ ವಿಠಲ।।3।।

**ಸ್ಮರಿಸುವ ಜನಕೆಲ್ಲ** ರಾಗ:ಆರಭಿ-ಆದಿತಾಳ

ಸ್ಮರಿಸುವ ಜನಕೆಲ್ಲ ಪರಿತಾಪಗಳಿಲ್ಲ।।ಪ।। ಶರಣಾಗತ ವತ್ಸಲನೆನಿಸಿದ। ಕರಿಗಿರಿದುರ್ಗದ ನರಹರಿ ನಿನ್ನನು।।ಅ.ಪ.।। ಪೂರ್ವ ಸುಕೃತದಿಂದ। ಸುಜನಕೆ। ತೋರ್ವೆ ನೀ ಮುದದಿಂದ।। ಸಾರ್ವಕಾಲದೊಳು ಮಹದಾನಂದದಿ। ದೂರ್ವಾಸರು ಪೂಜಿಪ ಮೂರುತಿ ನಿನ್ನ।।1।। ಕಾಶೀತೀರ್ಥದಿಂದ। ಚಕ್ರಪ। ರಾಶರತೀರ್ಥದಿಂದ।। ಲೇಸಾದ ಮಾರುತ ಪಾದತೀರ್ಥನರ। ಕೇಸರಿ ತೀರ್ಥದಿಂದೊಪ್ಪುವ ನಿನ್ನನು।।2।। ನೀನಿಹ ಕ್ಷೇತ್ರದೊಳು। ಸೇರಿಹ । ವಾನರಪಕ್ಷಿಗಳು।। ಮಾನವಾದಿ ಬಹುಪ್ರಾಣಿ ಸಮೂಹಕೆ। ಏನು ಪುಣ್ಯಫಲವಿರುವುದೊ ತಿಳಿಯದು ।।3।। ಅತ್ತಿಯ ಮರದಲ್ಲಿ । ಕಾಯ್ಗಳು । ಹತ್ತಿರು ವಂದದಲಿ।। ಮೊತ್ತ ಮೊತ್ತವಾದ ಬ್ರಹ್ಮಾಂಡ ನಿನ್ನೊಳು। ಹತ್ತಿಕೊಂಡಿಪ್ಪುದನಂತ ಕೋಟಿಯೆಂದು ।।4।। ಅಡವಿಯ ಮೃಗಗಳಿಗೆ। ಬಹು ಬಗೆ। ಗಿಡ ಲತೆ ತರುಗಳಿಗೆ।। ಒಡೆಯ ನೀನಲ್ಲದೆ ಅನ್ನೋದಕಗಳ। ಕೊಡುವರೆ ಮನುಜರು ನೀಗತಿ ಸಲಹೆಂದು।।5।। ಕ್ಷುದ್ರ ದೈತ್ಯರ ಗಂಡ। ಕರುಣ ಸ । ಮುದ್ರ ತಿಮಿರಚಂಡ।। ರೌದ್ರದಿ ಅಸುರರ ಮರ್ದಿಸಿ ಲೋಕೋ। ಪದ್ರವ ಬಿಡಿಸಿದ ರುದ್ರಾಂತರ್ಗತ ನಿನ್ನ ।।6।। ಭೂತಗ್ರಹಾದಿಗಳು। ಸೋಕಿದ । ಭೀತಿ ಜ್ವರಾದಿಗಳು।। ಚೇತೋಮುಖ ನಿನ್ನ ನೋಡಲು ಇನ್ನಾ। ಪಾತಕವಳಿದು ಯಾತನೆ ಕಳೆವುದು ।।7।। ಲಕ್ಷ್ಮೀಸಹಿತನಾಗಿ । ಭಕ್ತರ । ರಕ್ಷಿಸುವುದಕ್ಕಾಗಿ। ಲಕ್ಷಣಯುಕ್ತದಿ ಬಂದು ನಿಂದೆ ಶ್ರೀ। ಲಕ್ಷ್ಮಿ ನರಸಿಂಹ ನಿನ್ನ ಚರಿತ್ರೆಯು ।।8।। ಕರಿಗಿರಿ ನರಸಿಂಹ । ಭಕ್ತರ। ದುರಿತದಂತಿ ಸಿಂಹ ।। ಪರಿಪಾಲಿಸಲು ನಾ ಪೊರೆಹೊಕ್ಕೆನು ನಿನ್ನ । ಗುರುಪುರಂದರ ವಿಟ್ಠಲ ನಿನ್ನನು ।।9।।

**ಕರುಣಿಸು ನರಹರಿ ಗೋವಿಂದ** ರಾಗ: ಧನ್ಯಾಸಿ-ಆದಿತಾಳ

ಕರುಣಿಸು ನರಹರಿ ಗೋವಿಂದ। ನರಜನರಿಗೆ ಮೆಚ್ಚಿ ಸಲಹೋ ಮುಕುಂದ।।ಪ।। ಮಾತುಗಳಾಡದೆ ಮೌನದಿಂದಿದ್ದರೇ। ಭೂತ ಬಡೆದವನೆಂದು ಕರೆಯುವರೋ। ಚಾತುರ್ಯದಿಂದಲಿ ಮಾತುಗಳಾಡಲು। ಪಿತ್ಥೇರಿ ಬಲು ಬಾಯಿ ಬಡುಕನೆಂಬುವರಯ್ಯ ।।1।। ಬಲು ಚೆನ್ನಿಗ ತನವ ತಾನು ಮಾಡಲು। ಬಲು ಹಮ್ಮಿಗನೆಂದು ಬಯ್ಯುವರೋ। ಸುಲಭದಿಂದ ನಿಗರ್ವಿಯಾಗಿದ್ದರೆ। ಕಲಿಯುಗದಲ್ಲಿ ಮಂದಮತಿ ಯೆಂಬುವರಯ್ಯ।।2।। ಮಡಿವಂತನೆಂದು ನೇಮವ ಮಾಡುತಲಿದ್ದರೆ। ಮಡಿಯವನೆಂದು ಬಯ್ಯುವರಯ್ಯ।। ಮಡಿ ನೇಮ ಜಪತಪ ಬಿಟ್ಟು ತಿರುಗಲಾಗಿ। ನಡತೆ ಹೀನನೆಂದು ನಿಂದಿಸುತಿಹರೋ ।।3।। ನಿಷ್ಠೆಲಿ ಒಪ್ಪೊತ್ತೂಟವನುಂಡರೆ। ನಿಷ್ಠೆಯತನ ಸುಟ್ಟಿತೆಂಬುವರಯ್ಯ।। ಗುಟ್ಟಾಗಿ ಎರಡು ಮೂರು ಬಾರಿ ಉಂಡರೆ। ಹೊಟ್ಟೆ ಹೊರಕನೆಂದು ಬಯ್ಯುವರಯ್ಯ।।4 ।। ನರಲೋಕದೊಳಿನ್ನು ಪುಟ್ಟಿಸದಿರು ನಿನ್ನ। ಮರೆಯ ಹೊಕ್ಕೆನೊ ಮೋಕ್ಷದಾಯಕನೆ।। ಅರವಿಂದ ನಯನ ಶ್ರೀ ಪುರಂದರವಿಠಲ। ಕರುಣದಿಂದಲಿ ನೀ ರಕ್ಷಿಸೋ ಎನ್ನ।।5।।

**ನರಹರಿ ಅಂದಿಂದೆಂದು** ರಾಗ: ಖರಹರಪ್ರಿಯ

ನರಹರಿ ಅಂದಿಂದೆಂದು ಮಂದರಗಿರಿಧರನೆ। ತಂದೆಯಂತೆ ತಾಯಿಯಂತೆ ಬಂಧುಗಳಂತೆ। ಬಂದ ಬಂದ ದುರಿತ ವೃಂದವನ್ನು ತನ್ನ ಪಾದದಿಂದೊದೆದು? ಪಕ್ಕದೊಳಿಟ್ಟು ಅಗಲದಿಹ ತನ್ನವರ। ಇಂತೆಂದು ನಂಬಿದವರಿಗೆ ಕೈಯಲ್ಲಿ ಕೈವಲ್ಯ। ಆನಂದವನೀವೆನೆಂದು ತುಂಗಭದ್ರೆ ತೀರದಲ್ಲಿ। ಬಂದು ನಿಂದಾ ಇಟ್ಟಿಗೆಯ ಮೇಲೆ। ಸಿರಿಗುರು ಪುರಂದರವಿಠಲ। ಪರಬೊಮ್ಮ ನಾವ್ಯೆದುವಾ ಬನ್ನಿ।। (ಉಗ)

**ನಾರಾಯಣ ಎನ್ನಿರೋ ಶ್ರೀನರಹರಿ** **ರಾಗ: ಶ್ರೀರಂಜನಿ**

ನಾರಾಯಣ ಎನ್ನಿರೋ ಶ್ರೀನರಹರಿ ಪಾರಾಯಣ ಮಾಡಿರೋ||ಪ|| ನಾರಾಯಣನೆಂದು ಅಜಮಿಳನು ಕೈವಲ್ಯ| ಸೇರಿದನೆಂಬೊ ಸುದ್ದಿಯ ಕೇಳಿ ಅರಿಯಿರೋ||ಅ.ಪ.|| ಕಾಶಿಗೆ ಹೋಗಲೇಕೆ| ಕಾವಡಿಯನೆ ಪೊತ್ತು ಬೇಸತ್ತು ತಿರುಗಲೇಕೆ|| ವಾಸುದೇವನ ನಾಮ ಬಾಯ್ತುಂಬ ನೆನೆದರೆ| ಕ್ಲೇಶಗಳೆಂಬುದು ಲೇಶ ಮಾತ್ರವಿಲ್ಲ||1|| ಚೋರರ ಭಯವಿಲ್ಲವೋ ಹರಿನಾಮಕ್ಕೆ| ಯಾರ ಅಂಜಿಕೆ ಇಲ್ಲವೋ|| ಊರನಾಳುವ ಧೊರೆ ನೀತಿಭೀತಿಗಳಿಲ್ಲ| ಘೋರಪಾತಕವೆಲ್ಲ ದೂರಮಾಡುವುದಕ್ಕೆ||2|| ಸ್ನಾನವ ಮಾಡಲೇಕೆ ಮಾನವರಿಗೆ| ಮೌನವ್ರತಂಗಳೇತಕೇ|| ದೀನಪಾಲಕ ನಮ್ಮ ಬೆಟ್ಟದೊಡೆಯನ್ನ| ಧ್ಯಾನಕೆ ಸರಿಯುಂಟೇ ಪುರಂದರವಿಠಲ||3||

**ಮಹದಾದಿದೇವ ನಮೋ** **ರಾಗ: ಪೂರ್ವಿಕಲ್ಯಾಣಿ-ಆದಿತಾಳ**

ಮಹದಾದಿದೇವ ನಮೋ||ಪ|| ಮಹದಾದಿದೇವ ನಮೋ| ಮಹಾಮಹಿಮನೆ ನಮೋ| ಪ್ರಹ್ಲಾದವರದ ಅಹೋಬಲ ನಾರಸಿಂಹ||ಅ.ಪ|| ಧರಣಿಗುಬ್ಬಸವಾಗೆ ತಾರಾಪಥವು ನಡುಗೆ| ಸುರರು ಕಂಗೆಟ್ಟೋಡೆ ನಭವ ಬಿಟ್ಟು|| ತರುಗಿರಿಗಳಲ್ಲಾಡೆ ಶರಧಿಗಳು ಕುದಿದುಕ್ಕೆ| ಉರಿಯನುಗುಳುತ ಉದ್ಭವಿಸಿದೆ ನರಸಿಂಹ||1|| ಸಿಡಿಲಿನಂತೆ ಗರ್ಜಿಸುತ ಕುಡಿಯನಾಲಗೆ ಚಾಚಿ| ಅಡಿಗಡಿಗೆ ಲಂಘಿಸುತ ಕಡುಕೋಪದಿಂದ|| ಮುಡಿ ಪಿಡಿದು ರಕ್ಕಸನ ಕೆಡಹಿ ನಖದಿಂದೊತ್ತಿ| ಕಡು ಉದರ ಬಗಿದೆ ಕಡುಗಲಿ ನಾರಸಿಂಹ||2|| ಸರಸಿಜೋದ್ಭವ ಹರ ಪುರಂದರಾದಿ ಸಮಸ್ತ| ಸುರರು ಅಂಬರದಿ ಪೂಮಳೆಯ ಕರೆಯೆ|| ಸಿರಿಸಹಿತ ಗರುಡಾದ್ರಿಯಲಿ ನಿಂತು ಭಕುತನ|| ಕರುಣಿಸಿದೆ ಪುರಂದರ ವಿಠಲ ನರಸಿಂಹ||3||

**ರಂಗನ ನೋಡಿರೊ** **ರಾಗ: ಭೈರವಿ-ತ್ರಿಪುಟತಾಳ**

ರಂಗನ ನೋಡಿರೊ ಸಿರಿ ನರಸಿಂಗನ ಪಾಡಿರೊ| ಮಂಗಳ ಮೂರುತಿ ಡಿಂಗರಿಗರ ಹೃತ್ಸಂಗ ಕರುಣಾಂತರಂಗಾ|| ಪ|| ತನುಜನ ಜನಕನು ಕೊಲ್ಲಲು ಮೊರೆಯಿಡೆ ಬಂದಾ| ಕಂಭದೊಳಿಂದ| ಮನುಜಕೇಸರಿ ರೂಪವಧರಿಸಿದ ನಿಜ ಲೋಕಸ್ವಾಮಿ| ಅಂತರ್ಯಾಮಿ|| ದನುಜರ ಉದರ ಬಗೆದು ಕರುಳಮಾಲೆ ಇಟ್ಟಾ| ಕೊರಳೊಳು ದಿಟ್ಟಾ| ವನಜ ಭವಾದ್ಯರು ಜಯಜಯವೆನುತಿರೆ ಮೆರೆದಾ| ಪ್ರಹ್ಲಾದ ವರದಾ||1|| ಮನದಲಿ ಬೇಡಿದ ಭಾಗ್ಯವ ಕೊಡುವನು ಚಲುವಾ| ಭಕುತರಿಗೊಲಿವಾ| ಅನುದಿನದಲಿ ಅನುಕಂಪನು ಹರಿ ನಮಗೆಲ್ಲಾ| ಭಕ್ತವತ್ಸಲಾ|| ಘನ ಮಹಿಮನು ಪರಿಪೂರ್ಣಗುಣಾಂಬುಧಿ ತೇಜ| ರಾಜಾಧಿರಾಜ| ಜನುಮ ಜನುಮದಲಿ ಜನನಾದಿಗಳಿಗೀತ ಮುಖ್ಯ| ಕರ್ತನು ಸತ್ಯ||2|| ಕನಕ ಮುನೀಶ್ವರ ತಪವನು ಮಾಡಲು ಮೆಚ್ಚಿ| ಬಂದನು ಮೆಚ್ಚಿ| ಕನಕ ವರುಷವನು ಗರೆವುದು ಅಂದಿನದಿನದಿ| ಆನಂದವನಧಿ|| ಕನಕ ನೃಕೇಸರಿ ಎನಿಸಿದಾ ಅಂದಿನಾರಭ್ಯಾ| ಈತನೇ ಸಭ್ಯಾ| ಅನಳನಯನರೂಪ ಲಿಂಗಾಕೃತಿಯಾ ಪೊಳೆವಾ| ನುತಿಸಲು ಸುಳಿವಾ||3|| ಗುಣದಲಿ ತಿಳಿವುದು ರುದ್ರಗೆ ಹರಿ ರೂಪವಿಲ್ಲಾ| ಇದು ಪುಸಿಯಲ್ಲಾ| ವನಜನಾಭಗೆ ನಾನಾ ರೂಪಗಳುಂಟೆಂದು ವೇದಾ| ಪೋಳ್ವುದುನೋಡಾ| ಪ್ರಣತನಾಗದ ಇನಿತಾಗದ ಪಾಪಿಷ್ಠ ಮನುಜಾ| ಅವನೇ ದನುಜಾ| ಗಣನೆ ಮಾಡದಲಿರಿ ಇವರನು ಸುಜನರು ಇಂದೇ| ನಮಗೀತ ತಂದೆ||4|| ಇವನಂತೆ ಒಪ್ಪುವ ಪೊಂಪಾನಿಧಿಯೊಳು ಧನದಾ| ದಿಕ್ಕಿಲ ಗಾಥಾ| ಮುನಿಜನ ಸಮ್ಮತ ಶ್ರುತಿ ಉಕ್ತಿಗಳಲಿ ಅಕ್ಕು| ಕೇಳೀವಾಕು| ಮಣಿದು ನಮಿಸಿ ಒಮ್ಮೆ ಧ್ಯಾನವ ಮಾಡಲು ಭಕುತಿ| ಉಂಟುವಿರಕುತಿ| ಹನುಮದೀಶ್ವರ ನಮ್ಮ ವಿಜಯವಿಠಲ ನರಸಿಂಗಾ| ರಿಪುಗಜಸಿಂಗಾ ||5||

**ರಂಗನ ನೋಡಿರೈ** **ರಾಗ: ನಾದನಾಮಕ್ರಿಯ, ಅಟ್ಟತಾಳ**

ರಂಗನ ನೋಡಿರೈ ರಾಜಕುವರ ನರ| ಸಿಂಗದೇವನಮ್ಮ ದೇವಕಿ ಸುತನ ||ಪ|| ಹಮ್ಮಿನ ತಾಯಿತ ತೋಳ ಬಾಪುರಿಯೊ| ಘಮ್ಮನೆ ಘಲ್ಲೆಂಬ ಗೆಜ್ಜೆಯ ಧ್ವನಿಯೋ| ಸುಮ್ಮ ಹಿಮನ ಕಿವಿಯಲ್ಲಿ ಚೌಕುಲಿಯೋ| ತಿಮ್ಮರಾಯನಿಟ್ಟ ಸೊಬಗಿನ ಬಗೆಯೋ||1|| ಶುಕ್ಕುರುವಾರದ ಪೂಜೆಗೊಂಬುವನ| ಸಕ್ಕರೆ ಪಾಲ್ ಮೊಸರು ಬೆಣ್ಣೆ ಮೆಲ್ಲುವನ|| ಫಕ್ಕನೆ ಸುರರಿಗೆ

ಅಮೃತವಿತ್ತವನ। ರಕ್ಕಸಕುಲವೈರಿ ರಾವಣಾಂತಕನ॥2॥ ಪಾಪವಿನಾಶಿನಿ ಸ್ನಾನವಮಾಡಿ। ಪಾಪಗಳೆಲ್ಲವು ಬೇಗ ಬಿಟ್ಹೋಡಿ। ಈ ಪರಿ ದಿನದಿನ ಮೂರುತಿನೋಡಿ। ಶ್ರೀಪತಿ ಪುರಂದರವಿಠಲನ ಪಾಡಿ ॥3॥

**ನರಸಿಂಹ ವಜ್ರ ಸಿಂಹ** — ರಾಗ: ಅಸಾವೇರಿ ನರಸಿಂಹ ವಜ್ರ ಸಿಂಹ।

ಸರಸಿಜನಾಭಾ ದಕ್ಷಿಣ ಶರಧಿನಿವಾಸಾ ॥ ಪ ॥ ಹಿರಣ್ಯಕಶ್ಯಪು ತಾ ಪ್ರಹ್ಲಾದನಾ ಬಾಧಿಸಲು। ಪರಿಯ ದೈವವೆ ಮೊರೆ-ಹೋಗಲೂ। ಹಿರಿದಾಗಿ ಕೇಳಿ ಹಿತದಲಿ ಬಂದು ಬೊಬ್ಬಿಡಲು। ಹಿರಣ್ಯ ಗರ್ಭಾದಿಗಳು ಹಿರಿದು ಚಿಂತಿಸಲೂ ॥ 1 ॥ ಭುಗಿಲೆನೆ ದಿಗಿಲೆನೆ ದಿಕ್ಕಿನಲಿ ಪ್ರತಿ ಶಬ್ದ ಪುಟ್ಟುತಿರೆ। ಪಗಲಿರುಳು ಬಂದೆಂದರು ಸಕಲರು। ಝುಗಝುಗಿಪ ಬೆಳಗು ಕವಿದುದು ಮೂರು ಲೋಕಕ್ಕೆ। ಉಗುರು ಕೊನೆ ಪೊಗಳಿ ವೇದಗಳು ಬೆರಗಾಗಿ ॥ 2 ॥ ರಕ್ಕಸ ನೋಡಲು ಬಗೆದು ಕರುಳು ಕೊರಳಿಗೆ ಮಾಲೆ। ಇಕ್ಕಿ ಭಕ್ತಗೆ ಮೆಚ್ಚಿ ವರವನಿತ್ತಾ। ಕಕ್ಕಸದ ದೈವ ಅನಂತ ಪದುಮನಾಭ। ಮುಕ್ತಿದಾಯಕ ವಿಜಯವಿಠ್ಠಲ ಮಹದಾ॥ 3 ॥

**ಸಿಂಗನ ಏರಿದ ನರಸಿಂಗ** — ರಾಗ: ಮೋಹನ

ಸಿಂಗನ ಏರಿದ ನರಸಿಂಗ। ತೋಮರವ ಪಿಡಿದೂ॥ ರಂಗ ವೈಭೋಗದಿಂದ। ನಲಿದು ಚತು। ರಂಗ ಬೀದಿಯೊಳು ಮೆರೆದಾ॥ಪ॥ ಮುತ್ತಿನ ಕೀರಿಟ ಮೇಲೆ ಎತ್ತಿದ ಸತ್ತಿಗೆ ಪೊಳೆಯೆ। ಸುತ್ತಮುತ್ತ ಬೋಮ್ಮಾದಿಗಳು। ವಾಹನರಥ। ಹತ್ತಿಬರುವ ಪುರದ ಜನಗಳು॥1॥ ಸನಕ ಸನಂದನ ಸನತ್ಸುಜಾತ ಸನತ್ಕುಮಾರ। ಮುನಿವರರು ವೇದ ಘೋಷಣೆ ಉಚ್ಚರಿಸುತ್ತ ಅನಿಮಿಷರಾಗಿ ಇಚ್ಛೈಸುತಾ ॥2॥ ಗಂಧರ್ವಾದಿಗಾಯನಾ ನಾರದನು ಪಾಡುತ್ತಾ ಬರೆ। ಇಂದು ಮೌಳಿ ಮುಂದೆ ಕುಣಿಯುತಾ। ತಕ್ಕಥೈ। ಎಂದು ತುಂಬರನು ಹಾಡಿ ಪಾಡುತಾ। ವೇಶ್ಯ ಜನರು ರಂಭೆ ಊರ್ವಶಿ ಪಾತ್ರ ಮಾಡುತಿರೆ॥3॥ ದಾಸಾನು ದಾಸರು ಪಾಡುತಾ। ಸಲಹೊ ಶ್ರೀನಿ। ವಾಸನೆಂದು ಬೇಡಿಕೊಳ್ಳುತಾ। ಮಂಗಳ ಪಾಂಗ ಸಾಂಗೋಪಾಂಗದಿಂದ ಒಪ್ಪೆ ಅಲಮೇ। ಲ್ಮಂಗ ವಿಜಯವಿಠ್ಠಲ। ತಿರುಪತಿ ತಿರುವೆಂಗಳೇಶ ಶ್ರೀ ವೆಂಕಟೇಶಾ॥4॥

**ಏನು ಕಾರಣ ಬಾಯಿ ತೆರೆದಿ** — ರಾಗ: ಕಾಂಬೋದಿ-ಅಟ್ಟತಾಳ

ಏನು ಕಾರಣ ಬಾಯಿ ತೆರೆದಿ-ಪೇಳೆಲೊ। ದಾನವಾಂತಕ ಅಹೋಬಲ ನಾರಸಿಂಹನೆ॥ಪ॥ ನಿಗಮ ಚೋರನ ಕೊಲಲು ತೆರೆದೆಯೋ ಬಾಯ। ನಗವ ಬೆನ್ನಲಿ ಪೊತ್ತು ನಡುಗಿ ತೆರೆದೆಯೋ ಬಾಯ ಭೂ। ಮಿಗಳ್ಳನ ಕೊಂದು ಬಳಲಿ ತೆರೆದೆಯೊ ಬಾಯ। ಜಗವರಿಯೆ ಪೇರುಪೊಂದಿದ ಪ್ರಹ್ಲಾದವರದ ಅಹೋಬಲನಾರಸಿಂಹನೆ॥1॥ ಬಲಿಯ ದಾನವ ಬೇಡಲೆಂದು ತೆರೆದೆಯೋ ಬಾಯ। ಛಲದಿಂದ ಕ್ಷತ್ರಿಯರ ಕೊಲಲು ತೆರೆದೆಯೊ ಬಾಯ। ಕುಲಸತಿಯ ಅರಸಿ ಕಾಣದೆ ತೆರೆದೆಯೊ ಬಾಯ। ಮಲೆತು ಮಾವನ ಕೊಂದು ನಿಂದೆ-ಇಂಥ ಇಳಿಯಬಾರದ ಭೂಮಿಗಿಳಿದ ನಾರಸಿಂಹ॥2॥ ನಾರಿಯರ ಚೆಲ್ವಿಕೆಯ ನೋಡಿ ತೆರೆದೆಯೊ ಬಾಯ। ಏರಿ ಅಶ್ವವ ಮೆಟ್ಟಿ ಅಳಲಿ ತೆರೆದೆಯೊ ಬಾಯ। ಮಾರಪಿತ ಕಾಗಿನೆಲೆಯಾದಿಕೇಶವ ರಂಗ। ಧೀರ ಶ್ರೀನಾಥ ಭವನಾಶಪೇಳೋ ಪೇಳು ಏತಕೆ ಅಹೋಬಲ ನರಸಿಂಹನೆ॥3॥

**ನಂಬು ನಾರಾಯಣನ** — ರಾಗ: ನಾಟ-ಝಂಪೆತಾಳ

ನಂಬು ನಾರಾಯಣನ ನಂಬೊ ನರಹರಿಯ। ನಂಬಿದಾ ಭಕ್ತ ಕುಟುಂಬ ಸಾರಥಿಯ॥ಪ॥ ಬಲಿನಂಬಿ ಪಾತಾಳ ಲೋಕಕರಸಾದನದೆ। ಕುಲದ ಪ್ರಹ್ಲಾದ ನಿಜವ ಕಂಡ। ಕಲಿ ವಿಭೀಷಣ ನಂಬಿ ಲಂಕೆಯಲಿ ಸ್ಥಿರವಾದ। ಛಲದ ಪಾರ್ಥನು ನಂಬಿ ವಿಶ್ವರೂಪವ ಕಂಡ॥1॥ ಅಂಬರೀಷನು ನಂಬಿ ವೈಕುಂಠವೇರಿದನು। ಹಂಬಲಿಸಿ ಶಶಿಧರನು ಉರಿಯ ಗೆದ್ದ। ಕುಂಭೀನೀದೇವಿ ತಾ ಬಂಧನವ ಕಳೆದಳು। ಅಂಬುಜಾಕ್ಷಿ ದ್ರೌಪದಿಯ ಮಾನ ಉಳುಹಿಕೊಂಡಳು॥2॥ ಅತಿಭಕುತರಿಗೆ ಮೆಚ್ಚಿ ಗತಿ ಮೋಕ್ಷವಿತ್ತನು। ಮತಿಭ್ರಷ್ಟ ಅಜಮಿಳನ ಉದ್ಧಾರ ಮಾಡಿದ। ಕ್ಷಿತಿಯೊಳಗೆ ಕಾಗಿನೆಲೆಯಾದಿ ಕೇಶವನಾದ। ಪತಿತಪಾವನ ಪರಮ ಪುರುಷೋತ್ತಮನನು॥ 3 ॥

**ನಂಬು ನರಮೃಗನಾ** **ರಾಗ: ಕಲ್ಯಾಣಿ**

ನಂಬು ನರಮೃಗನಾ। ಮನುಜಾ। ಅಂಬುಧಿವಾಸ ಶ್ರೀ ದೇವನಾ।।ಪ।। ಕುಟಿಲ ಶಠ ಸುರನುಪಟಳ। ಘಟಿಸೇ ಖಟಮನ ವ್ಯಾಟಪ್ತ ಬಾಯೆನೆ ಶರಣಾ। ಖಟಖಠಾನೆಂದು ವಿಸ್ಫುಟವಾಗಿ। ಸ್ತಂಭ ಘಟಪಟುವಂತೆ ಯಾರ್ಭಟದಿಂದಲೊಗೆದನಾ।।1।। ಅರಿಯ ನರದವನ ಕರುಳ ಸರ ಧರಿಸಿ। ಭರದಿ ಪೊರೆದೆ ಡಂಗುರನಾ ಹರನಾ। ಗುರು ಮಹೀಪತಿ ಪ್ರಭು ಚರಣ ಚರನೆನಿಸಿದ। ಸ್ಮರಹರ ಅಜಸುರ ಪರರೊಡೆಯನಾ।।2।।

**ನಾರಾಯಣನೆನು ಮನವೆ** **ರಾಗ: ಕಾಂಬೋದಿ–ಝಂಪೆತಾಳ**

ನಾರಾಯಣನೆನು ಮನವೆ ನರಹರಿಯ ನೆನೆ ಮನವೆ। ಘೋರ ದುರಿತಗಳ ಬೆದರಿಸಿ ಓಡಿಸುವುದು।। ಪ ।। ಗುರುವಿನುಪದೇಶದಲಿ ಪರಮ ರಹಸ್ಯವನರಿತು। ಮರೆಯದೆಲೆ ಅಲ್ಲಿ ಅಧಿಕಾರಿಯಾಗೊ। ತಿರುಮಂತ್ರವನು ಭಜಿಸು ತಿರುಲಾಂಛನವ ಧರಿಸು। ಪರಮವೈಷ್ಣವರ ಪಂಕ್ತಿಯ ಸೇರು ಮನವೇ।। 1 ।। ಕುಲಫಲಂಗಳ ಬಿಟ್ಟು ಬಲು ಪಾಶಗಳ ತರಿದು। ಹಲವು ಕೊಂಬೆಗೆ ನೀನು ಹರಿದಾಡದೆ। ಸುಲಭದಲಿ ಶ್ರೀಪಾದತೀರ್ಥ ಪ್ರಸಾದವನು। ನೆಲೆಗೊಳಿಸಿ ಆತ್ಮನಿಗೆ ನಿತ್ಯ ಸುಖಿಯಾಗೊ।। 2 ।। ಕಲಿಯುಗಕೆ ಗೌಡನಿವ ಸಂಗಾತಿ ಮಂತ್ರಿಸುತ। ಕಲಿಯುಗಂಗಳನೆಲ್ಲ ಪೊರೆವಾತನೀತ। ಜಲಜಾಕ್ಷ ಕಾಗಿನೆಲೆಯಾದಿ ಕೇಶವನ ಮನ। ವೊಲಿಸಿ ಭಜಿಸದವನು ಹುಚ್ಚು ಕುರುಬ।। 3 ।।

**ಶ್ರೀನಾರಸಿಂಹ ಚಿತ್ಸುಖಮಯ** **ರಾಗ: ಸಾವೇರಿ–ಝಂಪೆತಾಳ**

ಶ್ರೀನಾರಸಿಂಹ ಚಿತ್ಸುಖಮಯ ಕಾಯಾ।।ಪ।। ದಾನವಾರಣ್ಯ ಪಾವಕ ವೀತ ಶೋಕಾ।।ಅ.ಪ।। ಅನತೇಷ್ಟ ಪ್ರದಾಯಕ ನಮಿಸುವೆನು ಸದಾ। ಮೈನಾಕಿ ಧವ ಬಿಂಬ ಸುರಮುನಿ ಕದಂಬಾ। ಧ್ಯಾನಗಮ್ಯನೆ ಭಕ್ತರಾಪತ್ತುಗಳ ಕಳೆಯೋ। ನೀನೆ ಗತಿಯೆಂಬೆ ಮುನಿ ಮನವನಜ ದುಂಬೀ।।1।। ಶ್ರವಣ ಮಂಗಳ ನಾಮಧೇಯ ನಿರ್ಜಿತ ಕಾಮ। ಸವನ ದ್ವಿತೀಯಾ ರೂಪವಿಗತ ಕೋಪಾ। ಸ್ವವಶ ಸ್ವಾತಂತ್ರ್ಯ ವಿಖನಸಪೂಜ್ಯ ವಜ್ರ ನಖ। ಪವಿದಂಷ್ಟ್ರದರ್ಶ ಭಾರ್ಗವಿ ರಮಣನಶನಾ ।।2।। ಆದಿ ದೇವಾನಂತ ಮಹಿಮನೇ ನಿಶ್ಚಿಂತ। ಕಾದುಕೋ ನಿನ್ನವರ ವಿಬುಧವರ ಪ್ರವರಾ। ಮೋದಮಯ ಶ್ರೀ ಜಗನ್ನಾಥವಿಠ್ಠಲರೇಯ। ವೈದಿಕವ ನುಡಿಸು ಲೌಕಿಕ ಮಾರ್ಗ ಬಿಡಿಸೋ।।3।।

**ನೀಲ ತರಂಗಿಣಿ ನಾರಸಿಂಹ** **ರಾಗ: ಆನಂದಭೈರವಿ**

ನೀಲ ತರಂಗಿಣಿ ನಾರಸಿಂಹ।।ಪ।। ಸಾರಿದೆನೊ ತವಪಾದ ಪಂಕಜ। ತೋರೋ ಮನದಲಿ ತವಕದಿ।।ಅ.ಪ.।। ನಾರದನುತ ಚಿತ್ ಶರೀರಗೆ। ಶ್ರೀಭೂ ದುರ್ಗಾರಮಣ ದುರಿತಾರಿ। ಬ್ರಹ್ಮಸಮೀರ ಮುಖ ವಿಭುದಾರ್ಚಿತ। ಚಾರು ಚರಣಯುಗ ಕ್ಷೀರಾಬ್ಧಿಶಯನ। ಮೂರು ಲೋಕದಸೂರಿಗಮ್ಯ ಸುಖಾತ್ಮಕ।।1।। ವೇದವೇದ್ಯ ಸಂಸಾರೋದಧಿ ತಾರಕ। ವೇದ ಭೇದ ವಿಷಾದವೇ ಮೊದಲಾದ ದೋಷ ವಿವರ್ಜಿತ। ಶ್ರೀದ ಶ್ರೀಶ ಅಣ್ಣನಾದ ಆತ್ಮಕಾಮ ಬಾದರಾಯಣ ಭಕ್ತವರ। ಪ್ರಹ್ಲಾದ ಪೋಷಕ ಪಾಹಿಮಾಮ್।।2।। ಸ್ಥಿತಹೃದ್ಯ ಜಗನ್ನಾಥ ವಿಠಲ ನಿನ್ನ। ಮಾತು ಮಾತಿಗೆ ಸ್ಮರಿಸುತಿಹ ಸಚ್ಚೇತನನನು ನೀ ಸರ್ವದಾ। ವೀತ ಶೋಕ ಭವಭೀತಿ ಬಿಡಿಸಿದವ। ದೂತರೊಳಗಿಡು ಮಾತರೀಶ್ವಗೆ। ಭೂತಭಾವನ ಭವ್ಯದ।।3।।

**ನರಸಿಂಹ ಪಾಹೀ ಲಕ್ಷ್ಮೀ** **ರಾಗ: ಶಂಕರಾಭರಣ–ಅಟ್ಟತಾಳ**

ನರಸಿಂಹ ಪಾಹೀ ಲಕ್ಷ್ಮೀ ನರಸಿಂಹ।। ಪ।। ನರಸಿಂಹ ನಮಿಪೆ ನಾನಿನ್ನ। ಚಾರು। ಚರಣ ಕಮಲಕೆ ನೀನೆನ್ನ, ಆಹಾ। ಕರವ ಪಿಡಿದು ನಿಜ ಶರಣನೆಂದೆನಿಸು ಭಾ-। ಸುರ ಕರುಣಾಂಬುಧೆ ಗರುಡವಾಹನ ಲಕ್ಷ್ಮೀ ।।ಅ.ಪ.।। ತರಳ ಪ್ರಹ್ಲಾದನ ನುಡಿಯ ಕೇಳಿ। ತ್ವರಿತದಿ ಬಂದೆ ಎನ್ನೊಡೆಯ। ಏನು ಕರುಣಾಳು ಭಕ್ತರ ಭಿಡೆಯ ಮೀರ। ಲರಿಯೆ ನೆಂದೆಂದು। ಕೆಂಗಿಡಿಯ ಆಹಾ। ಭರದಿಂದುಗುಳುತ ಬೊಬ್ಬಿರಿದು ಬೆಂಬೊತ್ತಿ ಕ-। ರ್ಬುರ ಕಶಿಪುವಿನ ಮುಂಗುರುಳು ಪಿಡಿದೆ ಲಕ್ಷ್ಮೀ ।।1।। ಪ್ರಳಯಾಂಬು ನಿಧಿ ಘನ ಘೋಷದಂತೆ। ಘುಳಿಘುಳಿಸುತಲಿ. ಪ್ರದೋಷ ಕಾಲ। ತಿಳಿದು ದೈತ್ಯನ ಅತಿರೋಷದಿಂದ। ಪ್ಪಳಿಸಿ ಮೇದಿನಿಗೆ ನಿರ್ದೋಷ ಆಹಾ। ಸೆಳೆಸೆಳೆಯುತ ಚರ್ಮಸುಲಿದು ಕೆನ್ನೆತ್ತರೋ-। ಕುಳಿಯನಾಡಿಗೆ ದಿಶಾವಳಿಗಳೊಳಗೆ ಲಕ್ಷ್ಮೀ ।।2।।

ಕ್ರೂರ ದೈತ್ಯನ ತೋರಕರುಳ ತೆಗೆ। ದ್ವಾರ ಮಾಡಿದೆ ನಿಜ ಕೊರಳ ಕಂಡು। ವಾರಿಜಾಸನ ಮುಖ್ಯರರಳ ಪುಷ್ಪ। ಧಾರೆಗರೆದರ್ವೇಗ ತರಳ ಆಹಾ। ಧೀರ ಪ್ರಹ್ಲಾದಗೆ ತೋರಿ ತ್ವದಂಘ್ರಿ ಸ-। ರೋರುಹವನು ಕಾಯ್ದ ಕಾರುಣ್ಯನಿಧಿ ಲಕ್ಷ್ಮೀ॥3॥ ಜಯಜಯದೇವವರೇಣ್ಯ ಮಹ। ದ್ಭಯ ನಿವಾರಣ ಅಗ್ರಗಣ್ಯ ಗುಣ। ತ್ರಯದೂರ ದುರಿತಾರಣ್ಯ ಧನಂ। ಜಯ ಜಗದೇಕ ಶರಣ್ಯ ಆಹಾ। ಲಯವಿವರ್ಜಿತ ಲೋಕತ್ರಯ ವ್ಯಾಪ್ತ ನಿಜಭಕ್ತ। ಪ್ರಿಯ ಘೋರ ಭಯಹರ ದಯಮಾಡೆನ್ನನು ಲಕ್ಷ್ಮೀ॥4॥ ಕುಟಿಲ ದ್ವೇಷದವ ನೀನಲ್ಲ ನಿನ್ನಾ। ರ್ಭಟಕಂಜಿದರು ಸುರರೆಲ್ಲ ನರ। ನಟನೆ ತೋರಿದೆ ಲಕ್ಷ್ಮೀನಲ್ಲ ಇದು। ಸಟೆಯಲ್ಲ ಅಪ್ರತಿಮಲ್ಲ ಆಹಾ। ವಟ ಪತ್ರಶಯನ ಧೂರ್ಜಟಿ ವಂದ್ಯ ಜಗನ್ನಾಥ। ವಿಠಲ ಕೃತಾಂಜಲಿ ಪುಟದಿ ಬೇಡುವೆ ಲಕ್ಷ್ಮೀ॥5॥

**ಪಾಹಿಮಾಂ ಪಾಹಿ** **ರಾಗ: ಸೌರಾಷ್ಟ್ರ–ಅಟ್ಟತಾಳ**

ಪಾಹಿ ಮಾಂ ಪಾಹಿ ಪ್ರಹ್ಲಾದವರದ - ಪಾಹಿ ಪದ್ಮದಳಾಯತಾಂಬಕ। ಪಾಹಿ ಪದ್ಮಾಸನ ಜನಕಮಾಂ - ಪಾಹಿ ಪನ್ನಗನಗನಿಕೇತನ॥ ಪ ॥ ವಾಸುದೇವಾನಂತ ವೇದವ್ಯಾಸ ದತ್ತಾತ್ರೇಯ ಹಂಸಹ-। ಯಾಸುರಾಮರ್ದನ ಹರಿ ಋಷಭ ಮಹಿ - ದಾಸ ತಾಪಸ ಯಜ್ಞನಾಮಕ॥ ವಾಸವಾನುಜ ವಿಶ್ವತೈಜಸ - ಕೇಶವ ಕೈವಲ್ಯದಾಯಕ। ಕೇಶಿಭಂಜನ ವೈಜಯಂತಿ ವಿಭೂಷಣ - ವಿಶೇಷಜ್ಞಭೂರಿದ ಪಾಹಿ ॥ 1 ॥ ಮಾಧವ ಪ್ರದ್ಯುಮ್ನ ಮಧ್ವಾರಾಧಿತ - ಪದಾಂಬುಜ ಅಧೋಕ್ಷಜ। ಶ್ರೀಧರ ಜನಾರ್ಧನ ತ್ರಿವಿಕ್ರಮ - ವೇದಗರ್ಭ ವಿರಿಂಚಿನುತ ಗ-॥ ದಾಧರ ಗಯಾಸುರ ವಿಮರ್ದನ - ಮೋದಮಯ ಭೂದೇವಿಪ್ರಿಯ ದಾ-। ಮೋದರ ದಯಾಸಾಂದ್ರಧಾರ್ಮಿಕಾ-ನಾದಿ ಪುರುಷ ನಮಿಪೆ ಸಂತತ ಪಾಹಿ ॥ 2 ॥ ನಂದಗೋಪಕುಮಾರ ಗೋಪೀ - ವೃಂದ ತೋಷಿತ ಅನಿಮೇಶ ಸಂ -। ಕ್ರಂದನ ಸದಾಪೂಜ್ಯ ವರ ಕಾ - ಲಿಂದಿತಟ ಸುವಿಹಾರಿ ಪಾಂಡವ॥ ಬಂಧೋ ನೃಪ ಮುಚುಕುಂದವರದ - ಅಂಧಕರಿಪು ವೃಕೋದರ ಪ್ರಿಯ। ಇಂದಿರಾ ಸನ್ಮಂದಿರನೆ ಗೋ-ವಿಂದ ಗೋಪಾಲ ಪಾಲಕ ಪಾಹಿ ॥ 3 ॥ ಮೀನ ಕೂರ್ಮಕ್ರೋಡ ನರಹರಿ - ಮಾಣವಕ ಭೃಗುರಾಮ ಮುಖ್ಯ-। ಪ್ರಾಣಪ್ರಿಯ ರಾವಣಕುಲಾಂತಕ - ಧೇನುಕಾಸುರ ಮಥನ ವಸ್ತ್ರ ವಿ-॥ ಹೀನ ಬುದ್ಧನೆ ಕಲ್ಕಿ ಕಲಿಮುಖ - ದಾನವಾಂತಕ ಧರ್ಮವಿತ್ತು ಪ್ರ-। ಧಾನ ಪುರುಷೇಶ್ವರ ಕೃಪಾಕರ - ಜ್ಞಾನಬಲ ಸುಖಪೂರ್ಣ ಪೋಷಕ ಪಾಹಿ ॥ 4 ॥ ನೀತ ನಿಜಬಲ ಮಾತುಳಾಂತಕ - ಶ್ವೇತ ವಾಹನ ಸೂತ ತ್ರಿಗುಣಾ-। ತೀತ ಭವನಿಧಿಪೋತ ಮೋಕ್ಷ ನಿ-ಕೇತನ ಪ್ರದ ಭೂತಭಾವನ ॥ ಧೌತಪಾತಕ ವ್ರಾತ ತ್ರಿಜಗಖ್ಯಾತ - ನಿರ್ಗತ ಭೀತ ಭಕ್ತಿಸು-। ವೇಶನ ಪ್ರಿಯದಾತ ಅಷ್ಟವಿ-ಭೂತಿದಾ ಜಗನ್ನಾಥವಿಠಲಾ ॥ 5 ॥

**ಉಡುಪಿಯ ರಂಗ** **ರಾಗ: ಮೋಹನ–ಮಿಶ್ರಛಾಪುತಾಳ**

ಉಡುಪಿಯ ರಂಗ ಕಲ್ಲಕಂಬದಿಂದೊಡೆದ ನರಸಿಂಹ। ಬಿಡದೆಮ್ಮ ಸಲಹೋ ಕೈವಿಡಿ ಇನ್ನೇಕೆ ತಡವೊ॥ಪ॥ ಕರೆಯದ ಮುನ್ನ ಬಂದೆ ಖಳನಾನಿದಿರಲಿ ನಿಂದೆ। ಅರಿಯದವರ ಸೀಳ್ದೆ। ಅಸಮನೆನಿಸಿ ಬಾಳ್ದೆ॥1॥ ಎನಗೆ ನೀನೆ ಬಂಧು ಎಲೆಲೆ ಕರುಣಾಸಿಂಧು। ಧನದಾಸೆಯ ಬಿಡಿಸೊ ಧರ್ಮಮಾರ್ಗದಿ ನಡೆಸೊ॥2॥ ಹಯವದನನಾಗಿ ಹರಿ ನೀ ದೈತ್ಯರ ನೀಗಿ। ನಯದಿ ವೇದವ ತಂದೆ ನಳಿನನಾಭನೇನೆಂಬೆ॥3॥

**ನೀ ಬಾರದಿರೆ ಬಾರನು** **ರಾಗ: ಬೇಹಾಗ್**

ನೀ ಬಾರದಿರೆ ಬಾರನು ಶ್ರೀನರಹರಿ॥ಪ॥ ನೀ ಬಾರದಿರೆ ನೀರಜಾಕ್ಷನು ಹರಿ। ನಾನು ನಂಬಿದೆನಿಮ್ಮ ನೀವು ಪಾಲಿಸಬೇಕು॥ಅ.ಪ.॥ ನೀನು ಆತನ ಕಾಯ್ದಿ ತಾನು ಆತನ ಕಾಯ್ದ। ನೀನು ಬಿಡಲು ಬಿಟ್ಟ ಭಾನುಸುತನ ಕೃಷ್ಣ॥1॥ ನಿಮ್ಮ ಮಾತುಗಳನ್ನು ಒಮ್ಮೆ ಮೀರನು ಹರಿ। ನಮ್ಮ ಬಿಡುವದ್ಯಾಕೊ ಬ್ರಹ್ಮಪದಾರ್ಹನೆ॥2॥ ಇಂದು ನಾಳೆನ್ನದೆ ಆನಂದ- ತೀರ್ಥರೆ ನಮ-। ಗಿಂದು ತೋರಿಸು ಹರಿಯ ಇಂದಿರೇಶನ ಪ್ರಿಯ॥3॥

**ಚೆಲ್ವ ಕಂಗಳ ಚಲ್ವಕಾರ** **ರಾಗ: ಕಾಂಭೋಜಿ–ಝಂಪೆತಾಳ**

ಚೆಲ್ವ ಕಂಗಳ ಚಲ್ವಕಾರ ನೋಡ ಬಂದೆ ನಿನ್ನ ಬಳಿ ಸಾರಿ ಬಂದೆ॥ಪ॥ ಚಕ್ರಧರ ಧುರಧೀರ ನಾರಸಿಂಹ ನಾನು ಬಂದೆ

ನಾನು ಬಂದೆ ।।ಅ.ಪ।। ಕಲ್ಲೊಳು ವಿಷಯ ಪುಟ್ಟಿಸಿದನಾ ಶುಭ। ವಲ್ಲದ ದಿವಸದೊಳಿರಾ ನೋಡಿ। ಇಲ್ಲದ ಬಯಲ ನಿಂದೆಯ ಪೊತ್ತು ಶುಕಾ। ಮಲ್ಲರೊಡನೆ ಕಾದಿ ಮಲೆತ ನಾಲ್ವರ ಕೊಂದು ಮಡದಿಗೆ ರತ್ನ ತಂದುದರಿಂದ ।।1।। ಮಡದಿಯ ಮನೆಯ ಅರ್ಭಕನಾಗಿ ಬಲು। ಗಡಿಯ ದಾನವನ ಕೊಂದನ ಸೂನು। ಬಡನಡುವಿನ ಠಾವಿಗೆ ಸಿಲ್ಕಿ ಸುಖ। ಪಡದಿರೆ ರಾಯನಾ ಹಿಡಿದು ತೋಳು ಕಟ್ಟಿದುದರಿಂದ।।2।। ಮೂಲ ವೃಕ್ಷದಾಲಾರ ಮುಂದೆಯ ದಾನವರಿ। ದರ್ಾಲಯ ದಹಿಪನೆಂಬುದಯ್ಯನ। ಬಲಮಾಡಿ ಬಲಗೆ ಇಂದುರುಹಿದೆ ಕಾಗಿ। ನೆಲೆಯಾದಿ ಕೇಶವ ಖಳನ ಗರ್ಭವಿಟ್ಟನ ಪ್ರಹ್ಲಾದಗೆ ಪ್ರಸನ್ನ ವಾದುದರಿಂದ ।।3।।

### ಕೆರೆಯನು ದಾಟಲು — ರಾಗ: ಆಭೋಗಿ

ಕೆರೆಯನು ದಾಟಲು ಅರಿಯದ ಜನ । ಭವ ಶರಧಿಯ ದಾಟುವರೆ । ಶ್ರೀ ನರಹರೇ ।।ಪ।। ಹರುಷದಿಂದಲಿ ಕರವ ಪಿಡಿಯದಿರೆ । ತೊರೆಯ ದಾಟಲಳವೇ ಈ ಧರೆಯೊಳು ।।ಅ.ಪ.।। ಹಲವು ಜನ್ಮಗಳಲಿ ಗಳಿಸಿದ ಅಘಗಳ । ಅಲೆಗಳೊಳಗೆ ಸಿಲುಕಿ ಸಂತತ । ಮುಳುಗಿ ಮುಳುಗಿ ಕಟು ಜರಗಳ ಕುಡಿಯುತ। ನಳಿನನಾಭ ನಿನ್ನೊಲುಮೆಯಿಂದಲ್ಲದೆ ।।1।। ಚೂರ್ಣಗಳಾದುವು ವಿವಿಧ ನಾವೆಗಳು । ಈ ಆರ್ಣವದಲಿ ಸಿಲುಕಿ ಸುಲಭದಿ । ಪೂರ್ಣ ಪ್ರಮತಿಗಳ ಮತವನರಿತು ನಿನ್ನ । ಪೂರ್ಣ ಪ್ರಸನ್ನತೆ ನಾವೆಯಿಂದಲ್ಲದೆ ।।2।।

### ಕುಣಿಕುಣಿಯುತ ತನ್ನ ಜನಕನ — ರಾಗ: ಸಾವೇರಿ

ಕುಣಿಕುಣಿಯುತ ತನ್ನ ಜನಕನ ಕೋಪಕೆ। ಹೊಣೆಯಾಗುತಲಿರೆ ಕ್ಷಣದಲಿ ಪೊರೆದ। ಖೂಳನು ತನ್ನಯ ಬಾಲನ ನಡತೆಯ। ತಾಳಲಾರದೆ ಕೋಪ ಜ್ವಾಲೆಯಿಂದುರಿಯುತ। ಪೇಳೋ ಇಲ್ಲಿಹನೇನೋ ತಾಳೋ ನೋಡುವೆ- ನೆಂದು। ಪೇಳಿ ಕಂಬವ ತನ್ನ ಕಾಲಲಿ ಒದೆಯಲು। ಸೀಳಿ ಛಟಛಟನೆ ತಾಳಿ ಘೋರತನು। ಖೂಳ ರಕ್ಕಸದಲಿ ಧಾಳಿಯಗೈದ। ದುರುಳ ಹಿರಣ್ಯಕನ ಕರುಳ ಬಗೆದು ತನ್ನ। ಕೊರಳಿನಲ್ಲಿ ಮಾಲೆಯಧರಿಸಿ ಸಿಡಿಯುತಿರೆ। ಉರಿಯಿಂದ ಧರಣಿಯು ತರತರ ನಡುಗಲು। ಸುರರ ಮೊರೆಯ ಕೇಳಿ ವರಲಕುಮಿಯು ನರ। ಹರಿಯನು ಸ್ತುತಿಸಲು ಮರೆತು ಕೋಪವನು। ವರಭಕುತನಿಗೆ ಪ್ರಸನ್ನತೆ ಇತ್ತ।।

### ಕರುಣಿಸು ಕರುಣಾಸಾಗರ — ರಾಗ: ಪೂರ್ವಿ–ಅಟ್ಟತಾಳ

ಕರುಣಿಸು ಕರುಣಾಸಾಗರ ನರಹರಿಯೆ ನಿನ್ನ । ಚರಣದಾಚರಣೆಗೆಚ್ಚರಾದೆನು ।।ಪ।। ಮನ ಮಲಿನವ ತೊಳೆದ ದಿನ ದೃಢದೊಳು । ಜ್ಞಾನ ಭಕ್ತಿ ವಿರಕ್ತಿಯ ಘನಾಸಕ್ರಿಯ । ಮನಗಂಡು ಮುದವಂತರೆನಿಸಿ ನಾಮಾಮೃತ ಉಣಬಲ್ಲ ಪೂತಾಂಗ ಮಾನಸರ ಸಂಗ ।।1।। ಸಭ್ಯರ ದೂಷಣ ಕೇಳುಬ್ಬಸ ಶ್ರವಣಕೆ । ಇಬ್ಬರ ಕಲಹದಿ ಶಬ್ದಗುಂದಿ । ಅಬ್ಜನಾಭನ ಬಿರುದುಬ್ಬುಬ್ಬಿ ಸುಖವೇರಿ । ಕೊಬ್ಬಿಕುಣಿವ ಕಂಲಬ್ಧ ರೂಳಿಗವ ।।2।। ವೃಂದಾವನದಲಿ ಮುಕಂದನಾಲಯದ। ಮುಂದಾ ವಿಗಿದಿಗಿತ ವಾದ್ಯ ವೃಂದದಿಂದ । ತಂದೆ ಪ್ರಸನ್ನ ವೆಂಕಟೇಂದ್ರ ಮುದ್ರಾಂಕ। ಹೊಂದುವ ಜನುಮವ ಆನಂದ ಮುನಿಮತವ ।।3।।

### ಸ್ವಾಮಿ ನರಸಿಂಹ — ರಾಗ: ಭೈರವಿ

ಸ್ವಾಮಿ ನರಸಿಂಹ ಶರಣು। ಶ್ರೀಮಹಾ ಅಹೋಬಲ ನಿಲಯ ದೇವ ಶರಣು।।ಪ।। ಭವ ನಾಶಿನಿಯ ಕೂಲಭವನ ಭಟ ಪ್ರತಿಪಾಲಿ। ಭವ ಸಹಸ್ರಾಂಬಕರ ಭಯವಿದೂರ। ಭುವನಕದ್ಭುತ ಗಾತ್ರ ಭಜಕ ಜನಾತ ಪತ್ರ। ಭವಕರ್ದಮ ಶೋಷ ಬುಧರ ಪರಿತೋಷ।।1।। ಅಣುರೇಣು ತೃಣ ವ್ಯಾಪ್ತ ಅಖಿಲರೊಳು ನಿರ್ಲಿಪ್ತ । ದನುಜ ಹಿರಣ್ಯಕಹರ್ತ ದೀನ ನಾಥ। ಕನಕ ಜಠರನ ಜನಕ ಕರುಣಾಂಕ ಕ್ರೂರಮುಖ। ಪುನೀತಶುಭ ಚಾರಿತ್ರ ಪ್ರಹ್ಲಾದ ಮಿತ್ರ।।2।। ಪದುಮದೇವಿಯ ರಮಣ ಪ್ರದ್ವಿಷಾನ್ವಯದ ಮನ। ಮುದಶಾಂತ ಪರಿಪೂರ್ಣಮೂರ್ತಿಪುಣ್ಯ। ಪ್ರದನಾಮ ನವರೂಪ ಪತಂಗಾನಂತ ಪ್ರದೀಪ ನಿನ್ನ। ಪದವೆಗತಿ ಹೊರೆ ಎನ್ನ ಪ್ರಸನ್ನವೆಂಕಟರನ್ನ ।।3।।

**ನಾರಸಿಂಹನ ಭಜಿಸಿ** **ರಾಗ: ಬಾಗೇಶ್ರೀ**

ನಾರಸಿಂಹನ ಭಜಿಸಿ ಭವಭೀತರು। ತೋರುವಡಗುವ ವಿಭವ ಸುಖಕೆ ನಡುಗೀ॥ಪ॥ ದಾವ ಭವವಾರಿಧೀಯೊಳುಂಡುಟ್ಟು ಸತಿಸುತರು। ಜೀವದೊಲ್ಲಭರೆಂದು ಕೆಡುವರೊ ಕಣಾ। ದಾವ ನೀರಟ್ಟಿಸಲದೆ ಮಡುವಿಲಿಹ ಜಲ ಚ-। ರಾವಳಿಯ ಬಳಲಿಕೆಯ ನೋಡಿ ನಡುಗೀ ॥1॥ ಘೋರಾಟವಿಗೆ ಸಮವಸಾರ ಸಂಸಾರದೊಳು। ಭೂರಿಸುಖವೆಂದು ಮೂರ್ಖರು ಕೆಡುವರು। ಕ್ರೂರ ಹುಲಿ ಚೋರ ನಿಭ ತನು ಸಂಬಂಧಿಗಳ ಧರ್ಮ। ಸೂರಿಗಾರರ ಸುಲಿಗಿಗಂಜಿ ನಡುಗೀ ॥2॥ ಸ್ವಚೋದಕದ ತೆರೆ ಮರೀಚಿಕಾಜಲಕೆ ಸಮ। ಕುಚ್ಚಿತ ಶೃತಿಯ ನಂಬಿದವ ಪಾಮರಾ। ನಿಚ್ಚ ನೀರಿಡಿಸೋಡಿ ಪ್ರಸನ್ನವೆಂಕಟ ಪತಿಯ। ಸುಚ್ಛಾಯ ಬಿಟ್ಟೊರಲುವನಿಗೆ ನಡುಗೀ ॥3॥

**ತೊರವಿ ಪುರನಿವಾಸ** **ರಾಗ: ಷಣ್ಮುಖಪ್ರಿಯ**

ತೊರವಿ ಪುರನಿವಾಸ ನರಸಿಂಹ ನೀ। ಹೊರೆಯೊ ಭಕ್ತರ ಭಯ ಗಜ ಸಿಂಹ ॥ಪ॥ ಅರಿವರಾರಯ್ಯ ನಿನ್ನ ಮಹಿಮೆಯ ಸರಸಿಜಭವ ಭವ ಸುರವರ ಅಹಿ ಕಿನ್ನರ । ವರ ಮುನಿವರ ನರವರವೃಂದ॥ಅ.ಪ॥ ಹಿರಣ್ಯಕನೆಂಬ ದೈತ್ಯ ಮಹೀತಳದಿ ವಿಧಿ। ಹರವರದಲಿ ಬಲು ಸೊಕ್ಕಿ ಅಂದು। ಪರಮ ಭಾಗವತ ಪ್ರಹ್ಲಾದನಿಗೆ। ಪರಿಪರಿ ದುರಿತವ ಮರಳಿ ಮರಳಿ ಭಯಂಕರವನು ಚರಿಸಲು ನೆರೆಮೊರೆಯಿಡಲು॥1॥ ತರಳ ಗಂಜಿಸಿ ನಿನ್ನ ದೊರೆಯ ತೋರೋ ಎನಲು। ಸರವಭೂತಭರಿತಾನಂತನೀಗ। ಅರಸಿದರೀ ಕಂಬದೊಳಿಹ ನೆನಲು। ಮೊರೆಮೊರೆದೇಳುತ ಸರಸರ- ನೊದೆಯಲು। ಬೆರಬೆರದ್ರೋಷದಿ ವರನರಹರಿಯೆ॥2॥ ಚಿಟಿಲು ಚಿಟಿಲು ಛುಗಿಛುಗಿಲೆನುತ ಪ್ರಕಟಿಸಿ। ದೈತ್ಯನುದರವನು ಸೀಳಿ। ತ್ರುಟಿಯೊಳು ಕರುಳ ಮಾಲೆಯ ಧರಿಸಿ। ಶಠಲ ವಧಿಸಿ ನಿಜಭಟನ ಪೊರೆದ ಜಗ। ಜಠರ ಪ್ರಸನ್ನವೆಂಕಟ ನರಸಿಂಹ॥3॥

**ದೇವ ನರಹರಿಯೆಂದು** **ರಾಗ: ತಿಲಂಗ್-ಝುಂಪೆತಾಳ**

ದೇವ ನರಹರಿಯೆಂದು ನಂಬಿದಾಬಳಿಕಿನ್ನು॥ಪ॥ ಅವನಲ್ಲದನ್ಯತ್ರ ದೈವಗಳು ಬೇರುಂಟೇ॥ಅ.ಪ.॥ ಕನಸಿನಲಿ ಮನಸಿನಲಿ ಸರ್ವತ್ರ ವ್ಯಾಪ್ತನಿರೆ। ಅನುಮಾನವೇಕಿನ್ನು ವೇದಗಳೆ ಸಾಕ್ಷೀ॥1॥ ಹಿಂದೆ ಧೃವರಾಯ ಪ್ರಹ್ಲಾದನನುಭವ ಕೇಳು। ಸಂದೇಹವೇಕೆ ಕಂಭದಿ ಬಂದುದೇ ಸಾಕ್ಷೀ॥2॥ ಅಂದು (ನಾರಿ) ದ್ರೌಪದಿ ಮಾನ ಕಾಯ್ದ ಪ್ರಸನ್ವೇಂಕಟನ। ಕಾರುಣ್ಯವನೆ ಪಡೆದ ಅಜಮಿಳನೆ ಸಾಕ್ಷೀ॥3॥

**ವೃಂದಾರಕ ವಂದ್ಯಾ** **ರಾಗ: ಕಲ್ಯಾಣಿ-ಆದಿತಾಳ**

ವೃಂದಾರಕ ವಂದ್ಯಾ ಯದುಕುಲಾಂಬುಧಿ ಚಂದ್ರಾ॥ಪ॥ ಮೃಗಮದ ತಿಲಕ ವಿರಾಜಿತ ಖಳಶೂಲಿ। ಮೃಗ ನರರೂಪ ವಿಧೃತ ಸುಗುಣ ವಿಶಾಲಾ॥1॥ ಖಗಾಸನ ಕಮಲಾ ರಮಣ ಕಲಿನಾಶ। ಖಗ ಮುಕ್ತಿದಾಯಕ ಕನಕ ನಗೇಶಾ ॥2॥ ಮಣಿಮಯ ಭೂಷಣಾಮಿತ ಶ್ರುತ್ಯಚಿಂತಾ। ಮಣಿ ಕಲ್ಪ-ಕುಜಧೇನು ಮಹಿಮಾನಂತಾ॥3॥ ಸ್ವಾಮಿ ಪುಷ್ಕರ ವರ ಸನ್ನಿಧಿ ಸದನ। ಸ್ವಾಮಿ ವರಾಹ ಹಿರಣ್ಯಾಂಬಕ ಮಥನ ॥4॥ ರಾಕೇಂದು ಕೋಟಿ ಪ್ರಕಾಶ ಕಲುಷ ನಿ-। ರಾಕೃತ ನಮೋ ಶ್ರೀ ಪ್ರಸನ್ವೇಂಕಟೇಶಾ॥5॥

**ದಾಸರ ನರಸಿಂಹ ಶ್ರೀಹರಿ** **ರಾಗ: ಜುಂಜೋಟಿ**

ದಾಸರ ನರಸಿಂಹ । ಶ್ರೀಹರಿ । ದಾಸರ ನರಸಿಂಹ ॥ಪ॥ ಯೋಗಾನರಸಿಂಹ। ಕರಿಗಿರಿ । ಭೋಗಾ ನರಸಿಂಹ। ಆಗಲೆ ಸುರಿಯುವ ಮಳೆಯನು ನಿಲ್ಲಿಸಿ । ಬೇಗನೆ ಕೈಕೊಂಡ ಉತ್ಸವ ನರಸಿಂಹ ॥ 1 ॥ ಶಾಂತಾ ನರಸಿಂಹ । ಪ್ರಹ್ಲಾ। ದಾಂತರ ನರಸಿಂಹ। ನಿಂತು ಹೆಜ್ಜೆ ಹೆಜ್ಜೆಗೆ ಆರತಿಕೊಂಡು। ಸಂತಸಪಡಿಸಿದ ಗುರುಗಳ ನರಸಿಂಹ॥ 2 ॥ ಕಾಮಿತ ನರಸಿಂಹ। ಪರಮ। ಪ್ರೇಮದ ನರಸಿಂಹ। ಸ್ವಾಮಿ ತಂದೆ ಮುದ್ದು ಮೋಹನದಾಸರ। ಧಾಮದಿ ನೆಲಸಿಹ ಸ್ವಾಮಿ ಶ್ರೀ ನರಸಿಂಹ । 2 ॥ ಭಕ್ತರ ನರಸಿಂಹ। ಭವಭಯ । ಒತ್ತುವ ನರಸಿಂಹ। ಭಕ್ತಿ ಭಾವದಿಂದ ಭಜನೆ ಮಾಳ್ಪರ। ಮುಕ್ತಿ

ಮಾರ್ಗ ತೋರಿ ಸಲಹುವ ನರಸಿಂಹ ॥ 4 ॥ ಸುಲಭ ನರಸಿಂಹ। ನೀ ಬಹು। ದುರ್ಲಭ ನರಸಿಂಹ। ಒಲಿಯುವ ಗೋಪಾಲಕೃಷ್ಣ ವಿಠಲ ಹರಿ। ನೆಲಸಿ ಹೃದಯ ಮಂದಿರದಲಿ ನರಸಿಂಹ ॥ 5 ॥

**ಶ್ರೀನಾರಸಿಂಹನೆ ಜ್ವಾಲ** **ರಾಗ: ರೇವತಿ**

ಶ್ರೀ ನಾರಸಿಂಹನೆ ಜ್ವಾಲ ಅಹೋಬಲ। ಶ್ರೀನಾರೀಲೋಲ ಕ್ರೋಢರೂಪನೆ। ಜ್ಞಾನಪೂರ್ಣಾಕಾರಾ ನಂದ ಭಾರ್ಗವ ಸ್ವಾಮಿ। ನಾನಾ ಯೋಗಾನಂದಾ ಛತ್ರ ವಟು । ದೀನ ಪೋಷಕ ಪಾವನಮೂರ್ತೆ ನರಹರೆ। ನೀನು ನಿನ್ನವರವನೆಂಬುದಕೆ। ಹೀನ ದುರ್ವಿಷಯ ಮನದಿ ನೆನೆಯದಂತೆ। ನೀನೇ ಕರುಣ ಮಾಡೊ ಶ್ರೀಧರ ವಿಠಲ॥ (ಉಗಾ)

**ಗಾಲವಕ್ಷೇತ್ರದ** **ರಾಗ: ಮಾಲಕೌಂಸ–ಭಜನಿತೇಕಾತಾಳ**

ಗಾಲವಕ್ಷೇತ್ರದ ನರಹರಿಯೇ। ಪಾಹಿ। ಪ್ರಹ್ಲಾದ ವರದ ಶ್ರೀಹರಿಯೇ॥ಪ॥ ದುರುಳದೈತ್ಯನ ಕರುಳು ಹಿರಿದು ಕೊರಳೊಳು ಧರಿಸಿ। ಧರೆಯೊಳು ಭಕುತರಿಗಭಯ ಹಸ್ತವ ತೋರ್ಪ ॥ಅ.ಪ.॥ ದಶರಥನುದರದಿ ಜನಿಸಿ। ದಶಸಿರನ ಸಂಹರಿಸಿ। ವಸುದೇವಸುತನಾಗಿ ಬಂದು। ದುಷ್ಟ। ಶಿಶುಪಾಲ ದೈತ್ಯನ ಕೊಂದು॥ ಶಿಶುಪ್ರಹ್ಲಾದನ ಭಕ್ತಿಗೊಲಿದು। ಆರ್ಭಟಿಸಿ ಕಂಬದಿಂ ಬಂದ। ಗಂಭೀರಂಭ್ರಮಣಿ ರಮಣ್॥ 1 ॥ ಗಂಗಾಜನಕ ಪಾಂಡುರಂಗಾ। ಪಾಹಿ। ರಂಗವಿಠಲ ನರಸಿಂಗಾ। ಅಂಗಜಪಿತ ಮೋಹನಾಂಗಾ। ಪಾಹಿ। ಸಂಗೀತಪ್ರಿಯ ಭವಭಂಗಾ। ತುಂಗವಿಕ್ರಮ ಕಾ। ಳಿಂಗಮರ್ಧನ ಕೃಷ್ಣಾ। ಅಂಗನೆಯ ವ್ರತಭಂಗ ಮಾಡಿದ ಧೀರಾ॥2॥ ಗೋಪಾಲ ಕೃಷ್ಣ ಗೋವಿಂದಾ। ನಮ್ಮ। ಕೃಷ್ಣವೇಣಿಗೆ ಆನಂದಾ। ಆಪದ್ಬಾಂದವ ನಂದಕಂದಾ। ನಮ್ಮ। ಅಪರೂಪ ಕ್ಷೇತ್ರದಿಂದಾ॥ ಭೂಪತಿ ವಿಠಲಾ। ಅಪಾರಮಹಿಮನೆ। ಕೈಪಿಡಿದೆಮ್ಮನು। ನೀಪರಿಪಾಲಿಸೋ॥3॥

**ರಥವನೇರಿದ ಸಿಂಹಾ** **ರಾಗ: ಶಿವರಂಜನಿ–ಭಜನತೇಕಾತಾಳ**

ರಥವನೇರಿದ ಸಿಂಹಾ। ಶ್ರೀನರಸಿಂಹಾ॥ಪ॥ ಪ್ರಹ್ಲಾದ ರಾಜನಿಲ್ಲಿಗೆ ಬಂದ ತಕ್ಷಣ। ಅಷ್ಟಬಾಹು ನರಸಿಂಗನು ಬಂದಾ॥ ಶ್ರೀ ಭೂದೇವಿಸಹಿತಾ॥1॥ ಎಲ್ಲಿ ಪ್ರಹ್ಲಾದನು। ಅಲ್ಲಿ ನರಹರಿ। ಎಲ್ಲಿ ನರಹರಿ। ಅಲ್ಲಿ ಪ್ರಹ್ಲಾದನು॥ ಕ್ಷಣ ಅಗಲದೆ ಇರುವಾ॥2॥ ಭೂಪತಿ ವಿಠಲಾ। ನರಹರಿ ಕೃಷ್ಣಾ। ರಾಘವೇಂದ್ರ ವ್ಯಾಸ। ಪ್ರಹ್ಲಾದ ವರದಾ। ಭಕ್ತವತ್ಸಲ ರಾಮಾ॥3॥

**ನರಮೃಗ ರೂಪವ ನೋಡಿ** **ರಾಗ: ಹಿಂದೋಳ**

ನರಮೃಗ ರೂಪವ ನೋಡಿ ಕೊಂಡಾಡಿ ನಲಿದಾಡಿ ನಮ್ಮ ನಾರದ ವಂದ್ಯನ ಪಾಡಿ॥ಪ॥ ಬಾಲಕಗೊಲಿದು ಪದವಿಯನಿತ್ತ। ಬಾಲೆ ಕರೆಯಲು ಮಾನವ ಕಾಯ್ದವ। ಬಾಗಿಲ ಕಾಯ್ದವರ ಬೇಡಿಕೆಗೊಲಿದ। ಭಾಮಿನಿ ಬೇಡಿದ ತರುವನೆ ತಂದ॥1॥ ಅಜನಿತ್ತ ವರವ ನಿಜಮಾಡಿ ತೋರಿಸಿ। ಗಜವೈರಿಯ ರೂಪ ಹರಿ ತಾ ಧರಿಸಿ। ಮೂರ್ಜಗವು ತಲ್ಲಣಿಸಿ ಗಡಗಡ ನಡುಗಿ। ತ್ರಿಜಗ ಭರಿತ ಬಂದ ಸಂಧಿಯ ಸಮಯದಿ॥2॥ ಕಂಬದಿ ಬಂದು ಕ್ರೂರನ ಸೆಳೆದು। ಕರುಳ ಬಗೆದು ನಖದಿ ಮಾಲೆಯಮಾಡಿ। ಕಂಠದಿ ಧರಿಸಿದ ಖೂಳನ ವಧಿಸಿದ। ಕರ್ತ ಹೆಳವನ ಕಟ್ಟೆಯ ರಂಗ॥3॥

**ಶ್ರೀನಾಮಗಿರಿ ಅಮ್ಮ ನಿನ್ನ** **ರಾಗ: ಶ್ರೀ**

ಶ್ರೀನಾಮಗಿರಿ ಅಮ್ಮ ನಿನ್ನ ನಾ ನಂಬಿದೆ ಸಲಹೆನ್ನ ॥ಪ॥ ಶ್ರೀನರಸಿಂಹನ ನಿಜಸತಿ ಶುಭಕರಿ। ವನರುಹ ಜಾಂಡದ ಜನನಿ ಭೂ ಅಂಬ್ರಣಿ ॥ಅ.ಪ.॥ ಬೊಮ್ಮನ ಪ್ರಳಯದಲಿ ಕಮಲಜ ಆಲದ ಎಲೆಯಾಗಿ। ಸ್ವಾಮಿ ಸ್ವಾಪ್ಯನ ಬಹುನಂದದಿ ಸ್ತುತಿಸಿ। ಸಮಸ್ತ ಜಗತ್‌ಸತ್ಸೃಷ್ಟಿಯಗೈಸಿದೆ॥1॥ ಕ್ಷೀರಾಂಬುಧಿಯಿಂದ ತೋರಿ ನೀ ಸರ್ವಜನರ ಮುಂದೆ। ನಾರ ಅಜಿತ ಸರ್ವೋತ್ತಮ ಹರಿಗೆ ನೀ। ನಿರಂತರ ನಿಜಸತಿಯೆಂದು ಪ್ರಕಟಿಸಿದೆ॥2॥ ಘನ ಬಾಲ ಭಕ್ತನಿಗೆ ಒಲಿದ ವೃತಿತಿಜಾಸನ ಪಿತನು। ಹನುಮ ವಂದಿತ ಶ್ರೀಪ್ರಸನ್ನ ಶ್ರೀನಿವಾಸ। ನರಸಿಂಹನ ಸಹ ಭಕ್ತ ಜನರ ಪೊರೆವ ॥3॥

**ನರಸಿಂಹ ನರಸಿಂಹ** ರಾಗ: ಹಂಸಾನಂದಿ

ನರಸಿಂಹ ನರಸಿಂಹ। ಶರಣು ಧರಣಿಧರ ಪರಮ ಕೃಪಾಕರ॥ಪ॥ ಶ್ರೀಕರಭಕ್ತ ವಶೀಕರ ಕೋಟಿ। ಪ್ರಭಾಕರ ಸನ್ನಿಭ ಭೀಕರ ರೂಪ ॥1॥ ಜಂಭ ಭೇದಿಸುತ ಕುಂಭಿಣಿ ಧವಶಶಿ । ಬಿಂಬಲಿಖಿತ ಮುಖ ಕಂಬು ಕಂಠಶ್ರೀ ॥2॥ ಘೋರದುರಿತ ಸಂಹಾರ ಶರಧಿ ಗಂಭೀರ। ಮುನಿ ಮಂದಾರ ಮನೋಹರ ॥3॥ ಗಾನಲೋಲ ಸುಮಬಾಣ ಜನಕ। ಮುನಿಮಾನಸ ಹಂಸ ಶ್ರೀನಿವಾಸ ಹರಿ॥4॥ ಗರುಡಗಮನ ಮುರನರಕಾಂತಕ । ಶ್ರೀಧರವರ 'ಹೆನ್ನೆಪುರ ನಿಲಯ' ಶ್ರೀ ॥5॥

**ನರರು ಏನು ಬಲ್ಲರಯ್ಯ** ರಾಗ: ಮಾಂಡ್

ನರರು ಏನು ಬಲ್ಲರಯ್ಯ ನರಹರಿಯ ಚರ್ಯಾ ॥ಪ॥ ಆರು ಮೂರರ ಹಾದಿ ಅರಿಯದಲೆ ತಾಮಸಾದಿ । ಆರು ಎರಡನು ಸರಿಸಿ ಆರರಿಂದ ಮೀರಿ ನಡೆವ ॥ 1 ॥ ನಾಲ್ಕುನಾಲ್ಕೆರಡನ್ನು ನಾಲ್ಕೆರಡು ನಡಿಯನ್ನು । ನಾಲ್ಕು ವಂದನರಿಯದಲೇ ನಾಲ್ಕೈದೊಂದರನು ಕೂಡಿದ॥ 2 ॥ ಎರಡು ಒಂದು ಯುಕ್ತನ 'ಹೆನ್ನೆಪುರನಿವಾಸನ'। ಎರಡ್ವೊಂದ್ವಿ ಧಯಂದರಿಯದೇ ಎರಡು ಒಂದೇ ಎಂಬ ಪಾಮರ॥3॥

**ಹೀಗೆ ನಿರ್ದಯ ಮಾಡುವರೆ** ರಾಗ: ಹಂಸಧ್ವನಿ

ಹೀಗೆ ನಿರ್ದಯ ಮಾಡುವರೆ ಶ್ರೀಮನ್ನೃಹರೇ॥ ಪ ॥ ಹೀಗೆ ನಿರ್ದಯ ಮಾಡುವರೆ ಕರುಣಾಂಬುಧೆ। ಭೋಗೀಶಶಯನ ಸನ್ಮುನಿಜನ ಪಾಲನ॥ ಅ.ಪ.॥ ವಾರಿಜಾಸನ ವಂದಿತ ತ್ರಿಜಗಾಧಾರ ನಿರ್ಜರಪೋಷಿತ। ಘೋರ ದೈತ್ಯೇಯ ಸಂಹಾರ ಕೌಸ್ತುಭ ರತ್ನಹಾರಭೂಷಿತ। ಯದುವೀರ ಮಾರಮಣನೇ ॥ 1 ॥ ಪರಮಪುರುಷ ಗೋಪಾಲ ಚಿನ್ಮಯರೂಪ ಗರುಡವಾಹನ ಶ್ರೀಲೋಲ। ಕರಿರಾಜವರದ ಸುಸ್ಥಿರ ಕೀರ್ತಿ ಸಾಂದ್ರ ಮಂ। ದರಧರ ವರ ಹೆನ್ನೆಪುರ ಲಕ್ಷ್ಮೀನರಸಿಂಹ ॥ 2 ॥

**ನಂಬು ನಂಬು ಶ್ರೀ** ರಾಗ: ಗಾನಮೂರ್ತಿ

ನಂಬು ನಂಬು ಶ್ರೀ ನರಹರಿ ಪಾದವ। ನರನೇ ಪಾಮರನೇ॥ಪ॥ ಕುಂಭಿನಿ ಪಾತಕ ಘೋರವ ಕಳೆವಾ। ಕೃಷ್ಣಮೂರ್ತಿಯನ್ನೇ॥ಅ.ಪ.॥ ಸಾಧು ಸಜ್ಜನ ಸಂತರ ಸಲಹುವ ಸಕಲಲೋಕಕರ್ತನಾ। ಮೇದಿನಿ ಭಕ್ತರ ಮನದಲಿ ಚರಿಸುವ ಮಂಗಳ ಮಹಿಮನಾ। ಆದಿ ಮೂರುತಿ ಅನೇಕ ಚರಿತಾ ಅನಂತ ಅವತಾರನಾ। ಮೋದದಿ ಅನುದಿನ ಮನ ಹರುಷದಲಿ ಮರೆಯದೆ ನೀ ಎನ್ನಾ॥1॥ ಶ್ರೀನಿವಾಸ ಆಶ್ರಿತಜನ ಪೋಷಕ ಶಾಶ್ವತನಾಗಿಹನಾ। ಗಾನಲೋಲ ಶ್ರೀ ವೇಣುನಾದನ ಕರಿರಾಜ ವರದನಾ। ದಾನವಾಂತಕ ದಶರಥ ತನಯನ ದೇವಾದಿ ದೇವನ್ನಾ। ಮಾನಿತ ದ್ರೌಪದಿ ಮಾನವ ರಕ್ಷಿಸಿದ ಮದನಜನಕನಾದನಾ॥2॥ ಪುಂಡರೀಕ ವರದನ ದಂಡಜನಾ ಮನ ಭೂಸುರನಾಯಕನಾ ಮಂಡಲಾಧಿಪ ಮುರಹರ ಕೇಶವ ಮಾಧವ ಗೋವಿಂದನಾ। ಕುಂಡಲಿಶಯನ ಕೋದಂಡ ಪಾಣಿ ಮುಕುಂದನಾದವನಾ। ಹಿಂಡುಗೋಪಿಕಾ ಹೆಂಗಳೇರನಾಳುವ ಹೆನ್ನೆ ವಿಠಲನಾ॥3॥

**ಭಜರೇ ನರಸಿಂಹಂ** ರಾಗ: ಹಿಂದೋಳ-ಆದಿತಾಳ

ಭಜರೇ ನರಸಿಂಹಂ ಮಾನಸ। ಭಜರೇ ನರಸಿಂಹಂ॥ಪ॥ ಭಜ ನರಸಿಂಹಂ ಭಜಿತೋತ್ಸಾಹಂ। ವಿನುತಾಮರಗಣ ಗಂಧರ್ವ ಸಮೂಹಂ। ದುರಿತ ವಿದೂರಂ ಶರಧಿಗಂಭೀರಂ। ಚಾರುಶರೀರಂ ಕರುಣಾ ಪಾರಂ॥1॥ ಶರದಿಂದುವದನಂ ವರಕುಂದರದನಂ। ಅರವಿಂದ ನಯನಂ ಉರಗೇಂದ್ರ ಶಯನಂ। ಖಳಜನ ಕಾಲಂ ಕಾಂಚನ ಚೇಲಂ। ಸುಲಲಿತ ಪಾಲಂ ಸುಗುಣವಿಶಾಲಂ॥2॥ ಸತತಾನಂದಂ ಸತ್ಯ ಮುಕುಂದಂ। ಸದ್ಗುಣ ವರ್ಯಂ ಪ್ರಹ್ಲಾದಸ್ತುತ್ಯಂ। ಕರುಣಾ ಪಾಂಗಂ ವರನರಸಿಂಹಂ। ಗುರು ಚೆನ್ನ ಕೇಶವ ಕದಳೀ ರಂಗಂ॥3॥

**ನರಹರಿ ರೂಪನೆ** ರಾಗ: ಶುಭಪಂತುವರಾಳಿ

ನರಹರಿ ರೂಪನೆ ನಾರಾಯಣನೆ। ಪುರಹರವಂದ್ಯ ಪುರುಷೋತ್ತಮನೆ ॥ಪ॥ ಸುರಕಿನ್ನರ ನರ ಗಂಧರ್ವಾರ್ಚಿತ। ಹರಿಹರಿ

ಎನುವೆನು ಕೃಪಾಕರ ಕಾಯೋ।।ಅ.ಪ.।। ಕಂಬದಿಂದೊಡೆದು ಸ್ತಂಭಜನೆನಿಸಿದೆ। ನಂಬಿದ ಬಾಲನ ಬೆಂಬಿಡದೆಲೆ ಕಾಯ್ದೆ। ಜಂಬದಸುರನ ಕೆಡವಿ ಕರುಳನು ಬಗೆದು ತುಂಬುರು ನಾರದ ವಂದಿತ ಕಾಯೋ।।1।। ಘೋರ ರೂಪವನಾಂತ ಕೃಪಾನಿಧಿ ನರಸಿಂಹ। ಘೋರ ವಿಕ್ರಮನೆ ಅಘೋರ ಪರಂಜ್ಯೋತಿ। ಧೀರ ಮಹದೇವ ಪಂಚಾನನ ವದನ। ನಾರಹಿಂಹ ಚೆನ್ನಕೇಶವ ಸಲಹೆನ್ನ।।2।।

**ಯಾರಿಲ್ಲದಿರಲೇನು ನೀನೊಬ್ಬನಿರೆ ಸಾಕು** **ರಾಗ: ಬೇಗಡೆ**

ಯಾರಿಲ್ಲದಿರಲೇನು ನೀನೊಬ್ಬನಿರೆ ಸಾಕು। ನಾರಸಿಂಹನೆ ತರಳ ಪ್ರಹ್ಲಾದ ಗೊಲಿದವನೆ।।ಪ।। ಭಾರವಾಗುತಲಿಹುದು ನೀರಸದ ಬದುಕಿನ್ನು। ಪಾರಮಾರ್ಥದ ಹಾದಿ ಹಿಡಿಸು ಸಾಕಿನ್ನು।।ಅ.ಪ.।। ಹೊರಹೊರಗೆ ಅಲೆದಾಡಿ ಹೊರಗನ್ನೆ ಸಿಂಗರಿಸಿ। ಹೊರಗಿನುಪಚಾರದಿ ಒಳ ಮನೆಯ ಮರೆತೆ। ಹೊರಗಿನ ಸುಖವರಸಿ ಹೊರಗೇ ಮೈ ಮರೆದು। ಹೊರಗಾಗ ದಿರದಿರಲಿನ್ನು ಸುರಪನೊಡೆಯನ ಪಾದ।।1।। ಮನೆಕಟ್ಟಿಕೊಟ್ಟಿರುವ ಒಳಕೋಣೆ ನಿರ್ಮಿಸಿಕೊ। ಅನುನಯದಿ ಒಲಿಸಿದರು ಬಿಡದಂತೆ ಅರಿಗಳನು। ಇನಿತಿನಿತೆ ಎಲ್ಲದರ ಮೋಹವನು ಕಳಚುತಿರೆ। ಜ್ಞಾನಿ ಚೆನ್ನ ಕೇಶವನು ಹತ್ತಿರಕೆ ಬರುವ।।2।।

**ಶರಣಾಗತ ರಕ್ಷಾಮಣಿಯೇ** **ರಾಗ: ಕಾಮವರ್ದಿನಿ**

ಶರಣಾಗತ ರಕ್ಷಾಮಣಿಯೇ ।। ಪ ।। ಶರಣಾಗತಜನ ವರರಕ್ಷಾಮಣಿ- ಯೆಂಬ। ಬಿರುದಿನಿಂದಲಿ ಮೆರೆವ ಕರುಣಾ-। ಭರಣ ಕಾಮಿತ ವರಪ್ರದಾಯಕ।। ಅ.ಪ।। ಜನನ ಮರಣರಹಿತ। ಜಗದ ಜನ್ಮಾದಿಕರ್ತ। ಜನುಮ ಜನುಮದಲ್ಲಿ। ಜಗದ ಜೀವರಿಗೆಲ್ಲಾ। ಆಶ್ರಿತಜನ ಕಾಮಧೇನುವೆ ಕೋಟಿಕಾಮ ಲಾವಣ್ಯನೆ। ಶ್ರೀಮನೋಹರ ಗಂಭೀರ ಸುರುಚಿರ ಘನ। ಶ್ಯಾಮ ಸುಂದರ ಶರೀರ ಸನ್ನುತ ಮಹಿಮ। ಸಾಮಜನ ಉದ್ಧಾರ - ಭಕ್ತ ಮಂದಾರ।। ಸಾಮಗಾನ ಪ್ರೇಮ ಜಗದಭಿ। ರಾಮ ರಾಕ್ಷಸ ಭೀಮ ಮಂಗಳ। ನಾಮ ಸುರಮುನಿ ಸ್ತೋಮ ಸನ್ನುತ ಸ್ವಾಮಿ ದೇವಲಲಾಮ ನಮೋನಮೋ।। ಇಂದಿರಾರಮಣ ಗೋವಿಂದ ಮಾಧವ ಅರ-।ವಿಂದ ಲೋಚನ ಪೂರ್ಣಾನಂದ ಸ್ವರೂಪನೇ। ಎಂದೆಂದು ನೀನಲ್ಲದೇ ಗತಿ ಎಮಗಿಲ್ಲ-। ವೆಂದು ನಿನ್ನನು ಬಿಡದೆ ಕರಿಗಿರೀಶನೆ।। ತಂದೆ ಎಮ್ಮಯ ಕುಂದುಗಳನೀ-। ನೊಂದನೆಣಿಸದೆ ಬಂದು ಸಲಹುವು-।ದೆಂದು ಬೇಡುವೆ ಇಂದು ಕರುಣಾ-।ಸಿಂಧು ನತಜನ ಬಂಧು ನರಹರಿ।।

**ವೀರನ ನೋಡಿರೈ** **ರಾಗ: ತೋಡಿ**

ವೀರನ ನೋಡಿರೈ ನರ ಮೃಗಾಕಾರನ ಪಾಡಿರೈ।। ಪ।। ಕಾರ್ಪರ ಋಷಿ ತಪಕೊಲಿದು ಅಶ್ವತ್ಥದಿಮೆರೆವಾ ಭಕುತರ ಪೊರೆವಾ ।।ಅ.ಪ.।। ಚಾರು ಚರಣ ಯುಗಳಾರಾಧಿಸುವರ ದುರಿತ ತಿಮಿರಕೆ ಸಮಿತ। ವಾರಿಜಭವ ತ್ರಿಪುರಾರಿ ಮುಖಸುರ ವ್ರಾತ ಸೇವಿತ ತ್ವರಿತ। ನಾರಾಯಣ ಮುನಿಪೂಜಿತ ಪದ। ಮದ್ಬಂಧು ಪೊರೆಯೊ ನೀನೆಂದು। ಪ್ರಾರ್ಥಿಸುವರಿ-ಗಭೀಷ್ಟಿಯ ಗರಿಯಲು ದೇವತರುಸ್ವಭಾವ।।1।। ಉಗ್ರನಾದರು ಭಕುತಾಗ್ರಣಿಗಳಿಗೆ ಅನುಗ್ರ ಒಲಿವನು। ಶೀಘ್ರ ವಾಗ್ದೇವಿಯರ ಸನಾಜ್ಞದಿ ನಮಿಸಿ ಪ್ರಹ್ಲಾದ ಸ್ತುತಿಸಲು ಒಲಿದ। ಉಗ್ರವದನ ಶಾಲಿಗ್ರಾಮಗಳ ರೂಪದಲಿ ವೃಕ್ಷಾಗ್ರದಲಿ। ಭಾರ್ಗವಿ ರಮಣನನುಗ್ರಹಿಸಲು ಭಕುತರನ। ಪ್ರಕಟವಾಗಿಹ।।2।। ಸ್ಥಿರಚರದೊಳು ತನ್ನಿರುವಿಕೆಯನು ಬುಧ ಜನಕೆ ತೋರಿಸುವುದಕೆ। ಸುರುಚಿರ ಷೋಡಶಕರಗಳಿಂದಾಯುಧ ಧರಿಸಿ ಅಸುರನ ಮಥಿಸಿ। ತರುಮೂಲದೊಳವತರಿಸಿ ಚಕ್ರಾಂಕಿತ ಶಿಲದಿ ನೆಲೆಸಿ ಕರುಣದಿ। ಕಾರ್ಪರ ನರಹರಿ ದಾಸರ ಕೀರ್ತನೆಗಳಕ್ಷೋಣಿಯೋಳಿಸು ।।3।। ಸ್ಥಾನ ದರ್ಶನದಿ ಮನುಜನ ಪೋಪುದು ವೃಜಿನ। ಸ್ಥಾನದ ಮಹಿಮೆ ಪುರಾಣದಿ ಪೇಳಿರುವದನ ತಿಳಿವದು ಮುನ್ನ। ಭಾನುಕರ್ಕಾಟಸ್ಥಾನದಿ ಬರುವ ಕಾಲದಲಿ ತೀರ್ಥಗಳಲ್ಲಿ। ಸ್ನಾನ ಜಪಾನುಷ್ಠಾನ ಮಾಳ್ಪರಿಗೆ ಒಲಿವ। ಹೃದಯದಿ ಪೊಳೆವ।।4।। ಚಾರು ಶ್ರೀ ಕೃಷ್ಣಾತೀರದಿ ಮೆರೆವಾಶ್ವತ್ಥ ತರುವರ ಸಂಸ್ಥಾ। ನಾರದ ಮುನಿ ಸಂಕೀರ್ತಿಕ ಪಾವನ। ಚರಿತ ತ್ರಿಗುಣಾತೀತ ಕ-।ರ್ಪರ ನಿಲಯ ಶ್ರೀ ನಾರಸಿಂಹನ ಪದಯುಗಲ ಬಿಡದನುಗಾಲ। ಸಾರಿ ಭಜಿಪರಿಗಪಾರ ಸೌಖ್ಯಗಳ ಗರಿವ ವಿಘ್ನವ ತರಿವ।।5।।

**ಪತ್ಯಂತರ್ಗತ ನಾರಸಿಂಹ** **ರಾಗ: ಪುನ್ನಾಗವರಾಳಿ**

ಪತ್ಯಂತರ್ಗತ ನಾರಸಿಂಹ ಎನುತಾ। ಸಕ್ತಿಯಿಂಜಪಿಸಬೇಕಮ್ಮ ।।ಪ।। ಭಿತ್ತಿಯ ಮಾಳ್ವಾಗ ಬಾಲರಾಡಿಸುವಾಗ। ಪ್ರತ್ಯಾಹದಲಿ ಗೃಹ ಕೃತ್ಯವಾಚರಿಸುವಾಗ।।ಅ.ಪ.।। ಪೊಡವಿಯೊಳ್ ನರಜನ್ಮ ಪಡೆದೂ ಕೆಟ್ಟ। ನಡತೆಯವರ ಕೂಟ ಮರೆದೂ। ದೃಢಭಕ್ತಿಯಿಂ ಲಜ್ಜೆ ತೊರೆದೂ। ನುಡಿನುಡಿಗೆ ಹರಿ ಎಂದು ಬಾಯ್ದೊರೆದೂ। ಅಡುಗೆಯುವಾಡಿ ಕಾರೊಡೆಯಗರ್ಪಿಸುವಾಗ। ಒಡೆಯಾದಿಗಳಿಗನ್ನ ಬಡಿಸುವಾಗಲು ನಿತ್ಯ।।1।। ಪತಿದೈವವೆಂದೂ ಭಾವಿಸುವ ಸತಿ। ಗತಿಶಯ ಗತಿಯ ಸಲ್ಲಿಸುವಾ। ಪತಿತರ ಪಾವನಗೈವ ಲಕ್ಷ್ಮೀಪತಿಯೆ ಸದ್ಭಕ್ತರ ಕಾವ। ಅತಿಹಿತದಿಂದ ಸಂತತ ಹರಿದಾಸರಿ। ಗತಿ ಸೇವಾರತಿಯಿಂದ ಕೃತಕೃತ್ಯಳಾಗುತ।।2।। ಪದ್ಮಸಂಭವೆ ಪದ್ಮಜಾತ ವಾತ। ಪದ್ಮಜ ವಲ್ಲಭ ಎನುತ। ಕದ್ರುಜ ರುದ್ರಾದಿ ವಿನುತ ತಂದೆ। ಮುದ್ದು ಮೋಹನ ವಿಠಲನೀತಾ। ಅದ್ವಿತೀಯನು ಎಂದು ಬುದ್ಧ್ಯಾದಿಂದ್ರಿಯದಲ್ಲಿ। ನಿದ್ರೆಯೊಳಾದರು ನೀ ಮರೆಯಬ್ಯಾಡ।।3।।

**ನರಸಿಂಹನಿಗೆ ವಂದಿಪೆನೋ** **ರಾಗ: ಸುರಟಿ**

ನರಸಿಂಹನಿಗೆ ವಂದಿಪೆನೋ। ನಿನ್ನ ಕರುಣ ಕವಚ ಎನ್ನ। ಹರಣಕೆ ತೊಡಿಸಯ್ಯ।। ಪರಮ ಪಾವನನೇ। ಕರಿಗಿರಿವಾಸನೇ। ತರಳನ ಮೊರೆಕೇಳಿ। ಕರುಣದಿಂದಲಿ ಕಾಯೋ।। ಭಕುತರ ಮನವ। ಪರಿಕಿಸುತಾ। ದೇವಯುಕುತಿಯಿಂದಲಿ ತೋರಿ। ಭಕುತರ ಪೊರೆಯುವ।। ಅತುಳ ಪರಾಕ್ರಮಿ। ಅನಿಮಿತ್ತ ಗುಣನಿಧಿ। ಪತಿತ ಪಾವನದೇವಾ। ಮತಿ ಇತ್ತು ಸಲಹಯ್ಯ।। ಪರಮ ಭಕುತರ ಸೇವೆ ಪೊಂದೀದೇವ। ಮತಿಹೀನರಿಗೆ ಸನ್ಮತಿಯನೇ ಇತ್ತೂ।। ಉತ್ತಮ ಭಕುತರಿಗೆಲ್ಲ। ಅತಿಶಯದಲಿ ತೋರ್ಪ ಗತಿ ನೀನೆಯೆಂದು। ನಂಬಿ ಬಂದಿಹೆನಯ್ಯಾ।। ದಯ ರೂಪವನು ಪೊಂದಿ। ಮೆರೆದೇ ದೇವಾ ಕರಿಗಿರಿ ಕ್ಷೇತ್ರದಿ ನಿಂದೇ। ಸ್ವಾಮಿ। ಯುಕತದಿ ತೋರುತ। ಭಕುತರ ಸಲಹುತ। ರಘುರಾಮವಿಠಲನೆ। ವ್ಯಕುತವಾಗ್ಯೊದವಗೆ।।

**ನರಸಿಂಹ ನಿನ್ನ ರೂಪವ** **ರಾಗ: ಕುಂತಲವರಾಳಿ**

ನರಸಿಂಹ ನಿನ್ನ। ರೂಪವ ಎಷ್ಟು। ವರ್ಣಿಸಲೋ। ನರನಾದೆನಗೆ ಸಾಧ್ಯವೇ ।।ಪ।। ಪರಮ ಬಾಲಕನಿಗೆ ಕರುಣದಿಂದೊಲಿದು ನೀ। ಪೊರೆಯ- ಲಿಲ್ಲವೇನೊ। ಕಡು ಪ್ರೇಮದಿಂದಲಿ।।ಅ.ಪ.।। ಪರಮ ಭಕುತರನೆಲ್ಲ। ಪೊರೆಯಬೇಕೆಂದು ನೀ। ಯದುಗಿರಿ ಕ್ಷೇತ್ರದಿ। ನೆಲಸಿರ್ಪೆಯೋ।।1।। ಪರಮ ಭಕುತನಾದ। ಪ್ರಹ್ಲಾದನೊಡಗೂಡಿ। ತೆರಳಿ ಬಂದು ನೀ। ಯೋಗದಿಂದಿರ್ಪೆಯೋ।।2।। ಶಂಖಾ ಚಕ್ರವ ಧರಿಸಿ। ಪಂಕಾಜಲೋಚನ। ಶಂಕೇ ಇಂದಲಿ ಬಂದ। ಭಕುತರ ಸಲಹುವೇ।।3।। ಭಕುತರ ಭಕುತಿಯ। ಧೃಡಪಡಿಸಬೇಕೆಂದೂ। ಕನಸೀಲಿ ಮನಸೀಲಿ। ಕಾರುಣೀಸಿ ಸಲಹುವೇ ।।4।। ಅಂಗ ಅಂಗದಲೆಲ್ಲಾ। ಶಂಖಚಕ್ರವ ಧರಿಸಿ। ಕಂಗೊಳಿಸುತ್ತಿರುವೆ ಕರುಣಾಳುವೇ।।5।। ಪಟ್ಟೆ ಮಗುಟವನುಟ್ಟೂ। ಯೋಗ ಪಟ್ಟೆಯ ಕಟ್ಟೀ। ರಘುರಾಮ ವಿಠಲನೆ। ಪಾರಿಜಾತವ ಧರಿಸಿದ।।6 ।।

**ನಿರುತದಿ ನೆನೆ ನರಹರಿಯ** **ರಾಗ: ಸಿಂಧುಭೈರವಿ**

ನಿರುತದಿ ನೆನೆ ನರಹರಿಯ। ನರಹರಿಯ ಶಿರಿ ದೊರೆಯ।। ಪೋತ ಧ್ರುವನು ತಾ ತಾತನ ತೊಡಿಯಲಿ। ಪ್ರೀತಿಲಿ ಕುಳುತಿರೆ ಮಾತೆದೂಡಲತಿ। ಸೋತು ಮನದಿ ಹರಿಸ್ತೋತ್ರವ ಗೈಯ್ಯ-। ಲಾತಗೆ ಪದ ನೀಡಿದಾ।।1।। ಕಡಿಗ್ಯಾದ ದ್ರೌಪದಿ ಮುಡಿಯ ಪಿಡಿದುಖಳ। ಬಿಡೆದೆಳೆದೊಯ್ಯೆ ಕಡುದುರುಳ ಸಭೆಗೆ। ಸಿಡಿದೆಳೆಯೆ ಸೀರೆಯನು ಒಡನೆ ಹರಿಯೆನಲುಡುಗೆ ವಾಸವಕ್ಕೈಸಿತು।।2।। ವರ ಪ್ರಹ್ಲಾದಗೆ ದುರುಳ ಹಿರಣ್ಯಕಶು। ಪಿರದೆಪೀಡಿಸಲು ಪರಿಪರಿಯಿಂದಲಿ। ಹರಿಗೆ ಮೊರೆಯಿಡಲು ಒಡನೆ ಉದ್ಭವಿಸವನ। ಕರುಳು ಬಗೆದ ನರಸಿಂಹವಿಠಲನು।।3।।

**ನರಹರಿ ತಾರಿಸೊ ಎನ್ನಾ** **ರಾಗ: ಶಂಕರಾಭರಣ**

ನರಹರಿ ತಾರಿಸೊ ಎನ್ನಾ ದುರಿತಾರಿ। ಮುಕ್ತಿದಾರಿ ಸಾರಿದೋರಿ ದಯಬೀರಿ।।ಪ।। ಕಮಲಾಯ ತಾಂಬಕ ಜಲನಿಧಿ

ಸಿರಿ। ಕಮನೀಯ ಲಾವಣ್ಯರೂಪ ಶಂಖಾರಿ। ವಿಮಲಗದಾಂಭುಜಧಾರೀ ಸುಮನ ಸಾಧುಜನ ಹೃದಯವಿಹಾರಿ॥1॥ ಎಲೆ ದೇವ ದೇವ ಎಂದ್ಯ ಜೀವ ಕಾವ ಮುರಾರಿ। ಚೆಲುವ ಕಸ್ತೂರಿ ಶ್ರೀಹರೀ। ವಲಿದು ಮಹಿಪತಿ ಜನಪರೋಪರಿಯಲಿ। ಸಲಹುತಿಹ ಮಾಮನೋಹಾರಿ॥2॥

**ಕಾಯಯ್ಯಾ ಎನ್ನ ದಯದೀ** **ರಾಗ: ಮಾಯಾಮಾಳವಗೌಳ**

ಕಾಯಯ್ಯಾ ಎನ್ನ ದಯದೀ ಸಿಂಹಾದ್ರೀಶಾ॥ಪ॥ ಅಖಿಲದೊಳಗೆ ಅತಿ ದುರ್ಜನ ಪ್ರಭೆಯಲಿ। ನಿಖಿಳ ಧರ್ಮಗಳಡಗಲು ಕಂಡು॥ ಭಕುತರಿಗೋಸುಗ ಅವತಾರವ ತಾಳಿ। ಪ್ರಕಟಿಸಿದಿಳೆಯೊಳು ಚಿನ್ಮಯನೇ ॥1॥ ಪರಿಪರಿ ಸಾಧನದಿಂದಲಿ ದೇಹವ। ನಿರುಪಮ ವಜ್ರದಂದದಿ ಮಾಡಿ॥ ಮೆರೆವ ಗೋರಕ್ಷಗ ಬೋದಿಸ್ಯಕಲ್ಪಿತ। ಶರೀರವ ಮಾಡಿ ನಿಲಿಸಿದೆಯಾ॥2॥ ಅನಸೂಯಾ ಜಠರದಲುದ್ಭವಿಸಿ। ಅನುದಿನ ಮುನಿ ಮಾನಸಲಿರುವಾ॥ ಅನುಪಮ ಚರಿತನೆ ಮಹಿಪತಿ ನಂದನ। ಮನದೈವಾಗಿಹ ಘನ ಕರುಣಾ॥3॥

**ಏನು ಕಾರಣವಿಲ್ಲೆ ನಿಂದೆ ಅಶ್ವತ್ಥ** **ರಾಗ: ಕೇದಾರ**

ಏನು ಕಾರಣವಿಲ್ಲೆ ನಿಂದೆ ಅಶ್ವತ್ಥ। ಶ್ರೀ ನಾರಸಿಂಹನೆನಿಸಿ ಅಜ ಭವರ ತಂದೇ॥ಪ॥ ಹೊರೆಯಲೈತರಲು ಹಂಬಲಿಪ ಪ್ರಹ್ಲಾದಿಲ್ಲ। ದುರಿತ ಪರಿಹರಿಸಲಿಕೆ ಹಿರಣ್ಯಕಾಸುರನಿಲ್ಲ। ಸುರರಿಗುಪಟಳವೇನು ಇಲ್ಲಿ ಸ್ತಂಭ। ಬಿರಿದು ದೋರುವ ಅಹೋಬಲದ ಸ್ಥಳವಲ್ಲ॥1॥ ಸಿರಿಯ ಮೋಹನ ನಿಮ್ಮ ರೂಪವನೆ ಆವರಿಸಿ। ಮರದ ಪೇರ್ಗಳೆ ಪಾ ಕೊಂಬುಗಳ ಕರಧರಿಸಿ। ಸಿರಸಾಗ್ರ ಮಧ್ಯುದರವೆರಸೀ ಪರ್ಣ। ದಿರುವ ಅವಯವಮಾಡಿ ಪಾದ ಪೆದ್ರನೆನಿಸೀ॥2॥ ಧರೆಗಧಿಕ ಸುಕ್ಷೇತ್ರ ಶೂರ್ಪಾಲಯವೆ ನೋಡಿ। ಮೆರೆಯುತಿಹ ಕೃಷ್ಣವೇಣೆಯ ತೀರದಲಿ ಮೂಡಿ। ಹರಗರುಡ ಗಣಪರೊಡಗೂಡಿ ನಲಿವ। ಗುರು ಮಹಿಪತಿ ಸ್ವಾಮಿ ಕಾಯೋದಯ ಮಾಡಿ॥3॥

**ನರಹರಿಯ ಹೊರತಿನ್ನಾರಿಗಿಲ್ಲವೋ** **ರಾಗ: ಕಲ್ಯಾಣವಸಂತ**

ನರಹರಿಯ ಹೊರತಿನ್ನಾರಿಗಿಲ್ಲವೋ। ಸ್ವತಂತ್ರದಾವುದು ಇಲ್ಲವೋ। ನರರಿಗೆ ಸ್ವತಂತ್ರ॥ ಗಳಿಸಿದ ಧನವು ನಳಿನಾಕ್ಷೀಯರಿಗೀವ। ಸೆಳೆದು ವಯ್ಯುವಾಗುಳೀ-ವರಿಲ್ಲವೋ। ನಾನು ನನ್ನದೆಂಬುವ ಈ ದೇಹವು। ಹಾನಿಯಾಗುವಾಗದನ್ನುಳಿಸುವ ಸ್ವತಂತ್ರ॥ ಜೀವವು ಕಾಯವ ತ್ಯಜಿಸಿ ಪೋಗುವಾ-। ಗಾವಾಪ್ತರಿಗವನ್ನುಳಿಸಿಕೊಳ್ಳುವ ಸ್ವತಂತ್ರ॥ ಮಾಡಿದ ಧರ್ಮಾಕರ್ಮವೆ ಜೀವನ। ಕೂಡ ಮಂತ್ರ ಸಂಗಡ ಬಾಹುದು। ದೋಷರಹಿತ ಹನುಮೇಶ ವಿಠಲನೇ। ಈಶನೆಂದು ನೀನು ದಾಸನಾಗೊ ಸ್ವತಂತ್ರ॥

**ನರಹರಿಯ ಗುಣ ಕೊಂಡಾಡುವುದೆ** **ರಾಗ: ಕಾನಡ**

ನರಹರಿಯ ಗುಣ ಕೊಂಡಾಡುವುದೆ ಲೇಸು। ಮುರಳೀಧರನೊಲಿಸಿ। ಪರಗತಿ ಸುಖವ ಬಯಸಿ॥ಪ॥ ಸುಳ್ಳುಮಾತಾಡಿ ಧನಗಳಿಸುವದಿಕಿಂತಲಿ। ವಳ್ಳೆಯವನೆನಿಸುವ ಬಡತನವೇ ಲೇಸು। ಕಳ್ಳದಿಂದಲಿ ಕದ್ದು ತಿಂಬುವುದ- ಕಿಂತ। ಕೇಳಿಸಿಕ್ಕಷ್ಟುಂಡು ಇರುವುದೇ ಲೇಸು॥1॥ ಸಾಲದಿಂದರಮನೆಯ ಕಟ್ಟಿಸಿರುವುದಕ್ಕಿಂತಾ। ಸಾಲಿಲ್ಲದಾಮನೆಯಲ್ಲಿಹುದೇ ಲೇಸು। ಕಾಲನಾ ದೂತರಿಂದೆಳೆಸಿ ಕೊಳ್ಳದೇ ಲಕ್ಷ್ಮಿ -। ಲೋಲನಾ ಪಾದದಲ್ಲಿರುವುದೇ ಲೇಸು॥2॥ ಅನ್ಯ ಸ್ತ್ರೀಯರ ಸುಖವ ಬಯಸಿ ಕೆಡುವದಕ್ಕಿಂತ। ತನ್ನವಳಕೂಡ ಬಡದಾಡುವದೇ ಲೇಸು॥ ಹೊನ್ನು ಹೆಣ್ಣುಮಣ್ಣಿಗಾಸೆ- ಮಾಡದೇ ಮಕ್ಕ-। ಳನು ಶಿರಿಪತಿಗೆ ಒಪ್ಪಿಸುವದೇ ಲೇಸು॥3॥ ತಾನು ಮಾಡಿದೆನೆಂಬುವುದಕ್ಕಿಂತ ಹರಿಯ ಅ-। ಧೀನ ವೆಂದರಿಯುವುದು ಪರಮಲೇಸು॥ ಶ್ವಾನಗೆ ಮಾಂಸವನ್ನು ತಿನಿಸಿ ಸಲಹುವದಕ್ಕಿಂತ। ಜ್ಞಾನಿಯಾದವನ ಸಲಹುವದೇ ಲೇಸು॥4॥ ದುಷ್ಟ ಮನುಜನು ಮಾಡುವ ಕೃಪೆಗಿಂತಲೂ। ಶ್ರೇಷ್ಠ ನರಸಿಂಹನಲಿ ಬೈಸಿಕೊಳ್ಳುವುದೇ ಲೇಸು। ಕೆಟ್ಟ ಸಂಸಾರ ಸುಖ ಬೇಡುವದಕ್ಕಿಂತ। ಹನುಮೇಶವಿಠಲನ ಧ್ಯಾನದ ಸುಖವೇಲೇಸು॥5॥

**ಪರಿಪರಿಯಲಿ ನೀ ಪಾಲಿಸೋ** **ರಾಗ: ದುರ್ಗಾ**

ಪರಿಪರಿಯಲಿ ನೀ ಪಾಲಿಸೋ। ನರಹರಿಯೇ ನಾನಪರಾಧೀ। ಶ್ರೀನರಹರಿಯೇ ನಾನಪರಾಧೀ॥ಪ॥ ಸತಿಸುತರ ಹಿತದವರೆಂದರಿತು ನಾ। ಮತಿಗೆಟ್ಟು ಕ್ಷಿತಿಪತಿಯೇನಿನ್ನನು। ಸ್ತುತಿಸದಾ ಅಪರಾಧೀ॥1॥ ಬಂದಾ ಅತಿಥಿಗಳಿಗೊಂದಿಸದೆ।

ಪರನಿಂದೆಯಲ್ಲಿ ಗೋವಿಂದ ನಿನ್ನನು। ವಂದಿಸದಾ ಅಪರಾಧೀ।।2।। ತನು-ಮನ-ಧನ ಕೊಟ್ಟಿರುವ ಶ್ರೀವರ। ಹನುಮೇಶವಿಠಲನೆ ನಿನ್ನನು। ನೆನೆಯದಾ ಅಪರಾಧೀ।।3।।

**ಬಾಯ ತೆರೆದ ಬಗಿಯೇನೊ** **ರಾಗ: ಬೃಂದಾವನ ಸಾರಂಗ**

ಬಾಯ ತೆರೆದ ಬಗಿಯೇನೊ ದೇವದೇವ ತೋಯಜದಳ ನೇತ್ರನೆ।।ಪ।। ನೀಯೆನಗಿದು ಪೇಳ್ಯೆ ನಿಜವಾಗಿ ಲಕ್ಷ್ಮೀನಾ। ರಾಯಣ ನರಸಿಂಹನೆ ।।ಅ.ಪ.।। ಅಸುರನ ಉದರವ ಹಸನಾಗಿ ಬಗೆವಾಗ ಬಾಯ ತೆರೆದಿಯಾ। ಬಿಸಜ ಭವಾಂಡವು ಬಸುರೊಳಗಿದ್ದ ಉಬ್ಬಸಿಗೆ ಬಾಯ ತೆರೆದಿಯೊ।।1।। ಮಡದೀಯ ರೂಪಕ್ಕೆ ಮರುಳಾಗಿ ಅದರಿಂದ। ಬಿಡದೆ ಬಾಯಿ ತೆರೆದಿಯಾ। ದೃಢದಿ ಪ್ರಹ್ಲಾದನ ಒಡೆಯ ರಕ್ಷಿಸೊ। ನುಡಿಗೆ ಬಾಯ ತೆರೆದಿಯೋ।।2।। ಗುರುಸತ್ಯಬೋಧರಾಯರ ನಿತ್ಯಭಜನೆಗೆ। ಬರಿದೆ ಬಾಯಿ ತೆರೆದಿಯೊ। ವರ ಕದರುಂಡಲಗಿ ಹನುಮಯ್ಯ ನೊಡೆಯನೆ। ಕರವ ಮುಗಿವೆ ಕರುಣಿ- ಸೊ।।3।।

**ನಾರಸಿಂಹ ನಾರಸಿಂಹ ನಾರಸಿಂಹ ಎನ್ನಿರೊ** **ರಾಗ: ಕಲ್ಯಾಣವಸಂತ–ಆದಿತಾಳ**

ನಾರಸಿಂಹ ನಾರಸಿಂಹ ನಾರಸಿಂಹ ಎನ್ನಿರೊ। ಭೂರಿ ಭಾಗ್ಯವಿತ್ತು ಸಲಹೆ ಇರುವುದಿಲ್ಲ ತೊಂದರೆ।।ಪ।। ದೇಶಕಾಲ ವರ್ತಮಾನ ಎಲ್ಲ ಅವನೆ ಆಗಿರೆ। ದೋಷರಾಶಿ ನಾಶ ಮಾಡೊ ಅವನೆ ನಮಗೆ ಆಸರೆ। ಪಾಪನೀಗಿ ಶಾಪಹರಿಪ ನಾರಸಿಂಹನೆಂದರೆ। ವೇಷಧಾರಿಯಾದ ಶ್ರೀ ಹೃಷಿಕೇಶ ದೇವರೆ।।1।। ಸತ್ಯ ಶಿವ ಸುಂದರ ಸೌಮ್ಯ ರೂಪನು। ನಿತ್ಯಭವ ಸಾಗರದ ಅಂಬಿಗನವನು। ಮಿಥ್ಯನಲ್ಲ ಸತ್ಯನವನು ನಿತ್ಯ ನಿರ್ಮಲಾಂಗನು। ಭಕ್ತಿಯಿಂದ ಧ್ಯಾನಿಸೆ ಮುಕ್ತಿಯನ್ನೇ ನೀಡುವನು।।2।। ಕಂದ ಪ್ರಹ್ಲಾದನಿಗೆ ಕಂಬದಿಂದ ಬಂದನು। ತಂದೆ ಹಿರಣ್ಯಕಶ್ಯಪನ ಕ್ಷಣದಲ್ಲಿ ಕೊಂದನು। ಬಂದ ಬೇಗೆ ಬೇನೆಗಳ ಹರಿಸುತ್ತಾ ನಿಂದನು। ನಿಂದ ಈ ಧರೆಯಲ್ಲಿ ಲಕ್ಷ್ಮೀ ನಾರಸಿಂಹನು।।3।। ಶ್ರೀಲಕ್ಷ್ಮೀ ದೇವಿಯಿಂದ ಶಾಂತ ರೂಪ ಪಡೆದನು। ಪಾಲಿಸುತ್ತ ಎಲ್ಲರನು ಧರೆಯಲ್ಲಿ ಮೆರೆದನು। ಬೆಲಗೂರು ಹನುಮನ ಸ್ವಾಮಿಯಾಗಿ ನಿಂದನು। ಕಾಲ ಧರ್ಮ ನಾಶವಾಗೆ ಉದ್ಧರಿಸುವೆನೆಂದನು।।4।।

**ಕರುಣಾಬ್ಧೆ ಶ್ರೀ ನಾರಸಿಂಹ** **ರಾಗ: ಆರಭಿ**

ಕರುಣಾಬ್ಧೆ ಶ್ರೀನಾರಸಿಂಹ ।। ಪ ।। ಶರಣಾಗತಜನರ ಪೊರೆವೊ ಕೃಪಾಳು ।। ಅ.ಪ.।। ತರಳನ ಮಾತನು ಸಲಿಸುವುದಕೆ ಕಂಬ । ಬಿರಿದು ಅವತಾರ- ಗೈದೆ।। 1 ।। ಕ್ಷೇಮವುಂಟಾದುದು ಶ್ರಮವೆಲ್ಲ ಪೋದುದು। ಭೂಮಿಭಾರ- ವಿಳಿದುದು ।। 2 ।। ಜಯ ಭಕ್ತವತ್ಸಲ ಜಯ ಜಗತ್ಪಾಲ। ಜಯ ಜಯ ಜಯ ಶ್ರೀ ಗುರು ರಾಮ ವಿಠಲ ।। 3 ।।

**ನರಹರಿಯೇ ಪಾಲಿಸೋ** **ರಾಗ: ರಂಜನಿ**

ನರಹರಿಯೇ ಪಾಲಿಸೋ।। ಪ ।। ಪರಮ ಪುರುಷ ಪ್ರಹ್ಲಾದವರದ ।। ಅ.ಪ. ।। ದನುಜ ತನ್ನ ಮಗನನು ಬಾಧಿಸುತಿರೆ। ಕನಲಿ ಕಂಬದಿಂದ- ವತರಿಸಿದ ।। 1 ।। ನಖದಿ ಉದರವನು ಸೀಳುತಲಿ ಹಿರ। ಣ್ಯಕನ ಕೊಂದು ಕರುಳನು ಧರಿಸಿದ ।। 2 ।। ಗುರು ರಾಮ ವಿಠಲ ಕಾಮಿತ ವರಗಳ । ಶರಣಗೆ ನೀಡುತ ಆದರಿಸಿದ ।। 3 ।।

**ನಾರಸಿಂಹ ನಮಿಪೆ ನಿಮ್ಮ** **ರಾಗ: ಕಾನಡ**

ನಾರಸಿಂಹ ನಮಿಪೆ ನಿಮ್ಮ ನತಜನಾಶ್ರಯ। ಘೋರ ದುರಿತ ದೂರ ಭಕ್ತಕುಮುದಕುಡು ರಾಯ।।ಪ।। ವಿವಿಧ ಗತಿಯಲಸುರ ಸುತನ ವೇಧೆಪಡಿಸಲು। ತವ ಪದಾಂಬುರುಹವ ನೆನೆಯೆ ಬಂದೆ ಕ್ಷಣದೊಳು।।1।। ಕೋಟಿ ಸಿಡಿಲು ಬಡಿದತೆರದಿ ಕೂಗು ಪುಟ್ಟಲು। ಜಾಟ ಸ್ತಂಭದೊಳುದಿಸೆ ದನುಜ ಕೂಟ ಬೆದರಲು।।2।। ಹಿರಣ್ಯಕಶಿಪುನಸುವ ಬಗೆದು ಕರುಳ ಧರಿಸಿದೆ। ತರಳಗೊಲಿದೆ ಗುರುರಾಮ ವಿಠಲ ನಂಬಿದ।।3।।

**ಶ್ರೀ ನರಹರಿ ಕರುಣಾಜಲಧೆ** **ರಾಗ: ಅಮೃತವರ್ಷಿಣಿ**

ಶ್ರೀ ನರಹರಿ ಕರುಣಾಜಲಧೆ ತವ ಚರಣ ನಂಬಿದೇ। ದೀನ ಜನರು ಪ್ರತಿದಿನ ಮೊರೆಯಿಡುತಿರೆ। ನೀನು ದಾಶಿಸುವರೇನೋ

ರಮಾಪತೇ। ದುರಿತಗಿರಿ ನಿಕರ ಕುಲಿಶಾಯುಧ ಧುರಧೀರಾಶೂರಾ। ದುರುಳ ಹಿರಣ್ಯ ಕಶಿಪು ದನುಜವನ ಕುಠಾರಾ। ಸರಸಿಜ ಭವ ಶಿವ ಪುರಂದರ ಮುಖ ಸುರ। ಸನ್ಮುನೀಂದ್ರ ನುತಿ ಪಾತ್ರ ಚರಿತ। ಉಗ್ರರೂಪ ಸಕಲ ಗ್ರಹಭಯ ಪರಿಹಾರೀ ಶೌರೀ। ಊರ್ಜಿತ ಸುಬಲ ಪರಾಕ್ರಮ ಮಧು ವೈರಿ। ಜಾಗ್ರತ್ಸ್ವಪ್ನ ಸುಷುಪ್ತಿಗಳೊಳೆನಗೆ। ಜಲಜನಾಭ ನಿನ್ನಯ ಚಿಂತನೆ ಕೊಡು। ಕ್ಷುದ್ರ ರೋಗಗಳುಪದ್ರ ಪಡಿಸುತಿಹುದೈಯ್ಯ। ಜೀಯಾ। ಕ್ಷೇಮವಿತ್ತು ನಿನ್ನವರ ದಾಸನೆನಿಸಯ್ಯಾ। ರುದ್ರಾಂತರ್ಗತ ಗುರುರಾಮ ವಿಠಲ। ಭದ್ರಮೂರುತಿ ಘಟಿಕಾಚಲ ನಿಲಯ।।

**ಅಪಮೃತ್ಯು ಪರಿಹರಿಸೋ ನಾರಸಿಂಹ** **ರಾಗ: ಅಠಾಣ**

ಅಪಮೃತ್ಯು ಪರಿಹರಿಸೋ ನಾರಸಿಂಹ। ಕೃಪಣವತ್ಸಲ ಹರಿಯೆ ಬಿನ್ನವಿಪೆ ನಿನಗೆ।।ಪ।। ಅನ್ಯರಿಗೆ ಮೊರೆ ಇಡೆನೊ। ನಿನ್ಹೊರತು ಇನ್ನಿಲ್ಲ। ಮನ್ಯುಸೂಕ್ತೋದಿತನೇ। ಎನ್ನ ಶಿಷ್ಯನಿಗೆ। ಬನ್ನ ಬಡಿಸುವ ರೋಗವನ್ನು ಮೋಚಿಪುದಯ್ಯ। ಅನ್ನಂತ ಮಹಿಮ ಹರಿ ನಿನ್ನ ಕೃಪೆ ತೋರೋ।।೧।। ತಂದೆ ತಾಯಿಯು ನೀನೇ। ಬಂಧು ಬಳಗವು ನೀನೇ। ಇಂದು ಅಂದಿಗೂ ನೀನೇ। ಎಂದೆಂದು ನೀನೇ। ಕಂದನನು ಸಲಹೆಂದು ಸಿಂಧುಶಯನನೆ ಬೇಡ್ವೆ। ಇಂದಿರಾಪತಿ ಗುರು ಗೋವಿಂದವಿಠಲಾ ।।೨।।

**ತಾರಕ ಹರಿ ಪೊರೆಯೋ** **ರಾಗ: ಚಕ್ರವಾಕ**

ತಾರಕ ಹರಿ ಪೊರೆಯೋ। ಹೇ ನರಹರಿ। ತಾರಕ ಹರಿ ಪೊರೆಯೋ।।ಪ।। ಸಾರಾಸಾರವ ಕಾಣೆನೊ ನರಸಿಂಗ। ಸಾರಿದೆ ತವಪದ ಸರಸಿಜ- ರಂಗ।।ಅ.ಪ.।। ಆರಿಗ್ಯಾರೆಲೊ ದೇವ। ಭಾರ ಕರ್ತೃವೆ ಹರಿ। ಭರಿಸುವೆ ಸಕಲರ ಭರ್ತೃವೆಂದೆನಿಸೀ। ಹರಣ ಬಾಂಧವರನ। ಪೊರೆವೆನೆಂಬ ಹಮ್ಮತಿಯ। ಹರಿಸಿ ಎನ್ನಯ ದುಷ್ಟ। ಕಾರಕ ಭ್ರಮೆ ಬಿಡಿಸೊ।।1।। ಕಾಯ ಬಂಧುಗಳೆಲ್ಲ। ಪ್ರೀಯರೆನಿಸಿಗೊಂಬ। ದ್ರವ್ಯ ವಿಭ್ರಮ ಬಿಡಿಸೋ। ಕಾಯಜ ಪಿತನೇ। ದಿವ್ಯ ಮೂರುತಿಗುರು। ಗೋವಿಂದ ವಿಠಲನೇ। ಭವ್ಯ ರೂಪವ ತೋರಿ। ದರ್ವಿಜೀವನ ಕಾಯೋ।।2।।

**ಏನಿದು ಎನ್ನಯ ಬಾಳು** **ರಾಗ: ತಿಲಂಗ್**

ಏನಿದು ಎನ್ನಯ ಬಾಳು - ನರಹರಿ। ಶ್ರೀನಿಧಿಯನು ಮನಮನೆಯೊಳು ನಿಲಿಸದಾ।।ಪ।। ಕಳೆಯಿತು ಆಯು - ಕಳೆಯಿತು ಕಾಯೋ। ಬೆಳೆಯಿತು ಆಶೆ - ಉಳಿಯಿತು ಸಾಧನ।।1।। ಹೊಟ್ಟೆಗೆ ಹಾಕೇ - ಪುಟ್ಟಿದು ದಾಯ್ತೇ। ಪೊಟ್ಟೆಯ ತುಂಬವೆ - ದುಷ್ಟ ಮೃಗಂಗಳು।।2।। ಇಲ್ಲವು ತಾ ಹರಿ - ಎಲ್ಲವೂ ನೀನೇನೆ। ಇಲ್ಲವು ಯಾಕೆ - ಎಲ್ಲ ಕಾಲದಿ ಸುಖ।।3 ।। ಪುಟ್ಟುವುದೇ ಜಗ - ಪುಟ್ಟಿಸ ನಿಲ್ಲದೇ। ಭ್ರಷ್ಟರ ಮತವಿದು - ಅಷ್ಟಕರ್ತನ ಬಿಡೆ।।4।। ಮಾನವಾ ತನುವಾ - ಬಾಹೋದೆ ದುರ್ಲಭ। ಮಾನದ ಶ್ರೀ ಕೃಷ್ಣ ವಿಠ್ಠಲನ ತೋರದಿಹ।।5।।

**ಕಂಬೋದ್ಭವ ಪಾಹಿ ನರಮೃಗ** **ರಾಗ: ಕಾಮಾಚ್**

ಕಂಬೋದ್ಭವ ಪಾಹಿ ನರಮೃಗ ದೇವ। ಡಿಂಬದಿ ನಿನ್ನ ಬಿಂಬ ಮೂಡಿಸುದೇವ।।ಪ।। ಶಂಭುಶಂಕರನ ಆರಾಧ್ಯದೈವ। ನಂಬಿದ ಭಕ್ತರ ಬೆಂಬಿಡದೆ ಕಾವ।।ಅ.ಪ.।। ಬಾಲಪ್ರಹ್ಲಾದಗೆ ಒಲಿದು ನೀ ಬಂದು। ಜ್ವಾಲಾಮುಖಿಯಾಗಿ ನಿಂದೆ ನೀ ಅಂದು।। ಖೂಳ ದೈತ್ಯನ ಹೃದಯವ ಬಗೆದು। ಜಾಲಾಡಿ ಬಾಲನಂಥ ರತ್ನವನು ಹುಡುಕಿದೆ।।1।। ಶ್ರೀರಮಣಿ ಬೊಮ್ಮ ಸುರರೆಲ್ಲ ನೋಡೆ। ಪೋರ ಪ್ರಹ್ಲಾದ ಪ್ರಾರ್ಥನೆಯ ಮಾಡೆ।। ಘೋರ ರೂಪವ ತೊರೆದು ಶಾಂತನಾಗಿ ಮೆರೆದೆ। ದ್ವಾರಕಾಯ್ದವನ ತಾತನ ಪೊರೆದೆ।।2।। ಒಳಹೊರಗುತುತಿಸಲು ಅಭಯವ ನೀವ। ಇಳೆಯೊಳು ನರಮೃಗ ಭಯಂಕರ ಕಾಯದವ।। ಕಳೆವ ದುರಿತಗಳ ಇಹಪರ ಭಯವ। ಖಳವೈರಿ ಮಂಗಳಾಂಗ ಹರಿವಿಠ್ಠಲ ಕಾವ।।3।।

**ಬಾಲಕನು ಬಿನ್ನಪವ** **ರಾಗ: ಶುದ್ಧಧನ್ಯಾಸಿ**

ಬಾಲಕನು ಬಿನ್ನಪವ ಕಾಲಿಗೆರಗುತೆಮಾಡೆ। ಲೋಲ ಶ್ರೀನರಹರಿಯೆ ದಯಬಾರದೇಕಯ್ಯ।।ಪ।। ಹಿರಿಯ ದೈವವು ಎಂದು ಮರೆಹೊಕ್ಕೆ ನಾನಿನ್ನ। ಬೇರೆ ಯಾರಿಹರು ಎನ್ನ ಕಾಯ್ವರನ್ನ।। ಸರಸಿಯೊಳು ಕರಿ ಕೂಗೆ ನೀಕಾಯ್ದೆಯರಿತೆ।

ಕರುಣಿ ನೀನಿರಲು ಎನಗಾವ ಚಿಂತೆ॥1॥ ಸರಸಿಜೋದ್ಭವವಿನುತ ಸುರವಂದ್ಯ ನೀನಯ್ಯ। ಮರೆತು ನಿನ್ನಯ ಪಾದ ಬದುಕಲೆಂತಯ್ಯ॥ ಶರಧಿಯನು ದಾಟಿಸೋ ಶರಧಿಸುತೆ ರಮಣನೆ। ಕರಮುಗಿದು ಬೇಡುವೆನು ತೋರು ಕರುಣವನೆ॥2॥ ತರಳ ಪ್ರಹ್ಲಾದನನು ಪೊರೆದ ಪ್ರಖ್ಯಾತನೇ। ನಿರುತ ನಿನ್ನಯ ನಾಮ ಜಪಿಸುವವಗೆ॥ ಸುರಧೇನು ತರುವಂತೆ ವರವಿತ್ತು ಸಲಹಯ್ಯ। ಪರು ಕಾರ್ಪರಾಧೀಶ ಗುರುಶಾಮ ಸುಂದರನೆ॥3॥

**ಹರಿಕೃಪೆಯಿಂದಲಿ ದೊರಕಿತು** — **ರಾಗ: ದೇಶೀಯವರ್ಣ-ಆದಿತಾಳ**

ಹರಿಕೃಪೆಯಿಂದಲಿ ದೊರಕಿತು ಎನಗೀ ಸಿರಿತಂಬೂರಿ॥ಪ॥ ನರಹರಿ ನಾಮಸ್ಮರಣೆಯಗೈವ ನರರಿಗೆ ಸಹಕಾರಿ॥ಅ.ಪ.॥ ತಾಪತ್ರಯವನು ಲೋಪಗೈವ ಸುಖರೂಪಿನ ತಂಬೂರಿ। ಶ್ರೀಪತಿ ಭಕ್ತಿ ನಿರೂಪಣದಿಂದ ಅಖಿಲಾಪತ್ಪರಿಹಾರಿ॥1॥ ವಾಸುದೇವ ನಿಜದಾಸರು ಪಿಡಿಯುವ ಭಾಸುರ ತಂಬೂರಿ। ವಾಸುಕಿಶಯನ ವಿಲಾಸದ ಕೀರ್ತಿ ವಿಕಾಸದ ಜಯಭೇರಿ॥2॥ ಅಂಬುಜಭವನ ಕುಟುಂಬಿನಿಯಕರಾಲಂಬನ ತಂಬೂರಿ। ತುಂಬುರು ನಾರದರಂಬುರುಹಾಕ್ಷನ ಹಂಬಲಿಗನುಸಾರಿ॥3॥ ಗಂಧರ್ವರ ಕರಪೊಂದಿ ಮೆರೆವ ಬಲುಸುಂದರ ತಂಬೂರಿ। ಸುಂದರಿಯರು ನಲವಿಂದಲಿ ನುಡಿಸುವಾನಂದ ಸುಗುಣಧಾರಿ॥4॥ ಶ್ರುತಿಯುತಮಾಗಲು ಮತಿಯುತರಿಗೆ ಸಮ್ಮತವಹ ತಂಬೂರಿ। ಶೃತಿಹೀನತೆಯಿಂದತಿಶಯಮಾಗದು ಕೃತಿಶತವದುಸಾರಿ॥5॥ ಲೋಕದ ಜನರಿಗನೇಕ ಸುಕೃತ ಪರಿಪಾಕದ ತಂಬೂರಿ। ಈ ಕಲಿದೋಷ ನಿರಾಕರಣೆಗೆ ಬಹು ಭೀಕರ ಮುಖದಾರಿ॥6॥ ಧರೆಯೊಳು ಪುಲಿಗಿರಿ ವರದ ವಿಠಲನ ಬಿರುದಿನ ತಂಬೂರಿ। ದುರಿತವೆಂಬ ಮದಕರಿಯನು ಸೀಳುವ ಹರ್ಯಕಾರಿ॥7 ॥

**ದಿನವೇ ಸುದಿನವು ಧ್ಯಾನಮಾಳ್ಪ** — **ರಾಗ: ರೇಗುಪ್ತಿ-ಅಟ್ಟತಾಳ**

ದಿನವೇ ಸುದಿನವು ಧ್ಯಾನಮಾಳ್ಪ ಜನವೇ ಸುಜನವು॥ಪ॥ ಘನತರ ಹರುಷದಿ ಮನದಣಿವಂದದಿ। ಮನಸಿಜನಯ್ಯನ ಮಹಿಮೆಯ ಪಾಡುವ॥ಅ.ಪ.॥ ಯುಕ್ತದಿ ಕೂಡಿ ಅಯುಕ್ತ ವಿರಕ್ತಿಯ ಮಾಡಿ। ಭುಕ್ತಿಗಾಗಲಿ ಭವಮುಕ್ತಿಗಾಗಲಿ ಹರಿ। ಭಕ್ತರನೊಡಗೂಡಿ ರಕ್ತಿಲಿಪಾಡುವ॥1। ತಾಳ ತಂಬೂರಿಯ ತಪ್ಪದೆತಂದು ಮೇಳೈಸಿ ಶ್ರುತಿಯ। ಹಾಳು ಹರಟೆಯಿಂದ ಕಾಲವ ಕಳೆಯದೆ। ಶ್ರೀಲಲಾಮನ ಕಥೆ ಪೇಳುವ ಕೇಳುವ॥2॥ ಅರ್ಥಾಪೇಕ್ಷೆಯಲಿ ಕಾಲಗಳನು ವ್ಯರ್ಥಮಾಡದಲೆ। ಅರ್ಥಿಪರಿಗೆ ಪರಮಾರ್ಥವನೀಯುವ। ಪಾರ್ಥಸಾರಥಿಯನ್ನು ಪ್ರಾರ್ಥನೆ ಮಾಡುವ॥3॥ ಕಾಮಕ್ರೋಧಗಳ ಕಳೆವ ರಘುರಾಮ ನಾಮಗಳ। ಪ್ರೇಮದಿಂ ಪಾಡುತ್ತ ರೋಮಾಂಚದೊಡಗೂಡಿ। ನೇಮದಿಂದಲಿ ಭವತಾಮಸ ಕಳೆಯುವ॥4॥ ಹರಿವಾಸರವನು ಸಾಧಿಸಿ ಮುರಹರ ನಾಮಗಳ। ಹರಿದಾಸರೊಡಗೂಡಿ ಹರುಷದಿಂದೆಚ್ಚತ್ತು। ವರದ ವಿಠಲ ನರಹರಿಯೆಂದು ಪಾಡುತ್ತ॥5॥

**ಹರಿಯೆನ್ನದೇ ಮೋಸಹೋದೆನೊ ಹರಿ** — **ರಾಗ: ಪಂತುವರಾಳಿ-ಆದಿತಾಳ**

ಹರಿಯೆನ್ನದೇ ಮೋಸಹೋದೆನೊ ಹರಿ। ನರಹರಿಯೆನ್ನದೇ ಮೋಸಹೋದೆನೊ॥ಪ॥ ದುರಿತಾರಿ ಪಾಲಿಸೊ ದುರ್ಗತಿಯಲಿ ನೊಂದೆ॥ಅ.ಪ.॥ ತಂದೆ ತಾಯಿ ಗರ್ಭದಲಿ ನಾ ಬಂದೆ। ತಡೆಯದೆ ಈ ಕರ್ಮಭೂಮಿಲಿ ನಿಂದೆ। ಮಂದನಾಗಿಯೆ ಪಾಪ ಮಾಡಿದೆ। ತಂದೆ ಮಾಧವ ಎನಗೇನುಪಾಯ ಮುಂದೆ॥1॥ ಪರರ ಸ್ತುತಿಸಿ ನಾಲಗೆ ಬರಡಾಯ್ತು। ಪರರ ಅನ್ನವನುಂಡು ಪೊಟ್ಟೆ ಬರಿದಾಯ್ತು। ಅರೆ ಕಾಸಿಗೆ ನೀಡಿ ಕರವೆಲ್ಲ ಬರಿದಾಯ್ತು। ಅಂಬುಜನಾಭ ಎನ್ನಂಗ ಇನಿತಾಯ್ತು॥2॥ ಸಾಧನ ಹೀನನಾದರೆ ಏನೊ। ಸಕಲಲೋಕಂಗಳ ಸಲಹುವೆನೀನು। ಸಾಧನ ಮಾಡಿಸೊ ಅಡಿಗಡಿಗೆ ನೀನು। ಶರಣೆಂಬೆ ಸಿರಿಕೃಷ್ಣ ಸಲಹೊ ನೀಯೆನ್ನ॥3॥

**ನಾರಾಯಣ ನರಹರಿ ಮಾಧವ** — **ರಾಗ: ಕಲ್ಯಾಣಿ**

ನಾರಾಯಣ ನರಹರಿ ಮಾಧವ ನಿಮ್ಮ ಪಾದದೋರೋ। ಸಾರಭಕುತಜನ ಸುರತರುವಾಗಿಹ ಪಾದಾದೋರೋ॥ಪ॥ ಸಿರಿದೇವಿ ನಯನ ಚಕೋರ ಚಂದಿರವಾದ ಪಾದಾದೋರೋ। ಗರುಡಕರದ್ವಯ ಪಾವುಡ ಮಾಡಿದ ಪಾದಾದೋರೋ॥1॥

ಗೋಪಿಯ ಮುಂದೋಡಿಯಲಿ ಕುಣಿದಾಡಿದ ಪಾದಾದೋರೋ। ಆ ಫಣಿಯಂಗವ ನಿರ್ವಿಷಮಾಡಿದ ಪಾದಾದೋರೋ॥2॥ ಸರಸಿಜ ಭವಭವರೊಂದಿತ ಪಾವನ ಪಾದಾದೋರೋ। ಗುರುಮಹಿಪತಿ ಕಂದಗೊಲಿದು ಬಂದ ಪಾದದೋರೋ॥3॥

**ಮಂಡೆ ಬಾಗಿ ಕರವ ಮುಗಿವೆ** **ರಾಗ: ಕಾನಡ–ಅಟ್ಟತಾಳ**

ಮಂಡೆ ಬಾಗಿ ಕರವ ಮುಗಿವೆ ಕಾಯೊ ಶ್ರೀ ಹರಿ। ಪುಂಡರೀಕನಯನ ಮರೆಯಬ್ಯಾಡ ನರಹರಿ॥ಪ॥ ಕರಿವರದ ಸರ್ವಾಂತರ್ಯಾಮಿ ನೀನೆ ಶ್ರೀಹರಿ। ಕರುಣಾಸಾಂದ್ರ ತರುಣಿಮಾನ ಕಾಯ್ದ ಹರಿಹರಿ॥ಶರಧಿಸುತೆ ರಮಣ ದೀನ ಬಂಧು ಶ್ರೀಹರಿ। ಅರಿಯೆ ನಿನ್ನುಳಿದು ಕಾಯ್ವರನ್ನು ನರಹರಿ॥1॥ ಮೀನನಾಗಿ ವೇದಗಳನು ತಂದೆ ಶ್ರೀಹರಿ। ಆ ನಗವನು ಪೊತ್ತು ಅಮೃತವೆರೆದೆ ನರಹರಿ॥ ನೀನೆ ವರಾಹನಾಗಿ ಅವನಿಯ ತಂದೆ ಶ್ರೀಹರಿ। ದಾನವನ ಉದರ ಬಗೆದೆ ಅಂದು ನರಹರಿ॥2॥ ಚಿಕ್ಕರೂಪದಿಂದ ಬಲಿಯ ತುಳಿದೆ ಶ್ರೀಹರಿ। ಸೊಕ್ಕಿದರಸುಗಳನು ತರಿದೆ ನೀನೆ ಹರಿಹರಿ॥ ರಕ್ಕಸನ ಕೊಂದು ಮಡದಿಯ ತಂದೆ ಶ್ರೀಹರಿ। ಅಕ್ಕರದಲಿ ಪಾರಿಜಾತ ತಂದೆ ಮುರಾರಿ॥3॥ ಅಂಬರವನು ತೊರೆದು ಬೌದ್ಧನಾದೆ ಶ್ರೀಹರಿ। ಕುಂಭಿಣಿಯೊಳು ಕುದುರೆಯೇರಿ ಮೆರೆದೆ ಹರಿಹರಿ॥ ಶಂಬರಾರಿ ಜನಕ ಧರ್ಮತನಯ ಶ್ರೀಹರಿ। ಅಂಬುಜಾಸನಾದಿ ದಿವಿಜ ವಂದ್ಯ ನರಹರಿ॥4॥ ಶೌರಿ ರಘುಜ ಮುನಿಜ ಪ್ರಾಣೇಶವಿಠಲ ಶ್ರೀಹರಿ। ಸಾರಿದ ಶರಣರಿಗೆ ಕಲ್ಪ ತರುವೆ ಹರಿಹರಿ॥ ಘೋರದುರಿತ ವನಕೆ ಧನಂಜಯನೆ ಶ್ರೀಹರಿ। ಭಾರ ನಿನ್ನದೇನೆ ಹೇಳಲ್ಯಾಕೆ ನರಹರಿ॥5॥

**ನರಸಿಂಹ ದೇವರನು ಸ್ತುತಿಸುವ** **ರಾಗ: ಶ್ರೀರಂಜಿನಿ**

ನರಸಿಂಹ ದೇವರನು ಸ್ತುತಿಸುವ ಜನಕೆಲ್ಲ। ಪರಮ ಹರುಷದಿ ನಿರುತ ಭಯವು ಇನ್ನಿಲ್ಲ॥ಪ॥ ಡಿಂಬವೆಂಬ ಕಂಬದಿಂದ ಸೂಸಿ ಬರುವ ದೈವ। ನಂಬಿ ಬರುವ ಜನರಿಗೆಲ್ಲಾ ಅನುಗ್ರಹ ಪ್ರಭಾವ॥ಅ.ಪ.॥ ನಿನ್ನ ಬಿಟ್ಟು ಅನ್ಯರಿಲ್ಲ ಎಂಬ ಭಕ್ತಿ ಭಾವ। ಇದ್ದವರನು ಎದ್ದು ಬಂದು ತಾಯಿಯಂತೆ ಕಾವ। ದೋಷರಾಶಿ ನಾಶಮಾಡಿ ಮೋಹ ಕಿತ್ತು ಹಾಕುವ। ಸಾರಿ ಬಂದು ಪ್ರೀತಿಯಿಂದ ಸದ್ಗುಣಗಳ ಸಾಕುವ॥1॥ ಅರಿವಿನ ಅರವಿಂದವನ್ನೇ ಚಿತ್ತದೊಳಗೆ ಬಿತ್ತುವ। ಧ್ಯಾನಗಾನ ಮಾಡುವವರ ಕೈಹಿಡಿದು ಎತ್ತುವ। ದೇಹ ಪ್ರಾಣ ಉಸಿರದೆಲ್ಲ ನಿಮ್ಮದೆಂದು ಹೇಳುವ। ಭಕ್ತಹೃದಯ ಮೊರೆಯದನ್ನು ಪಾರ್ಥಸಾರಥಿ ವಿಠಲ ಕೇಳುವ॥2॥

**ಆವುದೊಳ್ಳೆಯದೊ ನಿನ್ನಂಗ** **ರಾಗ: ಸಾವೇರಿ–ಅಟ್ಟತಾಳ**

ಆವುದೊಳ್ಳೆಯದೊ ನಿನ್ನಂಗ ಚಲುವ। ದೇವ ಬಂಕಾಪುರದ ಲಕುಮಿ ನರಸಿಂಹ ॥ಪ॥ ಜಗದೊಳಗೆ ತಾನು ತಂದೆಯ ಮಾತು ಕೇಳದಾ। ಮಗನು ಇಹ ಪರಕೆ ಸಲ್ಲುವ ಪ್ರಾಜ್ಞನೆ? ಬಗೆಗೊಳಿಸಿ ಪ್ರಹ್ಲಾದ ಪಿತನೊಡಲ ನಿನ್ನ ಕೂ। ರುಗುರಿನಿಂ ಬಗೆಸಿದಾತಂಗೆ ಮುಕುತಿಯನೀವೆ ॥1॥ ಪೊಡವಿಯೊಳು ಅಣ್ಣನಾಜ್ಞೆಯ ಮೀರಿ ನಡೆಯುತಿಹ ಒಡಹುಟ್ಟಿದವಗೆ ಕೈವಲ್ಯವುಂಟೆ? ದೃಢದಲಿ ವಿಭೀಷಣಾಗ್ರಜನನ್ನು ಬಾಣದಲಿ। ಕೆಡಹಿಸಿದ ಬಳಿಕವಗೆ ಸ್ಥಿರಪಟ್ಟ ಕಟ್ಟುವುದು ॥2॥ ರೂಢಿಯಲಿ ಗುರುದ್ರೋಹವನು ಮಾಡಿದವನ ಮೊಗ। ನೋಡಿದಾಗಲೆ ಪ್ರಾಯಶ್ಚಿತ್ತವುಂಟು। ನೋಡಿದಾಗಲೆ ಬೃಹಸ್ಪತಿ ಸತಿಗೆ ಅಳುಪಿದನ । ಸೂಡಿದಾತನ ಸ್ನೇಹವನು ಮಾಡಿಕೊಂಡಿರ್ಪೆ ॥3॥ ದೇಶದೊಳು ವಂಶ ಕಂಟಕರೆನಿಸಿದವರೊಳಗೆ। ಭಾಷಣವ ಮಾಡಬಪ್ಪುದೆ ಪ್ರಾಜ್ಞರು? ಬೇಸರಿಸದೆ ಕೌರವರ ಕೊಂದ ಪಾಂಡವರ ಸಂ। ತೋಷದಲಿ ಪಕ್ಷಿಕರ ಮಾಡಿಕೊಂಡಿರ್ಪೆ ॥4॥ ಪೊಡವಿಪತಿ ಕೇಳು ಶ್ರೀ ಆದಿ ಕೇಶವನೆ ಹಿಂ। ಗಡೆಯಲ್ಲಿ ಮನೆಯ ಕಟ್ಟಿಸಬಾರದೇ। ಬಿಡೆಯವಿಲ್ಲದೆ ಸಭಾಮಧ್ಯದಲಿ ಹೆಂಡತಿಯ। ತೊಡೆಯ ಮೇಲ್ಕುಳ್ಳಿರಿಸಿ ಕೊಂಡಿರ್ಪ ಹಿರಿಯತನ ॥5॥

**ಲಕ್ಷ್ಮೀ ನಾರಸಿಂಹನೇ** **ರಾಗ: ಆರಭಿ**

ಲಕ್ಷ್ಮೀನಾರಸಿಂಹನೇ। ದೇವದೇವ। ಕಾಯೋ ಹರಿ॥ಪ॥ ತರಳಗೊಲಿದು ಕಂಬದಿಂದಾ। ನರಮೃಗ ರೂಪನಾಗಿ ಉದ್ಭವಿಸಿದೇಯೊ ಹರೀ॥1॥ ಉಗ್ರಾವತಾರದಿಂದಾ ಕ್ರೂರದೈತ್ಯನ ಕರುಳ ಬಗೆದು ಮಾಲೆಧರಿಸಿದ ಹರೀ॥2॥ ಲಕ್ಷ್ಮಿಯನ್ನು

ತೊಡೆಯೊಳಿಟ್ಟು। ಆರ್ತಿಯಿಂದ ಭಕ್ತರನ್ನು ಪ್ರೇಮದಿಂದ। ಪೊರೆದೆಹರೀ।।3।। ಧರೆಯೊಳಧಿಕವಾದ। ಮಾರ್ಡ್ಳಿಯೆಂಬೊ। ಕ್ಷೇತ್ರದಲ್ಲಿ ನೆಲೆಸಿದೆ ದೇವ ಹರೀ।।4।।

**ಹೇ ನೃಸಿಂಹ ಪಾಹಿಮಾಂ** **ರಾಗ: ಕಲ್ಯಾಣವಸಂತ-ಆದಿತಾಳ**

ಹೇ ನೃಸಿಂಹ ಪಾಹಿಮಾಂ।।ಪ।। ಸಿಂಹರೂಪದಲ್ಲಿ ಈ ಕಂಭದೊಳಗೆ ತಾವು ಅಡಗಿ ಇರುವಿರಿ ನಂಬಿರುವ ಎದೆ ಹೂವನೆ ಆಸನವ ಮಾಡಿರುವಿರಿ। ವೈರಿಯಿಂದ ಕಾಯಬೇಕು। ಕರುಣೆಸುತ್ತ ಸದ್ಗುರು। ನಾರಾಯಣ 2, ಹೇ ನೃಸಿಂಹ ಪಾಹಿಮಾಂ।।1।। ದೋಷವನ್ನು ನಾಶಗೈದು। ಭಕ್ತಿಯನ್ನು ಪೋಷಿಸಿ। ಭಕ್ತ ಹೃದಯದಲ್ಲಿ ಸದಯನಾಗಿನಿಂದ ದೇವನೆ। ಏನು ಬಂದರೇನು ತಾವೆ ಕಾವಿರೆಂಬ ಭಾವನೆ। ನಾರಾಯಣ 2, ಹೇ ನೃಸಿಂಹ ಪಾಹಿಮಾಂ।।2।। ನಾನು ಕಾಲುಮಣೆಯು ತಮ್ಮ ಮಹಾಪಾದಪೀಠಕೆ। ತಮ್ಮಡಿಗಳು ಮುಟ್ಟಿದೊಡನೆ। ಅರಳಿ ಕಮಲವಾದೆನು। ಆ ಕಮಲದಲ್ಲೆ ತಾವು ಕಮಲೆಯೊಡನೆ ವಾಸಿಸಿ। ನಾರಾಯಣ 2, ಹೇ ನೃಸಿಂಹ ಪಾಹಿಮಾಂ।।3।।

**ಶ್ರೀಲೋಲನೆ ಮನೋಹರ (ಲಕ್ಷ್ಮೀನರಸಿಂಹ ಸ್ತೋತ್ರ)**

ಶ್ರೀಲೋಲನೆ ಮನೋಹರ ಶುದ್ಧ ಲಕ್ಷ್ಮೀನಾರಸಿಂಹ। ಲೋಲ ಲೋಚನೆಯ ಶ್ರೀ ಲೋಕಪಾಲ ನರಸಿಂಹ। ಕಮಲನಾಭನೆ ಭೃಂಗ ಕಮಲಭೃಂಗ ನರಸಿಂಹ।ವಿಮಲ ವಿಭವ ವಿಶ್ವಮೂರ್ತಿ ವಿಶ್ವಲೋಲ ನರಸಿಂಹ। ಬಾಲಾರ್ಕಕೋಟಿಬಾಲ ಭಾಸುರನೆ ನರಸಿಂಹ। ಲೀಲೆಯಿಂದ ಆಲದೆಲೆಯ ಮೇಲೆ ಇದ್ದೆ ನರಸಿಂಹ। ನೀಲ ಮೇಘ ಶ್ಯಾಮವರ್ಣ ನಿತ್ಯಕೃತ್ಯ ನರಸಿಂಹ। ಪಾಲಿಸಿದೆ ತ್ರಿಜಗವಂದ್ಯ ಪ್ರಳಯ ನೀನೆ ನರಸಿಂಹ। ಮತ್ಸ್ಯಮುಖದ ಸೋಮಕನ್ನ ಮರ್ದಿಸಿದೆಯೊ ನಾರಸಿಂಹ। ಕೂರ್ಮ ರೂಪಿನಿಂದ ಹರಿಯ ಕೂಡಿ ಕೆಡಹಿದೆ ನಾರಸಿಂಹ। ಕಟ್ಟಿ ಶಾಸ್ತ್ರ ವಜ್ರಂಗಳಿಗೆ ಕವಚವಾದೆ ನರಸಿಂಹ। ಬಿಡದೆ ಸೀಳ ಬಂದ ಕರಿಗೆ ಪ್ರೀತಿಗೊಂಡೆ ನರಸಿಂಹ। ಉಪ್ಪರಿಗೆಯಿಂದ ನಾನ್ ಉರುಳಿ ನೆನೆಯೆ ನರಸಿಂಹ। ಅಪ್ಪಿಗೊಂಡು ಕಾಯ್ದೆ ಎನ್ನಪ್ಪ ನೀನೆ ನರಸಿಂಹ। ಕುಪ್ಪಳಿಸಿ ಕಿಚ್ಚಿನೊಳಗೆ ಕೂಡೆ ಧುಮುಕಲು ನರಸಿಂಹ। ತಪ್ಪದೆ ಅಳಲಾಗ್ನಿ ಸ್ತಂಭವಾದೆ ನರಸಿಂಹ। ಉರಿಯ ಮರಣದೊಳಗುದ್ಭವಿಸಲ್ ನರಸಿಂಹ। ಉರಿಯ ಬಂದ ಮೃತ್ಯುವಿಗೆ ಮೃತ್ಯು ನೀನೇ ನರಸಿಂಹ। ಪ್ರಕಟಿಸಲು ಘೋರ ವಿಷವ ಭುಂಜಿಸಲು ನರಸಿಂಹ। ಸಕಲ ವಿಷವು ನಿಮ್ಮ ಪ್ರಸಾದವಾಯ್ತು ನರಸಿಂಹ। ಯಂತ್ರನಾಮ ಮಂತ್ರಗಳಿಗೆ ತಂತ್ರಿ ಲಿಖಿತ ನರಸಿಂಹ। ಸ್ಮರಿಸುವೋಲು ನಿಮ್ಮ ಪಾದ ಪದ್ಮಂಗಳಿಗೆ ನರಸಿಂಹ। ನಿಗಮಗೋಚರನೆ ನೀ ಮೂಲಮಂತ್ರ ನರಸಿಂಹ। ವಾತಪಿತ್ತ ಜಾಡ್ಯರೋಗ ವೈದ್ಯ ನೀನೆ ನರಸಿಂಹ। ಭೂತ ಪ್ರೇತಗಳಿಗೆ ನಿರ್ಭೀತು ನೀನೆ ನರಸಿಂಹ। ವಜ್ರದೃಷ್ಟಿ ವಜ್ರದೇಹ ವಜ್ರ ಲಿಖಿತ ನರಸಿಂಹ। ದುರ್ಜನರಿಪುವಶಳೆ ದುರ್ಜ ವಿಧಿಯೆ ನರಸಿಂಹ। ಕರುಳ ತೆಗೆದು ಬಗೆದೆ ಅಸುರನ ಘನ ತರಿಸಿದೆ ನರಸಿಂಹ। ಇನಿತು ಲಾವಣ್ಯ ಶ್ರೀ ಲಕ್ಷ್ಮೀ ಅರಸ ನರಸಿಂಹ। ಯೋಗವು ಪದ್ಮ ಹಾಸ ಯೋಗರೂಪ ನರಸಿಂಹ। ಭೋಗ ಪೀಠದಲ್ಲಿ ಅರಸಿ ದೆಯಯ್ಯ ಭೋಗರಾಜ ನರಸಿಂಹ। ಶಂಖಚಕ್ರ ಅಭಯ ಹಸ್ತ ಕಿಂಕರಾದ್ರಿ ನರಸಿಂಹ। ಓಮಳಾದ್ರಿ ನರಸಿಂಹ। ಗರುಡಾದ್ರಿ ನರಸಿಂಹ। ಗರುಡಗಮನ ನರಸಿಂಹ। ನರಮೃಗಾದಿ ನರಸಿಂಹ। ಇಂತಿವರ ನರಸಿಂಹ। ನಾರಸಿಂಹ ಜಯಮಂಗಳಂ ನರಸಿಂಹಗೆ। ಶುಭಮಂಗಳಂ ಅಹೋಬಲ ಕೃತನಿವಾಸಿಗೆ ನಾರಸಿಂಹಗೆ ನರಸಿಂಹಗೆ ಜಯ ಮಂಗಳಂ ನರಸಿಂಹಗೆ ಶುಭಮಂಗಳಂ ಪತಿತ ಪಾವನನಿಗೆ। ಅನಾಥನಾತನಿಗೆ। ಆಪದ್ಬಾಂಧವಗೆ ಭಕ್ತವತ್ಸಲಗೆ। ಭಕ್ತೋದ್ಧಾರಕಗೆ ಶಕ್ತಸರ್ವಸ್ವಗೆ। ಸಾಲಿಗ್ರಾಮ ನಿವಾಸಿಗೆ ನರಸಿಂಹಗೆ ಜಯಮಂಗಳಂ ನರಸಿಂಹಗೆ ಶುಭಮಂಗಳಂ।।

**ಸಿರಿರಮಣ ನರಹರಿಯ ಚರಣಗಳ** **ರಾಗ: ನಾಯಕಿ**

ಸಿರಿರಮಣ ನರಹರಿಯ ಚರಣಗಳ। ನಿರತ ಭಜಿಪರಿಗೆ ಸ್ಥಿರ ಸುಖವಿಹುದು। ದುರುಳ ವಿಷಯಗಳ ತೊರೆದು ಮುದದಿ ಮೈ। ಮರೆಯುವ ತೆರದಲಿ ಉರುತರ ಭಕುತಿಯಲಿ।। ತನಯ ಪ್ರಹ್ಲಾದನು ಜನಕನ ವಚನವ। ನನುಸರಿಸದೆ ತನ್ನ ಮನದಲಿ ಸಂತತ। ನೆನೆದು ಶ್ರೀ ಹರಿಯನು ದಿನ ದಿನ ನಾರಾಯಣನ। ಸುಮಂಗಳ ಗುಣಗಳ ಪೊಗಳುತ।।

**ಪಾಲಿಸೆನ್ನನು ಶ್ರೀಲಕುಮಿವರ** **ರಾಗ: ಮಧ್ಯಮಾವತಿ**

ಪಾಲಿಸೆನ್ನನು ಶ್ರೀಲಕುಮಿವರ ಭೂಲೋಲ ಕಾರ್ಪರ। ದೊಳು ಪಿಪ್ಪಲ ತರು ಸುಮಂದಿರ।। ಬಾಲತನದಿ ಜನಕನ ಬಹು ಕೀಳು ನುಡಿಗಳನು ಸಹಿಸಿದ। ಬಾಲಗೊಲಿದ ನರಹರಿಯೆ ಕೃಪಾಳೊ ನಿಮ್ಮ ಯ ಕಾಲಿಗೆರಗುವೆ। ಸಾಲಿಗ್ರಾಮದಿ ನೆಲೆಸಿ ತರುವರ ಮೂಲದಿ ಸೇವಿಪರ। ಪಾಲಿಸಲೋಸುಗ ನಿರಂತರ ಕಾಲಕಾಲಗಳಲ್ಲಿ ಬಿಡದೆ। ವಾಲಗ ಕೈಕೊಳ್ಳುತ ಮೆರೆವ ಕಾಳಿಯ ಮದನನೆ ತವಪದ ಕೀಲಾಜದಲಿ ಭಕುತಿಯ। ಮಂದಜಾಸನಾದಿ ಸುರಗಣ ವಂದಿತ ಸುಚರಣ। ದ್ವಂದ್ವ ಭಜಕ ವೃಂದ ಪೋಷಣ ಸಿಂಧು ಶಯನ ವಂದಿಪೆ। ಭವಬಂಧ ಬಿಡಿಸ್ಯಾನಂದಗರಿವ। ಸುಂದರ ಮೂರುತಿಯನು ಮನ। ಮಂದಿರದಲಿ ತಂದು ತೋರಿಸಿ। ನಾರದಾದಿ ಮುನಿ ಸುವರ್ಣಿತ ಉದಾರಚರಿತ। ನಾರಾಯಣ ಮುನಿ ಸುಪೂಜಿತ ಧಾರುಣಿಯೊಳು ಘೋರ। ಕೃಷ್ಣಾತೀರ ಸಂಸ್ಥಿತ ಸೇರಿದ ಭಕುತರಿಗೆ ತ್ರಿದಶ। ಭೂರುಹ ಸಿರಿ ನರಸಿಂಹನೆ।।

**ಯಾದವಗಿರಿ ವಾಸನಹುದೋ** **ರಾಗ: ಸಾವೇರಿ–ಅಟ್ಟತಾಳ**

ಯಾದವಗಿರಿ ವಾಸನಹುದೋ ಶ್ರೀ ನರಸಿಂಹ। ಆದಿನಾರಾಯಣ ಅಚ್ಯುತನಹುದೋ ।। ಪ।। ಖಳ ಸೋಮಕನ ಕೊಂದು ನೀರ ಮುಳುಗಿ ಬಂದೆ। ಇಳೆಯೊಳು ಸುರಾಸುರರೈತಂದು ಬೆರೆಯಲು। ಫಳಿಲನೆ ದೇವಜನರು ಬಂದು ನಿಲ್ಲಲು। ವ್ಯಾಳೀಶನ ಸುತ್ತಿ ಸೆಳೆವ ವೇಳೆಯಲ್ಲಿ। ಇಳಿದು ಪಾತಾಳಕೆ ಪರುವತ ಪೋಪುದ ಕಂಡು। ನಳಿನನಾಭನೆ ನಿಮ್ಮ ನೆನೆಯಲಾ ಧ್ವನಿಕೇಳಿ। ತಿಳಿದು ಕೂರ್ಮಾರೂಪಾಗಿ ಮಂದರವನು ಪೊತ್ತು। ಉಳಿಸಿದೆ ಲೋಕವನುನ್ನತ ಪರಾಕ್ರಮಿ। ಖಳ ಹಿರಣ್ಯಕ ಬಂದು ಎದುರಾರು ತನಗೆಂದು। ಇಳೆಯ ಕದ್ದೊಯ್ದು ಪೋಗುತಿರೆ ಸುರರದ ಕಂಡು। ಫಳಲನೆ ನಿಮ್ಮನು ಕೂಗಲಾ ಮೊರೆ ಕೇಳಿ । ತಿಳಿದು ಶಾಂತ ಮೂರುತಿ ಆಗಿ ಪಾವಕಮೂರ್ತಿ। ಕಳ್ಳ ದೈತ್ಯರ ಸಂಹಾರ ಮಾಡಿದೆ। ನಳಿನೋದ್ಭವನಯ್ಯ ಅಮರ ಚೆನ್ನಿಗರಾಯ।।1।। ಮಠದೊಳಗೆ ಪ್ರಹ್ಲಾದ ಹರನ ನಾಮ ಸ್ಮ ರಿಸದೆ। ದಿಟದಿ ಹರಿಯ ನಾಮಾವಳಿಯ ನುತಿಪುದ ಕಂಡು। ಕುಟಿಲದಾನವ ನಿಟಿಲನೇತ್ರನ ಸ್ಮ ರಿಸೆನಲು। ಕಠಿನ ನಿಲುವನು ಬಿಡದ ತರಳ ನಿನ್ನಯ ಗುಣವ। ಪಠಿಸಲ್ಕೆ ಪರಮ ಭಕ್ತನ ಕಾಯಬೇಕೆಂದು। ನಟಿಸಿ ಕಂಬದಿ ಮೂಡಿ ನಗುವ ಭಕ್ತನ ನೋಡಿ। ಸಟೆಯಲ್ಲ ಅಜಾಂಡಗಳೊಡೆವಂತೆ ಘರ್ಜಿಸೆ। ಕುಟಿಲ ದಾನವ ನೋಡುವುದ ಕಂಡು ಎಳೆ ತಂದು। ಚಿಟಿ ಚಿಟಿ ಚಿಟಿರೆನ್ನಲು ಉಗುರಲಿ ಸೀಳಿ। ಪುಟ ನೆಗೆದ ಪಾದದಲಿ ಬಲಿಯ ತಲೆಯನು ಮೆಟ್ಟಿ। ನಟನೆಯಾಡುವ ವಿದ್ಯೆಯನೆಲ್ಲಿ ಕಲಿತೆಯೊ ಕಪಟನಾಟಕ। ಸೂತ್ರಧಾರಿ ನೀನಹುದು ಕ್ಷತ್ರಿಯರ। ಚಟುಲ ಛಲದಿ ಬಗೆದು ಕರುಳ ಬಗೆದು ತುಳಿದ। ದಿಟರನು ಸಂಹರಿಸಿದ ಚಲುವರಾಯ।।2।। ಅಂದು ಕೌಸಲ್ಯಾಗರ್ಭ ಚಂದ್ರಮನಾಗಿ ಬೆಳಗಿ। ಕೊಂದೆ ರಾವಣ ಕುಂಭಕರ್ಣಾದಿಗಳನೆಲ್ಲ। ಇಂದಿರೇಶನೆ ನಿನ್ನ ನಂಬಿದ ವಿಭೀಷಣನಿಗೆ। ಎಂದಿಗೂ ಪಾಲವಿಲ್ಲದ ಪದವಿಯನಿತ್ತೆ। ಕಂದನಾಗಿ ಜನಿಸಿ ವಸುದೇವ ದೇವಕಿಯರಿಗೆ। ನಂದಗೋಕುಲದೊಳು ನಿಂದೆ ಕಂಸನ ಕೊಂದೆ। ಚಂದಿರನ ನೆರೆಪೋಲ್ವ ಉನ್ನತೋನ್ನತನಾಗಿ। ಕೊಂದು ತ್ರಿಪುರಾಸುರರ ಅವರ ಸತಿಯರ ಕೆಡೆಸಿ। ಒಂದೆ ನೆಗೆತಕೆ ನೆಗೆವ ಅಶ್ವವನೇರಿದೆ ವ-। ಸುಂದರೆಯ ಮೇಲೆ । ಲೀಲೆಯಾಡುತ ಕೃತಯುಗದಿ। ನಿಂದು ಯಾದವಗಿರಿಯ ಮೇಲೆ ತ್ರೇತಾಯುಗದಿ। ಬಂದು ರಾಮನೆನೆಸಿ- ಕೊಂಡೆ ದ್ವಾಪರಯುಗದಿ। ಬಂದು ರಾಮನೆನಿಸಿ ಕೊಂಡೆ ಕಲಿಯುಗ- ದೊಳು। ನಿಂದು ಚೆಲುವ ಚೆನ್ನಿಗರಾಯನಾದೆ ವರ। ನಂದಿಯ ಚಂದದಿಂ ರಕ್ಷಿಸಿದೆ ಎನ್ನ ಕಾಯೋ। ಇಂದಿರಾಪ್ರಿಯ ಬಾಡದಾದಿ ಕೇಶವ ರಾಯ।।3।।

**ನರಸಿಂಹ ದೇವ ನಮೋ** **ರಾಗ:ಹಿಂದೋಳ–ಆದಿತಾಳ**

ನರಸಿಂಹ ದೇವ ನಮೋ। ನರಸಿಂಹ ದೇವ ನಮೋ। ನರಸಿಂಹ ದೇವ ನಮೋ।।ಪ।। ವಸುದೇವ ತನಯನೇ ವೈಕುಂಠ ನಿಲಯನೇ। ಭಕ್ತರೋದ್ಧಾರಕನೇ ನಿನಗೆ ನಮೋ।।ಅ.ಪ।। ಕುಸುಮ ನಾಭನೆ ನಿನಗೆ ನಮೋ। ಕೋಮಲ ರೂಪನೆ ನಿನಗೆ ನಮೋ। ಕನಕಾಂಬರಧರ ನಿನಗೆ ನಮೋ। ಪಕ್ಷಿವಾಹನನೇ ನಿನಗೆ ನಮೋ।।1।। ಭಕ್ತವತ್ಸಲನೆ ನಿನಗೆ ನಮೋ। ಲಕ್ಷ್ಮೀಕಾಂತನೆ ನಿನಗೆ ನಮೋ। ಚಿನ್ಮ ಯ ರೂಪನೆ ನಿನಗೆ ನಮೋ। ಮುಕ್ತಿದಾತನೆ ನಿನಗೆ ನಮೋ।।2।।

**ಲಕ್ಷ್ಮೀಲೋಲ ಶ್ರೀ ನರಸಿಂಹ** **ರಾಗ: ಆನಂದಭೈರವಿ-ಆದಿತಾಳ**

ಲಕ್ಷ್ಮೀಲೋಲ ಶ್ರೀ ನರಸಿಂಹ। ಸಂಸಾರ ಭಯಾಪಹಾರ ನರಸಿಂಹ।।ಪ।। ಕಂಜಲೋಚನ ಶ್ರೀ ನರಸಿಂಹ। ಘೋರಪಾಪವಿನಾಶ ನರಸಿಂಹ ।।ಅ.ಪ.।। ಮತ್ಸರ ಮದ ಅರಿ ಭಯಂಕರ ಶ್ರೀನರಸಿಂಹ। ದೇವಿಹೃದಯ ರಾಜಹಂಸ ನರಸಿಂಹ। ಗರುಡವಾಹನ ಶ್ರೀ ನರಸಿಂಹ। ತೇಜೋಮಯ ಶ್ರೀ ನರಸಿಂಹ।।1।। ಉಗ್ರಲೋಚನ ಶ್ರೀ ನರಸಿಂಹ। ಶೇಷಶಯನ ಶ್ರೀ ನರಸಿಂಹ। ಭಕ್ತರಿಗೆ ಒಲಿಯುವ ಶ್ರೀ ನರಸಿಂಹ। ಮುಕ್ತಿಯ ನೀಡುವ ಶ್ರೀ ನರಸಿಂಹ।।2।।

**ಯೋಗಿ ಹೃನ್ಮಂದಿರವಾಸ** **ರಾಗ: ಹಂಸಾನಂದಿ-ಆದಿತಾಳ**

ಯೋಗಿ ಹೃನ್ಮಂದಿರವಾಸ ಪಾಪನಾಶನ। ಕೃಪಾನಿಧಾನ ನರಸಿಂಹ ।।ಪ।। ಕ್ಷೀರ ಸಮುದ್ರವಿಹಾರಿ। ಪ್ರಹ್ಲಾದ ಪಾಲಕ। ಕೃಪಾನಿಧಾನ। ಕೋಮಲ ಹೃದಯಶೃಂಗಾರಿ।।ಅ.ಪ.।। ದೈತ್ಯ ಮುರಾಸುರನರಕೇಸರಿ। ಜಯ- ವರ್ಧನ ದೈತ್ಯ ಮರ್ದನ। ಜಯ ಮನರಂಜನ ಪಾವನ। ಮುಕ್ತಿ ತೋರುವ ಶ್ರೀ ನರಸಿಂಹ।।1।।

**ವಿಶ್ವಮೂರ್ತಿ ವಿಶ್ವ ಪಿತನೆ** **ರಾಗ:ಹಿಂದೋಳ-ಆದಿತಾಳ**

ವಿಶ್ವಮೂರ್ತಿ ವಿಶ್ವಪಿತನೆ ಲಕ್ಷ್ಮೀನರಸಿಂಹ। ಯೋಗದಾಯಕ ಯೋಗರೂಪ ಯೋಗಾನರಸಿಂಹ।।1।। ತೇಜೋಮಯ ವಜ್ರದೇಹ ಲಕ್ಷ್ಮೀ ನರಸಿಂಹ। ನಿಗಮಗೋಚರ ನಿತ್ಯಾನಂದ ಯೋಗಾನರಸಿಂಹ।।2।। ಶಂಖಚಕ್ರ ಅಭಯಹಸ್ತ ಲಕ್ಷ್ಮೀನರಸಿಂಹ। ವೇದಾಂತವೇದ್ಯ ಯೋಗೀಂದ್ರ ಗುಹ್ಯೈಕ ಯೋಗಾನರಸಿಂಹ।।3।। ವಜ್ರನಖಾಯ ಮಹಾನಂದ ಲಕ್ಷ್ಮೀನರಸಿಂಹ। ಜಗದ್ವ್ಯಾಪಿನೇ ಜಗತ್ಪಾಲಾ ಯೋಗಾನರಸಿಂಹಾ।।4।। ವಿಶ್ವಂಭರ ಭಕ್ತವತ್ಸಲ ಲಕ್ಷ್ಮೀನರಸಿಂಹ। ವರದಾಯಕ ಮುಕ್ತಿಪ್ರದಾಯಕ ಯೋಗಾನರಸಿಂಹ।।5।।

**ಜಯಜಯ ಲಕ್ಷ್ಮೀ ಜಯಲಕ್ಷ್ಮೀ ನರಸಿಂಹ (ಅಕ್ಷರಮಾಲಾ)** **ರಾಗ: ಕುರಂಜಿ**

ಜಯಜಯ ಲಕ್ಷ್ಮೀ ಜಯಲಕ್ಷ್ಮೀ ನರಸಿಂಹ। ಜಯ ಹರಿ ಲಕ್ಷ್ಮೀ ನರಸಿಂಹ। ಅನಾಥ ರಕ್ಷಕ ನರಸಿಂಹ। ಆಪದ್ಬಾಂಧವ ನರಸಿಂಹ। ಇಷ್ಟಾರ್ಥಪ್ರದ ನರಸಿಂಹ। ಈಶ ಪರೇಶ ನರಸಿಂಹ। ಉಗ್ರಸ್ವರೂಪ ನರಸಿಂಹ। ಊರ್ಧ್ವ ಬಾಹು ನರಸಿಂಹ। ಎಲ್ಲ ರೂಪ ನರಸಿಂಹ। ಐಶ್ವರ್ಯಪ್ರದ ನರಸಿಂಹ। ಓಂಕಾರ ರೂಪ ನರಸಿಂಹ। ಔಷಧ ನಾಮ ನರಸಿಂಹ। ಅಂಬರ ವಾಸ ನರಸಿಂಹ। ಕಾಮಜನಕ ನರಸಿಂಹ। ಕಿರೀಟ ಧಾರಿ ನರಸಿಂಹ। ಖಗಪತಿ ವಾಹನ ನರಸಿಂಹ। ಗದಾಧರನೆ ನರಸಿಂಹ ಗರ್ಭನಿರ್ಭೇದಿತ ನರಸಿಂಹ। ಗಿರಿಧರವಾಸ ನರಸಿಂಹ। ಗೌತಮ ಪೂಜಿತ ನರಸಿಂಹ। ಘಟಿಕಾ ಚಲಶ್ರೀ ನರಸಿಂಹ। ಚತುರ್ಭುಜನೆ ನರಸಿಂಹ। ಚತುರಾಯುಧಧರ ನರಸಿಂಹ। ಜ್ಯೋತಿ ಸ್ವರೂಪ ನರಸಿಂಹ । ತಂದೆ ತಾಯಿಯು ನರಸಿಂಹ। ತ್ರಿನೇತ್ರಧಾರಿ ನರಸಿಂಹ। ದನುಜ ಮರ್ದನ ನರಸಿಂಹ। ದೀನನಾಥ ನರಸಿಂಹ। ದುಃಖ ನಿವಾರಕ ನರಸಿಂಹ। ದೇವಾದಿದೇವ ನರಸಿಂಹ। ಜ್ಞಾನಪ್ರದನೆ ನರಸಿಂಹ। ನರಹರಿ ರೂಪ ನರಸಿಂಹ। ನರನಾರಾಯಣ ನರಸಿಂಹ। ನಿತ್ಯಾನಂದ ನರಸಿಂಹ। ನರಮೃಗರೂಪ ನರಸಿಂಹ। ನಾಮಗಿರೀಶ ನರಸಿಂಹ। ಪಂಕಜಾನನ ನರಸಿಂಹ। ಪಾಂಡುರಂಗ ನರಸಿಂಹ। ಪ್ರಹ್ಲಾದ ವರದ ನರಸಿಂಹ। ಪಿನಾಕಧಾರಿ ನರಸಿಂಹ। ಪುರಾಣಪುರುಷ ನರಸಿಂಹ। ಭವಭಯ ಹರಣ ನರಸಿಂಹ। ಭಕ್ತಜನಪ್ರಿಯ ನರಸಿಂಹ। ಭಕ್ತೋದ್ಧಾರ ನರಸಿಂಹ। ಭಕ್ತಾನುಗ್ರಹ ನರಸಿಂಹ। ಭಕ್ತ ರಕ್ಷಕ ನರಸಿಂಹ। ಮುನಿಜನ ಸೇವಿತ ನರಸಿಂಹ। ಮೃಗರೂಪ ಧಾರಿ ನರಸಿಂಹ। ಯಜ್ಞಪುರುಷ ನರಸಿಂಹ। ರಂಗನಾಥ ನರಸಿಂಹ। ಲಕ್ಷ್ಮೀರಮಣ ನರಸಿಂಹ। ವಂಕಿ ಪುರುಷ ನರಸಿಂಹ। ಶಾಂತಮೂರ್ತಿ ನರಸಿಂಹ। ಷಡ್ವರ್ಗಾರಿ ನರಸಿಂಹ । ಸರ್ವ ಮಂಗಳ ನರಸಿಂಹ। ಸಿದ್ಧಿ ಪುರುಷ ನರಸಿಂಹ। ಸಂಕಟ ಹರಣ ನರಸಿಂಹ। ಸಾಲಿಗ್ರಾಮ ನರಸಿಂಹ। ಹರಿನಾರಾಯಣ ನರಸಿಂಹ। ಕ್ಷೇಮಕಾರಿ ನರಸಿಂಹ। ಜಯಜಯ ಲಕ್ಷ್ಮೀ ನರಸಿಂಹ। ಜಯಶುಭ ಮಂಗಳ ನರಸಿಂಹ।।(2 ಸಾರಿ)



**ಔತುಕೊಂಡಿ ಯಾಕೊ ನರಹರಿ** **ರಾಗ: ಕಾಪಿ**

ಔತುಕೊಂಡಿ ಯಾಕೊ ನರಹರಿ। ಪ್ರಾರ್ಥನೆಯನ್ನು ಕೇಳೊ ಸ್ವಾಮಿ।।ಪ।। ವೇದತಂದು ಭಾರಪೊತ್ತು। ಕೋರೆ ತೋರಿ ಕರುಳ ಬಗೆದು। ಬೇಡಿ ಭೂಮಿ ದೂಡಿ ನೃಪರ। ಸಾಗರವ ಬಂಧಿಸಿದಭಯವೋ।।1।। ಕದ್ದು ಬೆಣ್ಣೆ ಕಳ್ಳನೆನಿಸಿ। ವದ್ದು ತ್ರಿಪುರಾಸುರರ ಸದೆದು। ಹದ್ದನೇರುವುದನೆ ಬಿಟ್ಟು। ಹಯವನೇರಿದ ಭಯವೋ ಸ್ವಾಮಿ।।2।। ತರಳಗೊಳಿದು ಬರಲು ನಿನ್ನ। ಇರಿಸಿ ಸ್ನಾನಕೆನುತ ಪೋಗಿ। ತ್ವರದಿ ಬಂದು ನೋಡಲು। ಅದ್ಭುತದಿ ಬೆಳೆದ ಭಯವೋ ದೇವ।।3।। ನಿಲುಕದಿರಲು ನಿನ್ನ ವದನ। ಯುವಕ ನೋಡಿ ಮೊರೆಯನಿಡಲು। ತವಕಿಸುವಿ ಬಾಲಕನೆ ನಿನ್ನ। ಸಮಕೆ ಎನ್ನ ಮಾಡಿಕೊ ಎಂದು।।4।। ಸಿರದಿ ಕರವನಿಡುತ ತನ್ನ। ಸಮಕೆ ಬರುವ ತೆರದಿ ನಿನ್ನ। ಸಿರವ ಪಿಡಿದು ಬಿತ್ತಿಸ್ತುತಿಸೆ। ಕುಳಿತೆ ಕೂಡಲಿಯ ತೀರದಲಿ।।5।। ಭಕ್ತರೆಲ್ಲ ನೆರೆದು ನಿನ್ನ। ಭಕ್ತಿ ಪಾಶದಿಂದ ಬಿಗಿದು। ಇಚ್ಛೆ ಬಂದ ತೆರದಿ ಕುಣಿಸೆ। ಮೆಚ್ಚಿ ಅವರ ಪೊರೆವ ದೇವ।।6।। ಬಂದ ಜನರು ಛಂದದಿಂದ। ತುಂಗಭದ್ರೆ ಸಂಗಮದಲಿ। ಮಿಂದು ನಿನ್ನ ವಂದಿಸುವರೊ। ತಂದೆ ಕಮಲನಾಭ ವಿಠ್ಠಲ।।7।।

**ದುರಿತಗಜ ಪಂಚಾನನ** **ರಾಗ: ನಾದನಾಮಕ್ರಿಯ–ಆದಿತಾಳ**

ದುರಿತಗಜ ಪಂಚಾನನ ನರ। ಹರಿಯೆ ದೇವರ ದೇವ ಕಾಯೊ ಗೋವಿಂದಾ।।ಪ।। ಹೆಸರುಳ್ಳ ನದಿಗಳ ಒಳಗೊಂಬೊ ಸಮುದ್ರನು। ಬಿಸುಡುವನೆ ಕಾಲುಹೋಳೆಗಳ ಗೋವಿಂದ।।1।। ಒಂದು ಮೊಲಕೆ ಆರು ಹುಲಿ ಬಂದು ಕವಿದಿವೆ। ಬಂಧನ ಬಿಡಿಸೆನ್ನ ತಂದೆ ಗೋವಿಂದಾ ।।2 ।। ಹೆತ್ತ ಮಕ್ಕಳು ಹುಚ್ಚರಾದರೆ ತಾಯಿ-ತಂದೆ। ಎತ್ತದೆ ನೆಲಕೆ ಬಿಸುಡುವರೆ ಗೋವಿಂದ।।3।। ಮುನ್ನ ಮಾಡಿದ ಕರ್ಮ ಬೆನ್ನ ಬಿಡದಿದ್ದರೆ। ನಿನ್ನ ಓಲೈಸಲ್ಯಾಕೆ ಗೋವಿಂದಾ।।4।। ಆಪತ್ತು ತಾಪತ್ರಯ ಬೆನ್ನ ಬಿಡದಿದ್ದರೆ। ಶ್ರೀಪತಿ ಶರಣೆನ್ನಲ್ಯಾಕೆ ಗೋವಿಂದಾ।।5।। ಅರಸು ಮುಟ್ಟಲು ದಾಸಿ ರಂಭೆಯಾದಳು ದೇವ। ಪರಶು ಮುಟ್ಟಲು ಲೋಹ ಸ್ವರ್ಣ ಗೋವಿಂದಾ ।।6।। ಮಾನಾಭಿಮಾನದೊಡೆಯ ರಂಗವಿಠಲ। ಜ್ಞಾನಿಗಳರಸನೆ ಕಾಯೋ ಗೋವಿಂದಾ।।7।।

**ಏನ ಹೇಳಲಿ ನರಹರಿ** **ರಾಗ: ಮುಖಾರಿ–ಆದಿತಾಳ**

ಏನ ಹೇಳಲಿ ನರಹರಿ ನಿನ್ನ ಮಹಿಮೆಯನು ನಿನ್ನ।।ಪ।। ಧ್ಯಾನ ಮಾಡೇನೆಂದರೆ ನಿಲ್ಲಗೊಡದು ಮನ।। ಅ.ಪ।। ಸಚ್ಚಿದಾನಂದ ಪಾದಾರವಿಂದವ। ಮೆಚ್ಚಿ ಮೌನವಾಗಿ ಇರು ಎಂದರೆ।। ಹುಚ್ಚಿದ್ದ ಕಪಿಯಂತೆ ವಿಷಯವೆಂಬಡವಿಯಲಿ। ಕಿಚ್ಚು ಕಂಗೊಂಡು ಎನ್ನ ಕಾಡುತಿದೆ।। 1 ।। ವಾಸುದೇವನ ಗುಣಗಳ ಸ್ತುತಿಸದೆದು। ರಾಶೆಯೊಳು ಬಿದ್ದು ಕಾಡುತಿದೆ।। ಲೇಸಾಗಿ ನಾಯಿಬಾಲಕೆ ನಾರಾಯಣ ತೈಲ। ಏಸು ಬಾರಿ ತೀಡಿದರೆ ನೀಟಾಗುವದೊ।। 2 ।। ಸಾಧು ಸಜ್ಜನರ ಸಂಗವ ಮಾಡಲೊಲ್ಲದೆ। ಬಾಧಿಸುತಿದೆ ದುಷ್ಟಸಂಗದಿಂದ।। ಮಾಧವ ಭಕ್ತ ವತ್ಸಲ ಹಯವದನನೆ। ನೀ ದಯಮಾಡಿ ನಿನ್ನಂತೆ ಮಾಡೆನ್ನನು ।। 3 ।।

**ನಂಬಿದೆ ನಿನ್ನ ಪಾದ** **ರಾಗ:ಆರಭಿ–ಅಟ್ಟತಾಳ**

ನಂಬಿದೆ ನಿನ್ನ ಪಾದ ನರಸಿಂಹ। ಎನ್ನ ಬೆಂಬಿಡದೆ ಸಲಹಯ್ಯ ನರಸಿಂಹ।। ನಂಬಿದವರನು ಕಾಯೋ ನರಸಿಂಹ। ಹಂಬಲಿಸುವೆನು ಬಲು ನರಸಿಂಹ।ಪಾದ। ನಂಬಿದವರನು ಕಾಯೋ ನರಸಿಂಹ।।1।। ತುಂಬುರು ನಾರದ ಪ್ರಿಯ ನರಸಿಂಹ। ಚೆಲ್ವ। ಶಂಬರಾರಿಯ ಪಿತನೆ ನರಸಿಂಹ। ಅಂಬರೀಷನ ಕಾಯ್ದೆ ನರಸಿಂಹ। ಜಗ। ದಂಬರಮಣನೆ ಸಿರಿ ನರಸಿಂಹ।।2।। ಬಾಲ ಕರೆದಲ್ಲಿ ಬಂದೆ ನರಸಿಂಹ। ಭಕ್ತ ಪಾಲಿಪ ದಯಾಳು ಸಿರಿ ನರಸಿಂಹ।। ಲೀಲೆಯಿಂದಲಿ ಹಿರಣ್ಯನ। ಕೊಂದು। ಲೋಲ ಸಿರಿಯರಸನೆ ನರಸಿಂಹ।।3।। ಅಚ್ಚುತಾನಂತ ಗೋವಿಂದ ನರಸಿಂಹ।ಸಿರಿ। ಸಚ್ಚಿದಾನಂದ ಮುಕುಂದ ನರಸಿಂಹ।। ಕಿಚ್ಚಿನಂದದಿ ಬೆಂದೆ ನರಸಿಂಹ। ಭವವಿಚ್ಚೆಯಿಂದ ಬಿಡಿಸಯ್ಯ ನರಸಿಂಹ।।4।। ಕರಿಮೊರೆಯನು ಕೇಳಿ ನರಸಿಂಹ।ಬಲು। ಭರದಿಂದೊದಗಿ ಬಂದೆ ನರಸಿಂಹ।। ಗರುಡ ವಾಹನನಾಗಿ ನರಸಿಂಹ।ಉ। ದ್ಧರಿಸಿ ಕಾಯಿದೆಯಲ್ಲೊ ನರಸಿಂಹ।।5।। ದೇವರ ದೇವನು ನೀನೆ ನರಸಿಂಹ ।ಬೇರೆ। ಕಾವರನು ಕಾಣೆನಯ್ಯ ನರಸಿಂಹ।। ಭಾವಜನಯ್ಯನೆ ಸಿರಿ ನರಸಿಂಹ।ನಿನ್ನ।

ಸೇವೆಯ ಪಾಲಿಸಿ ಕಾಯೊ ನರಸಿಂಹ॥6॥ ತಂದೆ-ತಾಯಿ ಗುರುದೈವ ನರಸಿಂಹ।ಎನ್ನ। ಬಂಧುಬಳಗವು ನೀನೆ ನರಸಿಂಹ। ಕುಂದು ಹೆಚ್ಚು ನೋಡಬೇಡ ನರಸಿಂಹ।ಪು। ರಂದರ ವಿಠಲ ಕಾಯೊ ನರಸಿಂಹ॥7॥

**ದೇಶಾಧಿಪತಿ ನರಹರಿಯೆ** **ರಾಗ: ಸಾವೇರಿ–ಅಟ್ಟತಾಳ**

ದೇಶಾಧಿಪತಿ ನರಹರಿಯೆ ನಿನ್ನಯ ಪಾದ। ದಾಸರ ದಾಸನೆಂದೆನಿಸ ಬೇಕೆನ್ನ ॥ಪ॥ ರಜತಮಗುಣ ಪ್ರವರ್ತಕ ಮೂಲಾಂತರದಿಂದ। ಯಜಮಾನತನದ ಅಹಂಕಾರ ನಾನೊಲ್ಲೆ। ಭುಜ ಚಕ್ರಧರ ಸಾತ್ವಿಕರ ಪಾದಾಂಬುಜ। ರಜ ಭಜಕರ ಭಜಕನೆಂದೆನಿಸೆನ್ನ॥1॥ ಸಿರಿಗಂಧ ಕುಂಕುಮ ಸಾದು ಜವಾದಿ ಕ-। ತ್ತುರಿ ತಿಲಕವ ನೊಸಲಲಿ ಇಡಲೊಲ್ಲೆ। ತಿರುಚೂರ್ಣ ದ್ವಾದಶ- ನಾಮವನಿಡುವರ। ಪರಿಚಾರಕರ ಪರಿಚಾರಕ ನೆನಿಸೆನ್ನ ॥2॥ ಸ್ವಾದು ಕಲ್ಪಿತವಾದ ಭಕ್ಷ್ಯಭೋಜ್ಯಗಳನು। ಆದರದಿಂದ ಮೃತವನುಣಲು ನಾನೊಲ್ಲೆ। ಬೋಧ ಹೇಳುವ ಕೇಳುವ ಹರಿದಾಸರ। ಪಾದತೀರ್ಥ ಪ್ರಸಾದವ- ನುಣಿಸೆನ್ನ ॥3॥ ಕಾಲಕರ್ಮದೊಳುಪೇಕ್ಷೆಯ ಮಾಡಿ ಹರಿಭಕುತಿ। ಶೀಲರಹಿತ ಬ್ರಾಹ್ಮಣನಾಗಲೊಲ್ಲೆ। ಮೇಲನರಿತು ವಿಷ್ಣುಭಕುತಿಯ ಮಾಳ್ಪ ಚಾಂ। ಡಾಲರ ಮನೆಯ ಬಾಗಿಲ ಕಾಯಿಸೆನ್ನನು ॥4॥ ಕ್ರೂರ ಶಾಸ್ತ್ರವನೋದಿ ಕುರಿಕೋಣವನೆ ಕಡಿದು ಘೋರ ನರಕದಿ ಬೀಳುವುದನು ನಾನೊಲ್ಲೆ ನೀರಜನಾಭ ನಿನ್ನ ಚರಣಸೇವಕರನು ಸೇರಿ ಬದುಕುವಂತೆ ಮಾಡೊ ಶ್ರೀಹರಿಯೇ ॥5॥ ಪಟ್ಟೆಪಟ್ಟಾವಳಿ ದಿವ್ಯದುಕೂಲಮಿಂ-। ಚಿಟ್ಟ ವಸ್ತ್ರಗಳುಡಲು ನಾನೊಲ್ಲೆನೊಲ್ಲೆ। ನೆಟ್ಟನೆ ಕಾವಿ-ಕಾಷಾಯಾಂಬರಗಳನು। ಉಟ್ಟವರಿಗೆಲ್ಲ ಬಂಟನೆಂದೆನಿಸೆನ್ನ ॥6॥ ಅರ್ಥ ವಿಷಯಂಗಳ ಫಲವನರಿತು ಪುಣ್ಯ। ತೀರ್ಥಯಾತ್ರೆಗಳ ಮಾಡುವುದೆ ನಾನೊಲ್ಲೆ। ದೈತ್ಯ ಮರ್ದನ ಬಾಡದಾದಿಕೇಶವ ನಿನ್ನ। ಕೀರ್ತನಗೈವರ ಸ್ತುತಿಕ ನೆಂದೆನಿಸೆನ್ನ ॥7॥

**ಕಾಯೋ ಶ್ರೀ ನಾರಸಿಂಹ** **ರಾಗ: ಶಂಕರಾಭರಣ**

ಕಾಯೋ ಶ್ರೀ ನಾರಸಿಂಹ ಕಾಯೋ। ಕಾಯೋ ಜಯ ನಾರಸಿಂಹ ಕಾಯೋ॥ಪ॥ ಕಾಯೊ ಶ್ರೀ ನಾರಸಿಂಹ ತ್ರಯಂಬಕದ್ಯಮರೇಶ। ಭಯ ಅಂಧ ತಿಮಿರ ಮಾರ್ತಾಂಡ ಶ್ರೀ ನಾರಸಿಂಹ॥1॥ ಘೋರ ಅಕಾಲ ಮೃತ್ಯು ಮೀರಿ ಬರಲು ಕಂಡು। ಧೀರನೀ ಬಿಡಿಸದಿನ್ಯಾರೋ ಶ್ರೀ ನಾರಸಿಂಹ॥2॥ ಭೀಷಣನೆ ಸುಭದ್ರದೋಷಿ ಮೃತ್ಯುಗೆ ಮೃತ್ಯು। ಸುಷುಮ್ನನಾಡೀಸ್ಥಿತ ಪ್ರಭುವೆ ಶ್ರೀ ನಾರಸಿಂಹ॥3॥ ಜ್ಞಾನರಹಿತನಾಗಿ ನಾ ನಿನ್ನ ಮರೆತರೆ। ನೀನು ಮರೆತದ್ಯಾಕೊ ಹೇಳೋ ಶ್ರೀನಾರಸಿಂಹ॥4॥ ಪ್ರಭುಕುಲೋತ್ತಮನೆನಿಸಿ ಅಬಲರ ಕಾಯದಿರೆ। ಸಬಲರು ಕಂಡು ಮೆಚ್ಚುವರೆ ಶ್ರೀ ನಾರಸಿಂಹ॥5॥ ಪಾಲಮುನ್ನೀರಾಗದ ಪದುಮೆ ಮನೋಹರ। ಗೋಪಾಲ ವಿಠ್ಠಲ ಜಗತ್ಪಾಲ ಶ್ರೀ ನಾರಸಿಂಹ॥6॥

**ಜಯ ನಾರಸಿಂಹ** **ರಾಗ: ಜಯಂತಶ್ರೀ**

ಜಯ ನಾರಸಿಂಹ ಕಾಯೋ॥ಪ॥ ಘೋರ ಅಕಾಲ ಮೃತ್ಯು ಮೀರಿ ಬರುವುದ ಕಂಡು। ವೀರ ನೀ ಬಿಡಿಸದಿದ್ದರೆ ಇನ್ಯಾರೊ। ಶ್ರೀ ನರಸಿಂಹ ಕಾಯೊ॥1॥ ಭೀಷಣನೆ ಸುಭದ್ರ ದೋಷ ಮೃತ್ಯುವಿಗೆ। ಮೃತ್ಯು ಸುಷುಮ್ನ ನಾಡೀ ಸ್ಥಿತ ಪ್ರಭುವೇ॥2॥ ಜ್ಞಾನ ರಹಿತನಾಗಿ ನಾ ನಿನ್ನ ಮರೆತರೆ। ನೀ ನೆನ್ನ ಮರೆತಿದ್ಯಾತಕೆ ಪೇಳೊ॥3॥ ಪ್ರಬಲ ತಮನೆನಿಸಿ ಅಬಲರು ಕಾಡಿದರೆ। ಸುಬಲರು ಕಂಡು ಮೆಚ್ಚುವರೇನೊ॥4॥ ಪಾಲ ಮುನ್ನಿಗನಾದ ಪದುಮ ಮನೋಹರ ಗೋ। ಪಾಲ ವಿಠಲ ಜಗತ್ಪಾಲ ಶ್ರೀ ನಾರಾಯಣ॥5॥

**ಪಾಲಿಸೋ ನರಸಿಂಹ** **ರಾಗ: ಶಂಕರಾಭರಣ–ಅಟ್ಟತಾಳ**

ಪಾಲಿಸೋ ನರಸಿಂಹ ಪಾಲಿಸೋ॥ಪ॥ ಪಾಲಿಸೋ ಪರಮ ಪಾವನ ಕಮ। ಲಾಲಯನಂಬಿದೆ ನಿನ್ನ ಆಹಾ। ಬಾಲೇಂದು ಕೋಟಿಯಸೋಲಿಪ ನಖ ತೇಜ। ಮೂರ್ಲೋಕದರಸನೆ ಪಾಲಿಸು ಬಿಡದೆಲೆ॥ಅ.ಪ.॥ ಹಿಂದೆ ಪ್ರಹ್ಲಾದನ ಮೊರೆಯಕೇಳಿ। ಬಂದು ಕಾಯ್ದೆಯೊ ಭಕ್ತಪ್ರಿಯ ಸಖ। ಸಂದೋಹ ಮೂರುತಿ ಆಯತಾಕ್ಷ। ಎಂದೆಂದು ಬಿಡದಿರು

ಕೈಯ ಆಹಾ। ವೃಂದಾರಕೇಂದ್ರರ ಬಂದ ದುರಿತಗಳ। ಹಿಂದೆಮಾಡಿ ಕಾಯ್ದ ಇಂದಿರಾರಮಣನೆ॥1॥ ಹರಣದಲಿ ನಿನ್ನ ರೂಪ ತೋರಿ। ಪರಿಹರಿಸೊ ಎನ್ನ ತಾಪದೂರ। ಇರದಿರೊ ಹರಿ ಸಪ್ತ ದ್ವೀಪಾಧಿಪ ಸಿರಿಪತಿ ಭಕ್ತ ಸಲ್ಲಾಪ ಆಹಾ। ಕರಣ ಶುದ್ಧನ ಮಾಡಿ ಕರೆಯೊ ನಿನ್ನ ಬಳಿಗೆ। ನರಕಂಠೀರವ ನಿನ್ನ ಚರಣ ಆಶ್ರಯಿಸಿದೆ॥2॥ ಶರಣ ಪಾಲಕನೆಂಬೊ ಬಿರುದು ಕೇಳಿ। ತ್ವರಿತದಿ ಬಂದೆನೊ ಅರಿದು ಇನ್ನು। ಪರಿಪರಿ ಅಪರಾಧ ಮರೆದು ಪರ। ತರನೆ ನೋಡೆನ್ನ ಕಣ್ ತೆರೆದು ಆಹಾ। ಮರಣ-ಜನನಗಳ ತರಿದು ಬಿಸುಟು ನಿನ್ನ। ಶರಣರ ಸಂಗದಲ್ಲಿರಿಸಿ ಉದ್ಧರಿಸೆನ್ನ॥3॥ ಸಂಸಾರ ಸಾಗರದೊಳಗೆ ಎನ್ನ। ಹಿಂಸೆಗೊಳಿಸುವರೆ ಹೀಗೆ ಎಲೊ। ಕಂಸಾರಿ ಬಾಗೆ ಅನ್ಯರಿಗೆ ಮತ್ತೆ। ಸಂಶಯವಿಲ್ಲ ಮಾತಿಗೆ ಆಹಾ। ಹಂಸ ಡಿಬಿಕರನ್ನು ಧ್ವಂಸ ಮಾಡಿದ ಶೌರಿ। ಶಿಂಸುಮಾರ ಮೂರ್ತಿ ದಿವಸ ದಿವಸದಲ್ಲಿ॥4॥ ಸಿರಿಬೊಮ್ಮ ಭವ ಶಕ್ರಸುರರ ಕೈಯ। ನಿರುತಸ್ತುತಿಸಿಕೊಂಬ ಧೀರ ಶುಭ। ಪರಿಪೂರ್ಣಗುಣ ಪಾರಾವಾರ ಪೊರೆ-ವರ ಕಾಣೆನಂತ ಸುಂದರ ಆಹಾ। ಸ್ಮರನ ಕಾಂತಿಯ ನಿರಾಕರಿಸುವ ತೇಜನೆ। ಎರವು ಮಾಡದೆ ಹೃತ್ಸರಸಿಜದೊಳು ತೋರಿ॥5॥ ಮೊದಲು ಮತ್ಸ್ಯಾವತಾರದಿ ವೇದ। ವಿಧಿಗೆ ತಂದಿತ್ತೆ ವಿನೋದಿ ಆ ಶರಧಿಯೊಳು। ಸುರರಿಗೋಸ್ಕರದಿ ನೀನು ಸುಧೆಯ ಸಾಧಿಸಿ ಉಣಿಸಿದಿ ಆಹಾ। ಅದ್ಭುತ ಭೂಮಿಯ ತೆಗೆದೊಯ್ದನ ಕೊಂದು। ಮುದದಿ ಹಿರಣ್ಯಕನುದರ ಬಗೆದ ಧೀರ॥6॥ ಬಲಿಯ ಮನೆಗೆ ಪೋಗಿ ದಾನಬೇಡಿ। ತುಳಿದೆ ಪಾತಾಳಕ್ಕೆ ಅವನ ಪೆತ್ತ-ವಳ ಶಿರತರಿದ ಪ್ರವೀಣ ನಿನ್ನ ಛಲಕೆಣೆಗಾಣೆ ರಾವಣನ ಆಹಾ। ತಲೆಯನಿಳುಹಿ ಯದುಕುಲದಿ ಜನಿಸಿ ಮತ್ತೆ। ಲಲನೇರ ಪತಿವ್ರತವಳಿದ ಅಶ್ವಾರೂಢ॥7॥ ಮಾನಸ ಪೂಜೆಯ ದಯದಿ ಇತ್ತು। ಶ್ರೀನಾಥ ಕಳೆ ಭವವ್ಯಾಧಿ ಕಾಯೊ। ಅನಾಥ ಬಂಧು ಸುಮೋದಿ ಚತುರಾನನ ಪಿತ ಕೃಪಾಂಬೋಧಿ ಆಹಾ। ನಾನೊಬ್ಬರನರಿಯೆ ಗಾನ- ವಿನೋದಿಯೆ। ಏನೇನು ಮಾಡುವ ಸಾಧನ ನಿನ್ನದು॥8॥ ನಿನ್ನ ಸಂಕಲ್ಪವಲ್ಲದೆ ಇನ್ನು। ಅನ್ಯಥಾ ಆಗ ಬಲ್ಲುದೆ ಇದು। ಚೆನ್ನಾಗಿ ನಾ ತಿಳಿಯದೆ ಮಂದ। ಮಾನವನಾಗಿ ಬಾಳಿದೆ ಆಹಾ। ಎನ್ನಪರಾಧವ ಇನ್ನು ನೀನೋಡದೆ। ಮನ್ನಿಸು ದಯದಿ ಜಗನ್ನಾಥ ವಿಠಲ॥9॥

**ಪ್ರಣವ ಪ್ರತಿಪಾದ್ಯ** ರಾಗ: ಪಂತುವರಾಳಿ

ಪ್ರಣವ ಪ್ರತಿಪಾದ್ಯ ಪ್ರಹ್ಲಾದ ವರದ। ಪ್ರಣತ ಕಾಮದನೆ ಪ್ರಾರ್ಥಿಸುವೆ ಪ್ರಭುವೆಂದು॥ಪ॥ ಸಕಲ ಜೀವಜಡಾತ್ಮಕ ಜಗತಿನೊಳಗಿದ್ದು। ಅಕಳಂಕ ನಾಮರೂಪದಿ ಕರೆಸಿ। ಪ್ರಕಟನಾಗದೆಲೆ ಮಾಡಿಸಿ ಸಕಲ ಕರ್ಮ। ಸುಖದುಃಖಗಳಿಗೆ ಗುರಿಮಾಡಿ ಎಮ್ಮನು ನೋಳ್ಪೆ॥1॥ ಏನೆಂಬೆ ನಿನ್ನ ಮಹಿಮೆಗೆ ರಮಾಪತಿ ನಿನ್ನ। ದೀನರಲ್ಲವೇ ತತ್ತ್ವಮಾದಿ ಸುರರು। ದಾನಾವಾಂತಕನೇ ವಿಜ್ಞಾಪನೆಯ ಕೈಕೊಂಡು। ದೀನರುದ್ಧರಿಸುವುದು ದಯದಿಂದ ನಿರುತ॥ 2 ॥ ಬುಧ್ಯಾದಿ ಇಂದ್ರಿಯಗಳೊಳಗೆ ತತ್ವತಿಗಳೊಳ-ಗಿದ್ದು। ಬಹುವಿಧಚೇಷ್ಟೆಗಳನೆ ಮಾಡಿ। ಬದ್ಧರನು ಮಾಳ್ಪೆ ಭವದೊಳಗೆ ಜೀವರನು। ಅನಿರುದ್ಧನೆಂದೆನಿಪ ಎಲ್ಲರೊಳು ಜ್ಞಾಪಕನಾಗಿ॥3॥ ದಾಶರಥೀ ನೀನೇ ಗತಿ ಎಂದು ಮೊರೆಹೊಕ್ಕೆನು। ವಿಭೀಷಣಗೆ ಲಂಕಾಧಿಪಟ್ಟವಿತ್ತೇ। ವಾಸವಾನುಜ ಜಗನ್ನಾಥವಿಠಲ। ಭಕ್ತ ಪೋಷಕನು ನೀನಹುದು ಕಲ್ಪಕಲ್ಪಗಳಲ್ಲಿ॥4॥

**ಕನಕಮುನಿ ಕರಕಮಲ** ರಾಗ: ಕಾಂಬೋದಿ–ಝುಂಪೆತಾಳ

ಕನಕಮುನಿ ಕರಕಮಲ ಪೂಜಿತಾಂಘ್ರಿ। ಮನುಜ ಮೃಗವೇಷ ಮಾರಮಣ ನಿನಗಾನಮಿಪೆ॥ಪ॥ ನಿರ್ದುಷ್ಟ ನಿರವದ್ಯ ನಿರವಧಿಕ ಮಹಮಹಿಮ। ಸ್ವರ್ಧುನೀಪಿತನೆ ಸಮಭ್ಯಧಿಕ ಶೂನ್ಯ॥ ವರ್ಧಿಸಲಿ ನಿನ್ನಲ್ಲಿ ಸದ್ಭಕ್ತಿ ಖಳ ಸಂಪ್ರ-।ಮರ್ಧನ ಮಮ ಸ್ವಾಮಿ ಸರ್ವಾಂತರ್ಯಾಮಿ॥1॥ ತೀರ್ಥಪದ ನಿನ್ನ ಸತ್ಕೀರ್ತಿ ಸರ್ವತ್ರ । ಕೀರ್ತಿಸುವ ಭಕ್ತರ ಭವಾಬ್ಧಿಹರನೆ॥ ಪಾರ್ಥಸಖ ಸರ್ವದಾ ಪ್ರಾರ್ಥಿಸುವೆ ನಿನ್ನ ಚಿ-।ನ್ಮೂರ್ತಿ ಮನದಲಿ ಸ್ಫೂರ್ತಿಯಲಿ ಸರ್ವದಾ॥2॥ ಸೂತ್ರನಾಮಕ ಪ್ರಾಣಮಿತ್ರ ಭಾರತ ಪಂಚ-। ರಾತ್ರಾದಿ ಆಗಮ ಸ್ತೋತ್ರರಪ್ರಿಯ॥ ಕ್ಷೇತ್ರಜ್ಞ ಶ್ರೀಜಗನ್ನಾಥ ವಿಠಲ ಅಹೋ-। ರಾತ್ರಿಯಲಿ ನಿನ್ನವರ ಸಹವಾಸ ಕೊಡು ಎನಗೆ॥3॥

**ಶ್ರೀ ನರಸಿಂಹ ಕಾಯೋ** **ರಾಗ: ಶ್ರೀ**

ಶ್ರೀ ನರಸಿಂಹ ಕಾಯೋ। ದಾನವಾನಿಕಾಧ್ವಾಂತಾ ।।ಪ।। ಭಾನು ಕಾಮಿತ ಸುರಧೇನು। ಘೋರ ದುರಿತಾ ಪರಿಹಾರ ಮಾಳ್ಪರ ಕಾಣೆ ।।ಅ.ಪ।। ವೀರಾನಿನ್ನುಳಿದು ಇನ್ನಾರಾ। ಭೀಷಾಣ ಉಗ್ರ ವಿಶ್ವವಾಸ ಭದ್ರಾನೆ। ಸ್ವ ಪ್ರಕಾಶಾ ಮೃತ್ಯು ಮೃತ್ಯು ನಿರ್ದೋಷಾ।। 1 ।। ಪ್ರಬಲಾ ನೀ ತುಚ್ಛ ಮಾಡಿ ಅಬಲಾರ ಕೈಬಿಡಲು। ಸುಬಲಾರ್ಮೇಚ್ಚೋರೆ ಶಾಮ ಸಬಲಾ।। 2 ।। ಜ್ಞಾನ ಶೂನ್ಯನಾ ನಿನ್ನ ಧ್ಯಾನವ ಮರೆತರೆ। ನೀನು ಹಾಗೆ ಮರೆಯ ಬೇಕೇನೂ ।। 3 ।। ಎಲ್ಲಾರಿಗೊಡೆಯ ಲಕ್ಷ್ಮೀ ನಲ್ಲಾ ಪ್ರಾಣೇಶ ವಿಠಲಾ। ಬಲ್ಲೀದ ಭಯವಾ ಕಳೆಯ ಬಲ್ಲೀ ।। 4 ।।

**ಹ್ಯಾಂಗ ಮಾಡಲೋ ನರಸಿಂಗ** **ರಾಗ: ಅಭೇರಿ**

ಹ್ಯಾಂಗ ಮಾಡಲೋ ನರಸಿಂಗ ಧೊರೆಯೆ ।।ಪ।। ಹ್ಯಾಂಗೆ ಮಾಡಲಿನ್ನು ಭವದಿ। ಭಂಗಪಡುವೆ ನಿಮ್ಮ ಪಾದ। ಸಂಗ ದೊರಕುವುದಕೆ ಅಂತ। ರಂಗದ ಸಾಧನ ಯಾವುದ್ದೇಳೊ।।ಅ.ಪ।। ಎಲ್ಲಿ ಪೋದೆಯೋ ನಮ್ಮಲ್ಲೆ ನೀನು। ಕಲ್ಲು ಆದೆಯೋ। ಬಲ್ಲೆ ಸುಖದ ಬಾಧೆ। ಎಲ್ಲ ಬಿಟ್ಟು ನಿಮ್ಮ ಪಾದದಲ್ಲಿ ಸೇರಿ ಸೇವೆ। ಮಾಳ್ಪರಲ್ಲಿ ಛಲವ ಮಾಡುವರೆ ।।1।। ಎಷ್ಟು ಮರುಗಲೋ ನಾಮನದಿ। ಬಾಯಿಬಿಟ್ಟು ಒದರಲೋ। ಸಿಟ್ಟು ಮಾಡದೆಲೆ ನೀನು ಇಷ್ಟು ಮಾತುಗಳನ್ನೇ ಕೇಳಿ। ಸೃಷ್ಟಿಗೀಶ ಸರ್ವ ಅಭೀಷ್ಟ ಕೊಡುವೆ ಎಂದು ಬಂದೆ।। 2 ।। ಬೇಸರವಾಯಿತೋ ದೇಹ ಎನಗೆ ಸೋಸು ಇಲ್ಲವೋ। ವಾಸುದೇವ ನಿನ್ನ ಪೂಜೆ ಆಸೆಮಾತ್ರದಿಂದ ದೇಹ। ಪೋಷಿಸುವೆನು ನಿತ್ಯ ಇಂದಿರೇಶ ಮನದಿ ಭಾಷಿಸುವುದು।।3।।

**ಭಾರವಾಗಿದೆ ಬದುಕು ನಾರಸಿಂಹನೆ** **ರಾಗ: ಶುಭಪಂತುವರಾಳಿ**

ಭಾರವಾಗಿದೆ ಬದುಕು ನಾರಸಿಂಹನೆ ಕಾಯೊ। ದೂರಾದೆ ನಿನ್ನಿಂದ ಮೋಹಗಳಲಿ ಸಿಲುಕಿ।।ಪ।। ಸುಖದ ಬಟ್ಟಲ ಬೇಗ ಕಸಿದೆ ಎಂದಳು- ತಳುತ। ದುಃಖವೆಂದೆಂದೂ ಕೊನೆಗಾಣದೆಂದೆಳುತಾ। ಸುಖದುಃಖತಿರುಗುತಿಹ ಚಕ್ರವೆಂಬರಿವಿದ್ದೂ। ಸುಖದ ಬೆನ್ನ ಹತ್ತುವುದೇ ದುಃಖಕಾರಣವಲೆ।।1।। ಲೆಕ್ಕವಿಡದೆಲೆ ಪಾಪಕರ್ಮಗಳ ಮಾಡುತ್ತ। ಸೊಕ್ಕಿನಿಂ ನಿಯಮಗಳ ಧಿಕ್ಕರಿಸಿ ನಡೆದೆ। ಉಕ್ಕಿ ಚೆಲ್ಲಿದ ಹಾಲು ಮಿಕ್ಕ ಆಯುವಿನ್ನೆಷ್ಟೋ। ಮಕ್ಕಳಾಟವೇ ಪುಣ್ಯಗಳಿಸಿ ಏರುವುದು।।2।। ಸಿಕ್ಕಜನ್ಮವ ವ್ಯರ್ಥ ಮಾಡಿಕೊಂಡೆನೊ ದೇವ। ಬಿಕ್ಕಿ ಅಳುತಿಹೆನಿಂದು ಕೈಯ ಹಿಡಿಯೊ ಸ್ವಾಮಿ। ಕಕ್ಕಸದ ರಕ್ಕಸರ ಇಕ್ಕಡಿ ಮಾಡಿದವನೆ ಎನ್ನ। ಸೆಕ್ಕಿಳಿಸಿ ಕಕ್ಕುಲತೆ- ಯಲಿ ಸಲಹೊ ಚೆನ್ನಕೇಶವನೆ।।3।।

**ನರಹರಿಯನು ನೆರೆನಂಬಿದೆನು** **ರಾಗ: ಶಿವರಂಜನಿ**

ನರಹರಿಯನು ನೆರೆನಂಬಿದೆನು ನಾನು ಕರುಣಾವಾರಿದೆ ಪಾಲಿಸಯ್ಯ ।।ಪ।। ದುರಿತ ಸಾಗರದಿ ಬಿದ್ದಿರುವೆ ನೀ ಮರೆಯದೆ ತ್ವರದಿ ದಾಟಿಸೋ ಎನ್ನ ಜೀಯಾ।।ಅ.ಪ.।। ಸ್ನಾನಕ್ಕೆ ಮೈ ಛಳಿಯಾಯ್ತೋ ಧ್ಯಾನಕ್ಕೆ ಮರುವಾಯ್ತೋ। ದಾನಕ್ಕೆ ಲೋಭ ಅಡ್ಡಾಯಿತೋ। ಮಾನಕ್ಕೆಕೋಪ ಬೀಜವಂಕುರಿಸಿತೋ। ಶ್ವಾನ ನಂದದಿ ಬಾಳಾಯ್ತೋ।।1।। ಬಲೆಯ ಕಾಣದೆ ಮೃಗ ಫಲ ಮೆಲುವುದಕ್ಹೋಗಿ। ತಲೆಸಿಕ್ಕಿ ತೊಳಲುವ ತೆರದಿ। ಕುಲವೃಕ್ಷ ಕೊನೆಗಿದ್ದ ಫಲದಾಸೆಗೆ ಮಾಯಾ। ಬಲೆಯೊಳು ಬಿದ್ದೆನೊ ಭರದಿ।।2।। ನರನಾದ ಕುರಿ ನಾನು ಪೊರೆಯುವ ಧೊರೆ ನೀನು। ದುರಿತವ ತರಿದು ಕಾಪಾಡೋ। ವರದ ಶ್ರೀ ಹನುಮೇಶವಿಠಲನೆ ನಿನಗೆ ನಾ ಶರಣಾದೆ ಕರವ ಬಿಡಬ್ಯಾಡೊ।।3।।

**ಸಾಕು ನರಹರಿ ಭವದ ಬವಣೆಂ** **ರಾಗ: ಹಿಂದೋಳ**

ಸಾಕು ನರಹರಿ ಭವದ ಬವಣೆಂ। ದ್ಯಾಕೆ ಬಳಲಿಸುವೆ ಹರಿಹರಿ। ಶ್ರೀಕಮಲಾಪತಿ ಶರಣ ಜನರೊಳ। ಗ್ಹಾಕಿ ಪೊರೆಯೆನ್ನ ಹರಿಹರಿ।। ಪ ।। ಧೊರೆಯ ನೀನಿರಲನ್ಯರಿಗೆ ಬಾಯಿ। ತೆರೆಯಲ್ಯಾಕೆನ್ನ ಹರಿಹರಿ। ಪರಮ ಆಪ್ತ ನೀನಿರಲು ಕಾಣದೆ। ಪರರಿಗೆ ಅಲ್ಪರಿದ್ದ ಹರಿಹರಿ।।1।। ಪುತ್ಥಳಿ ಮನೆಯಲೆ ಇರಲು। ಹಿತ್ತಾಳೆ ಬಯಸುವೆನು ಹರಿಹರಿ। ಬಿಟ್ಟು ನಿನ್ನೀಗನ್ಯ

ವಿಷಯದಿಂ। ದ್ಧುಟ್ಟುವುದೆ ಸುಖ ಹರಿಹರಿ।।2।। ಬೇಡಿದ್ವರಗಳ ಕೊಡುವೊ ಭೀ। ಮೇಶ ಕೃಷ್ಣ ನೀನಿರಲು ಹರಿಹರಿ। ನೋಡಿ ಸುಖಿಸದೆ ಬಿಟ್ಟು ಕನ್ನಡಿ। ಗೋಡೆಗಡರುವೆನು ಹರಿಹರಿ।।3।।

**ಕರುಣಿಸು ನರಹರಿಯೇ** **ರಾಗ: ರಂಜನಿ**

ಕರುಣಿಸು ನರಹರಿಯೇ ಸ್ಮರಣೆಯ। ಕರುಣಿಸು ನರಹರಿಯೇ।।ಪ।। ಕರುಣಿಸುವುದು ತವಸ್ಮರಣೆ ನಿರಂತರ। ಧರಣಿಸುರಪ್ರಿಯ ಚರಣಕೆರಗುವೆನು।।ಅ.ಪ.।। ಶರಣರ ಸುರ ತರುವೇ ಕರುಣಾ। ಶರಧೀ ಶಿರಯಧೊರೆಯೆ। ಸರಸಿಜ ಭವಮುಖರರಸನೆ ತವಪದ। ಸರಸಿಜದಲಿ ಮನ ವಿರಿಸುವಂತೆ ಜವ।।1।। ಕಂದನ ನುಡಿಕೇಳಿ ಸ್ತಂಭದಿ। ಬಂದಿಯೊ ವೇಗದಲಿ। ವಂದಿಸುವೆನು ಭವಬಂಧ ಬಿಡಿಸಿ ಮನ। ಮಂದಿರದಲಿ ತವ ಸಂದರುಶನವನು।।2।। ಚಾರುಕೃಷ್ಣ ತೀರಾಕಾರ್ಪರಾಗಾರನೆ ಸ್ಮರಿಸುವರ। ಘೋರದುರಿತ ಹರ ನಾರಸಿಂಹ ನಿ। ನ್ನಾರಾಧಕರೊಳು ಸೇರಿ ಸುಖಿಸುವಂತೆ।।3।।

**ಜಯಜಯ ಶ್ರೀ ನರಸಿಂಹ** **ರಾಗ : ಭೀಮ್ ಪಲಾಸ್ – ಆದಿತಾಳ**

ಜಯಜಯ ಶ್ರೀ ನರಸಿಂಹ ಅನಾಮಯ। ಕಾಯಾಧವ ವರದಾಯಕ ಜಯ ಭೋ।।ಪ।। ಹರವಿರಿಂಚಿ ಮುಖ ಸುರವಂದಿತ ಪದ ಧರಣೀ ರಮಣ ಕಮಲೇಶಾ ಘನ।।ಅ.ಪ.।। ತರಳ ಪ್ರಹ್ಲಾದನ। ಮೊರೆಯನು ಕೇಳಿ ನೀ। ದುರುಳ ಹಿರಣ್ಯಕನ। ಗರುವವ ಕಳೆಯಲು।। ಕರುಣದಿ ಕಂಬದಿಂದೊಡೆದು ಬಂದೊದಗಿದೆ। ಭರದಿ ಪಾಪವ ತರಿದು ಪೊರೆಯೋ ನೀಯೆಮ್ಮನು।।ಚ।।

**ಹರಿ ರೂಪ ಕಂಡು ಸುರರು** **ರಾಗ : ನಾಟ**

ಹರಿ ರೂಪ ಕಂಡು ಸುರರು ನಡಗಲು। ಧರೆಗಿರಿ ಕಂಪಿಸಿ ಪ್ರಳಯವಾಗಲು।।ಪ।। ಸಿರಿ ಆಶ್ಚರ್ಯದಿ ದೂರ ಸರಿಯಲು। ನರಹರಿ ಶಾಂತನಾದ ಪ್ರಹ್ಲಾದ ಪ್ರಾರ್ಥಿಸಲು।।ಅ.ಪ.।। ಅಂದು ಮಾಡಿದ ಪುಣ್ಯ ಹರಿಗೆ ಅರ್ಪಿತವೆಂದು। ಅವನಿಯೊಳಗೆ ರಾಘವೇಂದ್ರರಾಗಿ ಬಂದು।। ಅರಿಷ್ಟವ ಪರಿಹಾರ ಮಾಡುತಿಹರಿಂದು। ಆ ವಿಜಯ ರಾಘವನ ತೋರುತಿಹರಿಂದು।।1।। ಹಿಂಗದ ಪುಣ್ಯರಾಶಿ ಆರ್ತರಿಗೆ ನೀಡುವ। ತುಂಗಭದ್ರ ತೀರದಿ ಮನೆಮಾಡಿರುವ।। ಮಂಗಳಾಂಗ ಹರಿ ವಿಠ್ಠಲನ ಸೇವಿಸುವ। ಕಂಗಳಿಗೆ ಕಾಣದೆ ಅನುಗ್ರಹಿಸುವನು।।2।।

**ಕರಿಗಿರೀಶ ನಿನ್ನ ಬೇಡುವೆನೀಗ** **ರಾಗ : ಕಾನಡ**

ಕರಿಗಿರೀಶ ನಿನ್ನ ಬೇಡುವೆನೀಗ। ಪರಿಪಾಲಿಸೊ ಸತತ।।ಪ।। ನರಹರಿ ಭಕ್ತರ ಪೊರೆಯುವೆ ನೀನೆಂ। ದರುಹಿದರೆನಗೆ ಶ್ರೀ ಗುರುಗಳು ಇಂದು।।ಅ.ಪ.।। ನಾರಸಿಂಹ ನಿನ್ನ ಸಾರಿಭಜಿಸುವೆನು। ತೋರೊ ನಿನ್ನ ಪದವ। ಬಾರಿಬಾರಿಗೆ ಸ್ತುತಿಸಲು ಬಾಲನು। ಘೋರ ದೈತ್ಯನ ಸೀಳಿ ಪೊರೆದೆಯೊ।।1।। ಶೇಷಾಂತರ್ಗತ ನಾರಸಿಂಹ ವಿ। ಶೇಷ ಮಹಿಮೆ ತೋರೋ। ಶೇಷಶಯನ ಮಹರುದ್ರಾಂತರ್ಗತ। ಪೋಷಿಸೊ ಭಕ್ತರ ಶಾಂತರೂಪದಿ।।2।। ಲೀಲೆಯಿಂದ ಶ್ರೀಲಕುಮಿ ಹಿತದಿ। ವ್ಯಾಳ ಶಯನನಾಗಿ। ಪಾಲಿಸಬೇಕೆನ್ನನು ಸತತದಿ ಗೋ। ಪಾಲಕೃಷ್ಣ ವಿಠ್ಠಲ ನೀ ದಯದಿ।।3।।

**ರಕ್ಷಿಸೆನ್ನನು ನಿರುತ** **ರಾಗ:ತೋಡಿ, ಅಟ್ಟತಾಳ**

ರಕ್ಷಿಸೆನ್ನನು ನಿರುತ ನರಮೃಗನಾಥಾ।।ಪ।। ರಕ್ಷಿಸೆನ್ನನು ಜಗತ್ಕುಕ್ಷಿಯೆ ಕರುಣಾಕ। ಟಾಕ್ಷದಿಂದೀಕ್ಷಿಸಿ ತ್ರ್ಯಕ್ಷಾಂತರ್ಗತದೇವ।।ಅ.ಪ.।। ಪತಿತಪಾವನ ಪರ ಶತಮೋದ-ಗತಖೇದ। ಚತುರ್ವೇದ ಗಾಯತ್ರಿ ಚತುರಾನನಸೂತ್ರ-ಪ್ರತಿಪಾದ್ಯ ನತಪಾಲ ಶತಕ್ರತುಕೃತದ್ವಂಶಿ। ಪ್ರಥಮಾಂಗನುತ ಮನ್ಮಥಪಿತ ಕ್ಷಿತಿನಾಥ। ಯತಿತತಿಮಾನಸವ್ರತ ತಿಜಭಾಸ್ಕರ।ಸತತ ನಿನ್ನಯ ಪಾದವ ಸದ್ಭಕುತಿಲಿ। ತುತಿಪ ದಾಸರ ಸಂಗವಗರೆದು ಭವ-। ವ್ಯಥೆಯ ಬಿಡಿಸಿ ಮಾಧವ ನೀನೊಲಿದತಿ- ಹಿತದಿಂದುಣಿಸು ನಿನ್ನ ಕಥೆಸುಧೆಸಾರವ।।1।। ಅರಿದರಗದಾಪದ್ಮ ಧರಚತುಷ್ಟಯಕರ। ಶರಚರ ಗಿರಿಧೃತ ಧರಣಿತಸ್ಕರಹರ। ನರಗಾತ್ರ ಹರಿವಕ್ತ್ರ ಸುರಪಾನುಜ ವಟು। ಪರಶುಪಾಣಿಯೆ ವಾನರನರಪಾಲಕ। ವಿರಹಿತಾಂಬರ ಕಲ್ಕಿ

ಶರಣಜನರು ಭಕ್ತಿ ಪರವಶದಲಿ ಕೂಗಿ।। ಕರೆಯಲಾಕ್ಷಣ ಎಂದು। ಭರದಿ ಬಂದು। ಪೊರೆವ ಪ್ರಭು ನೀನೆಂದು। ಬುಧರು ಪೇಳ್ವ। ವರವಾಕ್ಯಮನಕೆ ತಂದು। ಪ್ರಾರ್ಥಿಪೆ ನಿನ್ನ ಚರಿತೆ ಪಾಡುವ ಸುಖಿಗರೆಯೊ ಪಾಂಡವಬಂಧು।।2।। ಸಿಂಧೂರವರದಾತ ಸಿಂಧುಶಯನ ಶ್ಯಾಮ। ಸುಂದರವಿಠಲ ಇಂದೀರಾತ್ಮಕ ತ್ರಯ-। ಮಂದಿರ ಕಾರ್ಪರಮಂದಿರ ತರುರಾಜ- ಮಂದಿರ ದ್ವಿಜಮಧ್ಯಮಂದೀರಾತ್ಮಜ ಹೃ। ನ್ಮಂದಿರ ಸದ್ಭಕ್ತಮಂದಾರಭೂರುಹ। ಮಂದಜನೋದ್ಧಾರ ಮಂದಾಕಿನಿ ಪಿತ।। ನಂದಗೋಪನ ಕುಮಾರ ಗೋಕುಲವ್ರಜ। ವೃಂದಾವನ ವಿಹಾರ ಕುಚ್ಚಿತ ಖಳ-। ವೃಂದರ-ಕಾನನಕುಠಾರಾ ವಂದಿಪೆ ಎನ್ನ। ಕುಂದುಗಳೆಣಿಸದೆ ತಂದೆ ಪಿಡಿಯೊ ಕರ।।

### ಕರುಣದಿಂದ ಕರವ ಪಿಡಿಯೊ — ರಾಗ : ಮಲಯಮಾರುತ

ಕರುಣದಿಂದ ಕರವ ಪಿಡಿಯೊ ತೊರವಿ ನರಹರೆ ।।ಪ।। ಆಹಾ ತೊರವಿ ನರಹರೆ। ಶರಣಾಗತರಮಲ ತೋರುವ ಕರುಣ ವಾರಿಧೆ ।।ಅ.ಪ.।। ಸ್ತಂಭಜಾತ ನಂಬಿ ನಿನ್ನ ಅಂಬುಜಾತನೆ। ಬಿಂಬದಂತೆ ಪಾಲಿಸೆನ್ನ ಸಾಂಬವಿನುತನೆ।।1।। ಛಟಿಛಟೆಂದು ಒಡೆದು ಕಂಬ ಪುಟಿದು ಸಭೆಯೊಳು। ಕಟಿಯ ತಟದೊಳಿಟ್ಟು ರಿಪುವ ಒಡಲ ಬಗೆದೆಯೊ।।2।। ಇಂದಿರೇಶ ಎನ್ನ ಹೃದಯ ಮಂದಿರದೊಳು। ಬಂದು ತೋರೆ ಮುಖವ ನಿನ್ನ ವಂದಿಸುವೆನು।।3।।

### ಉಪಕೃತಿ ಎನ್ನದಲ್ಲ ನರಹರಿ — ರಾಗ : ಭಾಗೇಶ್ರೀ

ಉಪಕೃತಿ ಎನ್ನದಲ್ಲ ನರಹರಿ। ಕೃಪೆ ಕಾರಣವಿದಕೆಲ್ಲ ।। ಪ।। ಅಪರಾಧಗಳನು ಮನ್ನಿಸಿ ಪೊರೆಯುವ । ವಿಮಲ ಕೃಪಾನಿಧಿ ಹರಿಯಲ್ಲದೆಲೆ ।। ಅ.ಪ ।। ಜೀವ ಪರಾಧೀನ ಸ್ವತಂತ್ರ ರಾ। ಜೀವ ದಳನಯನ । ಸರ್ವೋತ್ತಮ ಪ್ರಭು ಕರಿಗಿರೀಶನೆ ಜಗ। ಜೀವನ ಪಾವನ ಪ್ರೇರಕನಲ್ಲದೆ।। ಚ ।।

### ನಾರಸಿಂಹ ಬೇಡಿಕೊಂಬೆ — ರಾಗ: ಕಾಂಭೋದಿ

ನಾರಸಿಂಹ ಬೇಡಿಕೊಂಬೆ। ಪೊರೆಯೋ ಶ್ರೀಹರಿ-ಕರುಣಾಳು ಪರಮ ಪುರುಷ ಪೊರೆದಸ್ವಾಮಿಯೇ।।ಪ।। ಧರೆಯೊಳು ಬಲಪುರದಲ್ಲಿ ಪೊರೆದೆ ಭಕ್ತರಾ.... ಕರುಣಾಳು। ಪರಮ ಪುರುಷ ಪೊರೆದಸ್ವಾಮಿಯೇ।।1।। ಕಂದನಾ ನುಡಿಕೇಳಿ ಬಂದೇ ಕಂಭದಿಂದಲಿ ಅಂದುಬಾಲನು ಸ್ತುತಿಯಮಾಡಲು। ಬಂದಾ ನರಹರಿ।।2।। ಒಡೆದು ಕಂಬವಾ। ಒಡನೇ ಬಂದೆ ಒಡೆಯನರಹರಿ.... ಕಡುರೋಷದಿಂದ ಖಳನ। ಸಿಡಿಲಿನಂದದಿ।।3।। ದುರುಳ ಖಳನು ಕರುಳಬಗೆದು। ಕೊರಳೊಳ್ ಧರಿಸಿದೆ... ತರುಣೀಗೆ ವರವನಿತ್ತು ಪೊರೆದಸ್ವಾಮಿಯೇ।।4।।

### ನರಸಿಂಹ ಮಂತ್ರವೊಂದಿರಲು ಸಾಕು — ರಾಗ: ಕಾನಡ–ಝಂಪೆತಾಳ

ನರಸಿಂಹ ಮಂತ್ರವೊಂದಿರಲು ಸಾಕು। ದುರಿತ ಕೋಟಿಯ ತರಿದು ಭಾಗ್ಯವನು ಕೊಡುವ।।ಪ।। ಶಿಶುವಾದ ಪ್ರಹ್ಲಾದನ ಬಾಧೆ ಬಿಡಿಸಿದ ಮಂತ್ರ। ಅಸುರ ಕುಲದವರಿಗೆ ಶತ್ರುಮಂತ್ರ। ವಸುಧೆಯೊಳು ಪಾತಕಿಗಳಘವ ಹೀರುವ ಮಂತ್ರ। ಪಶುಪತಿಗೆ ಪ್ರಿಯವಾದ ದಿವ್ಯಮಂತ್ರ।।1।। ದಿಟ್ಟ ಧ್ರುವರಾಯನಿಗೆ ಪಟ್ಟಕಟ್ಟಿದ ಮಂತ್ರ। ಶಿಷ್ಟ ವಿಭೀಷಣನ ಪೊರೆದ ಮಂತ್ರ। ಕಟ್ಟ ಕಡೆಯಲಿ ಅಜಾಮಿಳನ ಸಲಹಿದ ಮಂತ್ರ। ಮುಟ್ಟಿ ಭಜಿಸಿದವರಿಗೆ ಮೋಕ್ಷ ಮಂತ್ರ।।2।। ಹಿಂಡು ಭೂತವ ಕಡಿದು ತುಂಡು ಮಾಡುವ ಮಂತ್ರ। ಕೊಂಡಾಡೊ ಲೋಕಕೆ ಪ್ರಚಂಡ ಮಂತ್ರ। ಗಂಡುಗಲಿ ಕದನ ಉದ್ದಂಡ ವಿಕ್ರಮ ಮಂತ್ರ। ಪುಂಡರೀಕಾಕ್ಷ ಪುರಂದರ ವಿಠಲಮಂತ್ರ।।3।।

### ಸಿರಿರಮಣ ತವ ಚರಣ — ರಾಗ:ಮೋಹನ(ಭೂಪ)–ಝಂಪೆತಾಳ

ಸಿರಿರಮಣ ತವ ಚರಣ। ದೊರಕುವುದು ಹ್ಯಾಗಿನ್ನು ಪರಮ ಪಾಪಿಷ್ಠನಾನು।।ಪ।। ನರಹರಿಯ ನಿನ್ನ ನಾಮ। ಸ್ಮರಣೆ ಮಾಡದೆ ವ್ಯರ್ಥ। ನರಕಕ್ಕೆ ಗುರಿಯಾದೆನೊ ಇನ್ನು।।ಅ.ಪ।। ಕೆರೆಭಾವಿ ದೇವ ಮಂದಿರಗಳನು ಕೆಡಿಸಿ ದಿವ್ಯ ಹಿರಿದಾಗಿ ಮನೆಗಟ್ಟಿದೆ। ನೆರೆ ನಡೆವ ಮಾರ್ಗದೊಳು ಅರವಟ್ಟಿಗೆಗಳನು ಥರಥರದಿ ಬಿಚ್ಚಿ ತೆಗೆದೆ। ಪರಮ ಸಂಭ್ರಮದಿಂದ ಅರಳಿಯ

ಮರ ಕಡಿಸಿ ಕೊರೆಸಿ ಬಾಗಿಲ ಮಾಡಿದೆ। ಪವನ ಮಂದಿರವ ಮುಗಿಸಿ ಹರುಷ ಚಿತ್ರವ ಬರೆ। ಪರಿಪರಿಯ ಸೌಖ್ಯ ಸುರಿದೆ। ಮೆರೆದೇ।।1।। ಹೊಸಮನೆಯ ಕಂಡು ಬಲು ಹಸಿದು ಭೂಸುರರು ಬರೆ ಕೊಸರಿ ಹಾಕುತದಬ್ಬುತ। ಶಶಿಮುಖಿಯೆಬಾರೆಂದು ಅಸವಸದಿ ಬಣ್ಣಿಸುತ ಹಸನಾಗಿ ಅವಳೊಲಿಸುತ। ದಶಮಿ ಏಕಾದಶಿ ದ್ವಾದಶಿ ದಿನದಲಿ ಅಶನವೆರಡ್ಹೊತ್ತುಣ್ಣುತ। ಘಸಘಸನೆ ತಾಂಬೂಲ ಪಶುವಿನಂದದಿಮೆದ್ದು ಕುಸುಮಗಂಧಿಯರುಮಿಸುತ। ನಗುತ।।2।। ಸ್ನಾನ ಸಂಧ್ಯಾನ ಅತಿ ಮೌನ ಗಾಯತ್ರಿಜಪ ಭಾನುಗರ್ಘ್ಯವನು ಕೊಡದೆ। ದೀನತ್ವದಲಿ ದಾನ ಧರ್ಮವನು ಮಾಡದೆ ಶ್ವಾನನಂದದಿ ಚರಿಸಿದೆ। ಶ್ರೀನಿವಾಸನೆ ನಿನ್ನ ಅನುಪೂರ್ವಕ ಸೇವೆ ನಾನೊಂದು ಕ್ಷಣ ಮಾಡದೇ। ಬ್ಯಾಗೆ ಬಂದಂತಾಗೆ ಹೀನ ವಿಧವೆಯ ಕೈಯ ನಾನಾ ವಿಧಾನ್ಯತಿಂದೆ। ನೊಂದೆ।।3।। ಸಾಕಲ್ಯದಿಂದ ಸಾಲಿಗ್ರಾಮಕಭಿಷೇಕ ವಾಕಳ್ಹಾಲಲಿ ಮಾಡದೆ। ನಾಲ್ಕೆಂಟು ನಾಯಿಗಳ ಸಾಕಿ ಮನೆಯೊಳು ಬದುಕ ಬೇಕೆಂದು ಹಾಲು ಹೊಯ್ದೆ। ಕಾಕು ಬುದ್ಧಿಗಳಿಂದ ಗುಡಿಗುಡಿ ನಶ್ಯಪುಡಿ ಹಾಕಿ ಭಂಗಿಯ ಸೇದಿದೇ। ಲೋಕ-ನಿಂದಕನಾಗಿ ಪಾಪಿ ಕೈ ಹಚ್ಚಿ ಅನೇಕ ಜೂಜುಗಳಾಡಿದೆ। ಬಿಡದೆ ।।4।। ಬಾದರಾಯಣ ಕೃತ ಭಾಗವತ ಕೇಳುವಲ್ಲಿ ಆದರವು ಪುಟ್ಟಲಿಲ್ಲ। ವಾದಿಗಳ ಮತವಳಿದ ಮಧ್ವಸಿದ್ಧಾಂತದ ಹಾದಿಗೆ ಹೋಗಲಿಲ್ಲ। ಶೋಧಿಸಿದ ಚಿನ್ನಕ್ಕೆ ಸಮರಾದ ವೈಷ್ಣವರ ಪಾದಕ್ಕೆ ಬೀಳಲಿಲ್ಲ। ವೇದಬಾಹ್ಯರಿಗೆರಗಿ ಅಪಸವ್ಯ ಮನನಾಗಿ ಓದಿಕೊಂಡೆನೊ ಇದೆಲ್ಲ।ಸಲ್ಲ।।5।। ಉತ್ತಮ ಬ್ರಾಹ್ಮಣರ ವೃತ್ತಿಯನ ಕೆಡಿಸಿ ಬ್ರಹ್ಮಹತ್ಯಗಾರನು ಎನಿಸಿದೆ। ಮತ್ತೆ ಮುಂಜಿ ಮದುವೆ ಸಮಯಕೆ ನಾ ಹೋಗಿ ಸತ್ತ ಸುದ್ದಿಯ ಹೇಳಿದೆ। ವಿತ್ತವಿದ್ದವರ ಬೆನ್ಹತ್ತಿ ದೂತರಕಳುಹಿ ಕುತ್ತಿಗೆಯನು ಕೊಯಿಸಿದೆ। ಹತ್ತು ಜನರೆನ್ಹೊಣಕೆ ನಿತ್ಯ ಕಲ್ಹೊಡೆಯುತಿರೆ ಮೃತ್ಯುದೇವರೆ ಎನಿಸಿದೆ। ಬಿಡದೆ।।6।। ಕ್ಷಿತಿಯೊಳಗೆ ಇನ್ನಾರು ಹಿತವ ಬಯಸುವರೆನಗೆ ಗತಿಯೇನು ಪೇಳೋ ಕೊನೆಗೆ। ಸತತ ತಪ ಧ್ಯಾನದಲಿ ನಿರತನಾಗಿ ಇರುವ ಸನ್ಮತಿಯ ಪಾಲಿಸಯ್ಯ ಎನಗೆ। ಪತಿತ ಪಾವನನೆಂಬ ಬಿರುದು ಅವನಿಯ ಮೇಲೆ ಶ್ರುತಿ ಸಾರುತಿದೆಯೊ ಹೀಗೆ। ಶಿತಿಕಂಠನುತ ಜಗನ್ನಾಥವಿಠ್ಠಲ ನಿನಗೆ ನುತಿಸಿ ಮೊರೆಹೊಕ್ಕೆ ಹರಿಯೇ। ಧೊರೆಯೇ।।7।।

### ಮರೆತು ನಿಂತೆನೊ ಹರಿಯೆ — ರಾಗ : ಹಂಸಾನಂದಿ

ಮರೆತು ನಿಂತೆನೊ ಹರಿಯೆ ಮನುಜ ಜನುಮದಲಿ। ನರಹರಿಯೆ ನೀ ಕಾಯದಿರೆ ಭವ ಗೆಲುವುದೇ ಗೋ।।ಪ।। ಮುದದಿ ಮಾಘಾದಿ ಸ್ನಾನವೆಲ್ಲವ ಮರೆತೆ। ಸದಮಲ ಗುರುಚರಣಕೆ ಎರಗುವುದ ಮರೆತೆ।। ಸದಾ ಸತಿಸುತರೆ ಸರ್ವಸ್ವವೆನುತಲಿ। ಪದುಮನಾಭನೆ ನಿನ್ನ ಮರೆತೆನೋ ಎನ್ನ ಕಾಯೋ।।1।। ಭಕ್ತಿಮಾರ್ಗವ ಬಿಟ್ಟು ಯುಕ್ತಿಯಲಿ ಧನಗಳಿಸಿ। ಶಕ್ತಿ ಇರದಿದ್ದರೂ ಯುವಕನಂತೆ।। ಮುಕ್ತಿದಾಯಕನಾದ ನರಹರಿಯೆ ನಿನ್ನ ನಾಮ। ವ್ಯಕ್ತ ಮಾಡುತಲೊಮ್ಮೆ ಭಜಿಸದೆಲೆ ಮರೆತೆ।।2।। ಸಾಧನವ ಕಾಣದಿಹ ಜನುಮವೇಕಿತ್ತೆನಗೆ। ಮಾಧವನೆ ನೀನೆಗತಿ ಎನ್ನದೇನಿಲ್ಲ।। ಸಾಧು ಜನಪಾಲ ಗುರುಶಾಮಸುಂದರ ಎನ್ನ। ಸಾಧಕರ ಜೊತೆಗಿಟ್ಟು ಜನುಮವನು ಕೊಡು ಮುಂದೆ।।3।।

### ಕರುಣಿಸು ಬೇಗನೆ — ರಾಗ : ತೋಡಿ

ಕರುಣಿಸು ಬೇಗನೆ ಕರಿವರದ ಹರಿ।।ಪ।। ತೋಯಜನಯನಕಾಯಜಪಿತ ದೈ। ತ್ಯೇಯ ಹರಣ ಸ್ವಶ್ರೇಯಸಕರ ಹರಿ।।1।। ಶ್ರೀಯುತ ವಿಧೇಯ ನೃಹರೇನಾ-। ರಾಯಣಮಾಧವ ಯದುಕುಲ ನಾಯಕ।।2।। ಅಂಡಜಗಮನ ಅಖಂಡಲನುತ ಭೂ-। ಮಂಡಲ ಪಾಲಕ ತಾಂಡವ ಕೃಷ್ಣಾ।।3।। ನಗಧರವರಪನ್ನಗ ತಲ್ಪಕ ನರ-। ಮೃಗರೂಪಾನಘ ತ್ರಿಗುಣಾತ್ಮಕ ಹರಿ।।4।। ಗೋಪತನಯ ಸಂಜೀವಿತ ತ್ರಿಜಗ-। ದ್ವ್ಯಾಪಕ ಘನ ಹೆನ್ನೆಪುರದ ಶ್ರೀಪತಿ।।5।।

### ಗಿರಿಯನೇರುವ ಬಲವ — ರಾಗ: ಹಿಂದೋಳ–ಛಾಪುತಾಳ

ಗಿರಿಯನೇರುವ ಬಲವ। ಕೊಡೊ ಕರಿಗಿರಿ ನರಸಿಂಹ। ಭವ ಪಾತಾಳ- ದಿಂ ಮೇಲೆತ್ತು। ಮೇಲುಕೋಟೆಯ ನರಸಿಂಹ।। ಭಕುತಿಯ ಬೇರನು ಭದ್ರಪಡಿಸೋ। ಭದ್ರಾವತಿಯ ನರಸಿಂಹಾ। ಭಕುತರ ಸಾಲಲಿ ಸ್ಥಾನವ ನೀಡೋ ಬಾದಾಮಿಯ ಸ್ಥಾನದ ನರಸಿಂಹಾ।। ನಿನ್ನ ನಾಮದಲೆ ಊರೂರು ಸುತ್ತಿಸೋ। ಹೇಮಾವತಿಯ ಗೊರೂರು ನರಸಿಂಹ। ಸಂಕಟಹರಿಸಿ ಕಂಟಕ ಬೀಳಿಸಿ। ಮನೆಮನೆಗೆ ನುಗ್ಗೋ। ನುಗ್ಗೇಹಳ್ಳಿಯ ನರಸಿಂಹಾ।। ಮೂಕನ ಬಾಯೊಳು ಭೋಗದ ನುಡಿಯ।

ನೀಡೋ ಮೂಕನ ಹಳ್ಳಿಯ ನರಸಿಂಹಾ। ನಾಸ್ತಿಕರೆಂಬೋ ಅಸುರರ ಉಗು- ರೊಳು ಬಗೆದು। ಮನೆಗೊಂದು ಪ್ರಹ್ಲಾದ ಶಿಶುವ ಕರುಣಿಸೋ। ಮಳಖೇಡದ ನರಸಿಂಹ। ನಿನ್ನ ಭಜಿಸುವ ಶಕ್ತಿಯ ನೀಡೋ। ಕನಕನ ಕೀರ್ತನೆ ಗೊಲಿದ। ಕಾಗಿನೆಲೆಯ ನರಸಿಂಹಾ।

**ವರವನು ಕರುಣಿಸು** **ರಾಗ: ನಾದನಾಮಕ್ರಿಯ-ಛಾಪುತಾಳ**

ವರವನು ಕರುಣಿಸು ನರಸಿಂಹ ದೇವನೇ। ಪ್ರಹ್ಲಾದ ಪ್ರಿಯನೇ। ಆನಂದದಾಯಕನೇ।।ಪ।। ಪಂಕಜ ನಾಭನೇ। ಪರಮ ಪವಿತ್ರನೇ। ಲೋಕೋದ್ಧಾರಕನೇ। ಮಹಾಮಹಿಮನೇ। ಭಕ್ತ ವತ್ಸಲನೇ। ಮುಕ್ತಿಯ ನೀಡುವನೇ ।1।



**ಶರಣು ಶರಣು ಶರಣ್ಯ ವಂದಿತ** **ರಾಗ: ರೇವತಿ**

ಶರಣು ಶರಣು ಶರಣ್ಯ ವಂದಿತ ಶಂಖಚಕ್ರ ಗಧಾಧರ ।।ಪ।। ಶರಣು ಸರ್ವೇಶ್ವರಗೇ ಅಹೋಬಲಗಿರಿಯ ನೃಸಿಂಹಮೂರ್ತಿಗೆ ।।ಅ।। ಶೀಲದಲಿ ಶಿಶು ನಿಮ್ಮ ಕರೆಯಲು। ಕಾಲಿಲೊದ್ದತಿ ಖಳನನು। ಲೀಲೆಯಿಂದಲಿ ಚಿಟಿಲು ಭುಗಿಭುಗಿಲೇಳೆ ಉಕ್ಕಿನ ಕಂಭದಿ ।।1।। ತಾಳದಿರ್ಗಡಿ ತೋಳಿನಿಂದೆದೆ। ಸೀಳಿ ಹೊಟ್ಟೆಯ ಕರುಳನು। ಮಾಲೆಯನು ಕೊರಳೊಳಗೆ ಧರಿಸಿದ। ಜ್ವಾಲ ನರಸಿಂಹಮೂರ್ತಿಗೆ। ಕರಾಳ ನರಸಿಂಹಮೂರ್ತಿಗೆ ।।2।। ಮೋರೆ ಕೆಂಗೆರೆ ಕಣ್ಣು ಕಿವಿ। ತೆರೆ ಬಾಯಿ ಮೂಗಿನ ಶ್ವಾಸದಿ। ಮೇರುವಿಗೆ ಮಿಗಿಲೆನಿಸಿ ಮೊರೆಯುತ। ತೋರ ಕಿಡಿಗಳ ಸೂಸುತ।।3।।

**ಶರಣು ನೀನೆಲೊ** **ರಾಗ: ಸುನಾದವಿನೋದಿನಿ**

ಶರಣು ನೀನೆಲೊ ನರಹರಿ ।।ಪ।। ಶರಣು ನೀನೆಲೊ ನರಹರಿ ಚರಣ। ಶರಣು ನೀನಿರ್ದು ಮರವೆಗೂಡಿ। ಜರಾಮರಣ ಪಡೆವರೇನೋ ।।ಅ.ಪ।। ಯೋಗಮಾರ್ಗವಹಿಸಿ ನಿಜವಾದ। ಭಾಗವತರ ಒಲಿಸಿ। ರಾಗರಹಿತನಾಗಿ ನೀಗದ ಸಂಸಾರ। ಭೋಗ ತ್ಯಜಿಸಿ ಭವರೋಗ ಗೆಲಿಯುವಂಥ।। 1 ।। ಮಿಥ್ಯೆಮಾಯ ನೀಗಿ ಸತತ ನೀ। ಸತ್ಯ ಜನಕೆಬಾಗಿ। ಸತ್ಯಸಂಧನಾಗಿ ಚಿತ್ತಜ ತಾತನ। ಭಕ್ತನೆನಿಸಿ ಯಮ ಮೃತ್ಯುಗೆಲಿಯುವಂಥ।। 2 ।। ಪಾಮರತ್ವ ತೊರೆದು ನಿಜವಾದ। ನೇಮ ನಿತ್ಯಪಿಡಿದು। ಭೂಮಿಗಧಿಕ ಮಮಸ್ವಾಮಿ ಶ್ರೀರಾಮನ । ನಾಮ ಭಜಿಸಿ ಮುಕ್ತಿ ಸಾಮ್ರಾಜ್ಯ ಪಡೆಯೆಲೊ।। 3 ।।

**ಜ್ವರಹರಾಹ್ವಯನೆ ಶ್ರೀ ನಾರಸಿಂಹ** **ರಾಗ: ಕೀರವಾಣಿ**

ಜ್ವರಹರಾಹ್ವಯನೆ ಶ್ರೀ ನಾರಸಿಂಹ । ಘೋರನಾ ಭಯ ಕಳೆದುಆರೋಗ್ಯ- ವೀಯೋ ।। ಪ ।। ರೋಗಹರ ನೀನೆಂದುಆಗಮವು ಪೇಳುವುದು । ಯೋಗ ಭೋಗದರೂಪಿಭೋಗಿ ಗುರು ಬಿಂಬಾ। ವಾಗೀಶ ಮುನಿವಂದ್ಯ- ಭೋಗಿಶಯನನೆದೇವ। ರೋಗ ಹರಿಸುವುದರಿದೆ ರೋಗಾರ್ತ ಶಿಶುಗೇ।।1।। ನಾಗಗಿರಿಯಲಿ ವಾಸನಾಗಭೂಷಣ ಸೇವ್ಯ । ನಾಗಾರಿ ವಾಹನನೆಯೋಗಿ ವಂದ್ಯಾ। ಶ್ರೀಘ್ರದಲಿ ಶಿಶುವ ನಿರೋಗಿಯೆನಿಸುವುದಯ್ಯ। ಬಾಗಿ ಬೇಡುವೆ ಹರಿಯೆಭಾಗವತ ಪ್ರಿಯ ।।2।। ಈ ವಸುಮತಿಯ ಸಕಲಜೀವರಂತ- ರ್ಯಾಮಿ। ದೇವ ನರಹರಿ ಜ್ವರ ಹರಾಹ್ವಯನು ಎನಿಸೀ । ಕಾವುತಿರೆ ಭಯವೇನುತೀವ್ರ ಪಾಲಿಪುದಿವನ । ಗೋವ ಪಾಲಿಪ ಗುರು ಗೋವಿಂದ ವಿಠಲ ।। 3 ।।

**ರುದ್ರಾಂತರ್ಗತ ನಾರಸಿಂಹ ಪಾಹಿ** **ರಾಗ: ಪೂರ್ವಿಕಲ್ಯಾಣಿ**

ರುದ್ರಾಂತರ್ಗತ ನಾರಸಿಂಹ ಪಾಹಿ ಭದ್ರ ಮೂರುತಿ ನಿರ್ಗತಾಹ್ವ।।ಪ।। ಹೃದ್ರೋಗ ಕಳೆದು ಜ್ಞಾನಾರ್ದ್ರಸ್ವಾಂತನ ಮಾಡುಪದ್ರ ಸಾಮಗಘ ಸಮುದ್ರ ದಾಟಿಸೊ ಬೇಗ ।। ಅ.ಪ.।। ಏಸೇಸು ಜನ್ಮ ಗಳಲ್ಲಿ ನಿನ್ನ ದಾಸನೆಂದು ಎನ್ನಬಲ್ಲ। ಈಶ ನೀನೆಂಬುದು ಲೇಷವರಿಯೆ ದೋಷ। ನಾಶನ ಪ್ರಭುವೆ ವಾರಾಶಿಜೆವಲ್ಲಭ। ವಾಸವಾನುಜ ವನಧಿಶಯನ ಮಹೇಶ ವಂದಿತ ಹೇ। ಕರುಣಾ ಸಮುದ್ರ ಕರಾಲವದನನೆ। ನೀ ಸಲಹದಿರೆ ಕಾಣೆ ಕಾವರ।।1।। ಹೇಮ ಕಶ್ಯಪು ತನ್ನ ಸುತನ ಬಾಧಿಸೆ। ಶ್ರೀಮನೋಹರ ಅನಾಥನ। ವ್ಯೋಮ ಪರ್ವತಾಂಬುಧಿಧಾಮದೊಳು- ಳುಹಿದ। ಭೌಮಸನ್ಮುನಿ ಗಣಸ್ತೋಮ ವಂದಿತ ಪಾದ। ಸಾಮಜೇಂದ್ರನ ಸರಸಿಯೊಳು। ಸುತ್ರಾಮನಂದನನಾ ರಣದಿ ಕುರು। ಭೂಮಿಪತಿ ಸಭೆಯೊಳಗೆ ದ್ರೌಪದಿಯ। ಆ

ಮಹಾತ್ಮರ ಕಾಯ್ದ ಕರುಣಿ ।।2।। ವೇದಗಮ್ಯ ವೇದವ್ಯಾಸ ಕಲ್ಕಿಯಾದವೇಶ ಮಹಿದಾಸ। ಶ್ರೀದ ಶ್ರೀಶ ಅನ್ನದ ವಿಶ್ವಧನ್ವಂತ್ರಿ। ಮೇಧಾವಿಪತಿಯೇ- ವಮಾದಿ ರೂಪಕ ವಿಷ್ಣು। ಕಾದುಕೋ ನಿನ್ನವರ ಮನದ ವಿ। ಷಾದ ರೋಗಂಗಳನಳಿದು ಮಹದಾದಿದೇವ ಜಗನ್ನಾಥವಿಠಲ । ಆದರದಿ ಪ್ರಹ್ಲಾದ ವರದ ।।3।।

**ನಾರಸಿಂಹ ಶ್ರೀ ನಾರಸಿಂಹ** **ರಾಗ: ದರ್ಬಾರ್**

ನಾರಸಿಂಹ ಶ್ರೀ ನಾರಸಿಂಹ। ಪಾರುಗಾಣಿಸಿ ದುರಿತೌಘ ಹರಿಸಿ ಕಾಯೋ।।ಪ।। ನರಹರಿ ಜ್ವರ ಹರ ಘೋರ ವ್ಯಾಧಿಯ। ಪರಿಹಾರ ಗೈಸಿ ಪರಿಪಾಲಿಸ ಬೇಕಯ್ಯಾ।।ಅ.ಪ.।। ಘುಡುಘುಡಿಸುತ ಪಲ್ಕಡಿದು ಚೆಂಡಾಡುತ। ಮೃಡನೆ ಪರನೆ ಎಂದು ನುಡಿದ ಕಶಿಪುವಿನ। ಒಡನೆ ಕಂಬದಿ ಬಂದು ಒಡಲ ಬಗೆದು ನಿನ್ನ। ದೃಢ ಭಕುತಗೆ ಬಂದೆಡರ ಬಿಡಿಸಿದೆ।।1।। ತುಷ್ಟಿ ಪಡಿಸೊ ಪರಮೇಷ್ಠಿಯ ಪಿತ ನಿನ್ನ। ದೃಷ್ಟಿ ಯಿಂದ ಅನಿಷ್ಟ ನಿವಾರಣ। ಅಷ್ಟ ಕರ್ತೃತ್ವದ ಪ್ರಭೋ ಕಷ್ಟ ಹರಿಭಕ್ತ-। ರಿಷ್ಟ ಪಾಲಿಪ ಸರ್ವಸೃಷ್ಟಿಗೊಡೆಯ ದೇವ।।2।। ಸಂಕಟ ಬಿಡಿಸೊ ಭವಸಂಕಟದಿಂದ ಶ್ರೀ। ವೇಂಕಟೇಶಾತ್ಮ ಕ ಭೀಕರ ರೂಪ। ಶಂಕರಾಂತರ್ಗತ ಸಂಕರುಷಣ ಮೂರ್ತೇ। ಮಂಕುಹರಿಸಿ ಪಾದ ಪಂಕಜ ತೋರಯ್ಯ।।

**ರುದ್ರಾಂತರ್ಗತ ನಾರಸಿಂಹ ರೋಗ** **ರಾಗ: ವಿಜಯನಾಗರಿ**

ರುದ್ರಾಂತರ್ಗತ ನಾರಸಿಂಹ ರೋಗ ನಿವಾರಣ। ಭದ್ರವಾಗಲಿ ಇವಗೆ ಇವನಪತ್ನಿ। ಆರ್ದ್ರಳಾಗಿ ಚಾಲ್ವರಿದು ವಂದಿಪಳು ಸ-। ಮುದ್ರಶಾಯಿ ಇವಳ ಮಂಗಳಸೂತ್ರ। ನಿದ್ರೆಯೊಳಗಾಗಲಿ ಸ್ಥಿರವಾಗಿರಲಿ ಉ-। ಪದ್ರಗಳು ಬಂದರೂ ಪರಿಹರಿಸು। ಆದ್ರಿಯನ್ನೇ ಧರಿಸಿ ಗೋಕುಲ ಕಾಯ್ದ ಕರುಣಾ ಸ-।ಮುದ್ರ ಆಪತ್ಕಾಲ ಬಾಂಧವನೆ । ಕ್ಷುದ್ರ ದೇವತೆಗಳಿಗೆ ಶಕ್ತಿ ಈ ಪರಿಯುಂಟೆ। ಛಿದ್ರ ಸಾಸಿರವಿರೆ ಕ್ಷಮಿಸಬೇಕು। ಮುದ್ರೆ ಧರರ ಪಾಲ ವಿಜಯ ವಿಠಲನೆ ದಾ-। ರಿದ್ರ್ಯ ಭಂಜನ ಎನಗೆ ಇದು ಮಾತ್ರ ಕೊಡೊ।।

**ಹರಿದಾಸರಿಗಿನ್ನು ಸರಿಯುಂಟೆ** **ರಾಗ: ಸಾವೇರಿ**

ಹರಿದಾಸರಿಗಿನ್ನು ಸರಿಯುಂಟೆ ನರ। ಹರಿಯ ನಂಬಿದವರಿಗೆ ಕೇಡುಂಟೆ ಮನುಜಾ।।ಪ।। ಮಾರಿಯ ಕೈಯಲಿ ನೀರ ಹೊರಿಸುವರು। ಘೋರ ಮಸಣಿಯಿಂದ ಕಸಬಳಿಸುವರು।। ಕ್ರೂರ ಮೃತ್ಯುವಿನ ಕೈಲಿ ಭತ್ತ ಕುಟ್ಟಿಸುವರು। ಜವನ ಕೈಯಲಿ ಜಂಗುಳಿ ಕಾಯಿಸುವರು।।1।। ಬೊಮ್ಮ ಬೀರಬೇತಾಳ ಜಟ್ಟಿಂಗಳೆಲ್ಲ। ಕರ್ಮದ ಕಡಲೊಳು ಮುಳುಗಿರಲು।। ಒಮ್ಮೆ ಹರಿದಾಸರ ಪಾದ ಸೋಕಲು ಬೇಗ। ಕರ್ಮದ ಕಡಲಿಂದ ಕಡೆಹಾಯಿಸುವರು।।2।। ಜಕ್ಕಂಣಿ ಜಲದೇವರು ಮೊದಲಾದ। ಭಿಕಾರಿ ದೈವವ ಪೂಜಿಸಲು।। ಲೋಕನಾಯಕ ಸಿರಿಪುರಂದರ ವಿಠಲನ। ಸಾಕಾರವಾದಂಥ ಪರಮಭಾಗವತರು।।3।।

**ಬಯಸಿ ಕರೆದರೆ ಬರುವರೇನಯ್ಯ** **ರಾಗ: ಚಂದ್ರಜ್ಯೋತಿ**

ಬಯಸಿ ಕರೆದರೆ ಬರುವರೇನಯ್ಯ ನರಹರಿಯ ದಾಸರು। ಬಯಸಿ ಕರೆದರೆ ಬರುವರೇನಯ್ಯ।। ಬಯಸಿ ಕರೆದರೆ ಬರುವರೇನೊ। ಜಯಶ್ರೀ ಮುರಹರಿಯ ನಾಮ ಓದಿ। ಬಾಯಿಪಾಠ ಮಾಡಿ ಭವದ ಭಯವ। ಕಳೆದುಕೊಂಡ ಶೂರರು।। ತನುವು ಎಂಬ ಆಲಯವ ತೊಡೆದು। ಮಹ ವಿಷಯಲಂಪಟ। ಬಿನುಗುತ್ರಿಗುಣೆಂಬ್ದೇಸಿಕೆಯಬಳಿದು। ಸುಸ್ಸಂಗಶ್ರವಣ। ಮನನದಿಂ ನಿಜಮೂಲ ಮರ್ಮವರಿದು। ಆಸನವ ಒಲಿದು। ಮನವು ಯೆಂಬ ಲೇಖಣ್ಹಿಡಿದು। ಘನಚಿತ್ತೆಂಬ ಲೇಖ್ಯದ ಮೇಲೆ। ಚಿನುಮಯಾತ್ಮನ ನಾಮ ಬರೆದು ಘನಕೆ। ಘನ ಆನಂದದಿಂದಿರುವರು। ಆರು ದ್ವಯಗಜ ಇಕ್ಕಡಿಯ ಗೈದು ಬಿಡದ್ವಾರಿಬುರವ। ಆರು ಹುಲಿಗಳ ತಾರ ಸೀಳೊಗೆದು ಬಲುಘೋರಬಡಿಪ। ಆರು ನಾಲ್ಕು ಶುನಕಗಳ ತುಳಿದು ಸತ್ವಥವ ಪಿಡಿದು। ಸಾರಾಸಾರ ಸುವಿಚಾರಪರರಾಗಿ ಮಾರನಯ್ಯನ। ಪಾರಮಹಿಮೆಯ। ಬಾರಿಬಾರಿಗೆ ಪಠಣ ಮಾಡಿಸು-। ಸಾರ ಅಮೃತ ಪೀರುವವರು। ತಾಸಿನ ಜಗಮಾಯವೆಂದರಿದು। ಇದು ಸತ್ಯವಲ್ಲೆಂದು। ಬೇಸರಿಲ್ಲದೆನುಭವದಿ ದಿನಗಳೆದು ಸುಚಿಂತದನುದಿನ। ದಾಸದಾಸರ ಸಾಕ್ಷಿಗಳ ತಿಳಿದು ನಿಜಧ್ಯಾನಸದ್ದುಡುಕಿಡಿದು।

ನಾಶನಭವದ್ವಾಸನೆಯ ನೀಗಿ ಸಾಸಿರನಾಮದೊಡೆಯ ನಮ್ಮ । ಶ್ರೀಶ ಶ್ರೀರಾಮಚರಣಕಮಲ ದಾಸರಾಗಿ ಸಂತೋಷದಿರುವರು॥

**ಭಯವಿಲ್ಲೋ ಭಯವಿಲ್ಲೋ** **ರಾಗ: ಕಮಾಚ್**

ಭಯವಿಲ್ಲೋ ಭಯವಿಲ್ಲೋ। ಭಯಹರ ನರಸಿಂಗ ನಡಿಯ ದಾಸರಿಗೆ॥ಪ॥ ವೃಶ್ಚಿಕ ಮುಟ್ಟಲು ಬಾಧೆಯು ಇಲ್ಲ ತಕ್ಷ। ಕಚ್ಚಲು ವಿಷವಂಟೋಣೆಲ್ಲ। ಅಚ್ಯುತಾನಂತನ ಹೆಚ್ಚಿನಡಿದಾವರೆ। ಮುಟ್ಟಿ ಭಜಿಪ ಮಹನಿಶ್ಚಲಚಿತ್ತರಿಗೆ॥1॥ ಕಳ್ಳರು ಮುತ್ತಲು ಸುಲಕೊಂಬೋಣೆಲ್ಲ। ದಳ್ಳುರಿ ಹತ್ತಲು ಸುಡುವ ಶಕ್ತಿಲ್ಲ। ಫುಲ್ಲನಾಭನ ಪಾದ ಉಲ್ಲಾಸಮನದಿಂದ। ನಿಲ್ಲದೆ ಭಜಿಪಗೆ ಎಳ್ಳಷ್ಟಾದರು॥2॥ ಹುಲಿಕರಡಿಬಂದು ನುಂಗುವ ತ್ರಾಣೆಲ್ಲ। ಬಲುಭೂತ ಬೇತಾಳ ಎದುರೆ ಇಲ್ಲ। ಮಲಿನಹರಣ ಕೃಪಾನಿಲಯ ಭಕ್ತಜನ। ಸುಲಭನೆಂದೊದರುತನಲಿವ ನಿರ್ಮಲರಿಗೆ॥3॥ ಭೂಪತಿಗಳ ಭಯರೋಮಕೆ ಇಲ್ಲ। ಪಾಪತಾಪಗಳ ಲೇಪವೆ ಇಲ್ಲ। ಆ ಪರಬ್ರಹ್ಮ ಜಗದ್ವ್ಯಾಪಕನನುದಿನ। ಗೌಪ್ಯದಾರಾಧಿಸುವ ಪಾಪ ಲೋಪರಿಗೆ॥4॥ ಏಸು ಕಷ್ಟ ಬಂದರಾಯೊಸವಿಲ್ಲ। ನಾಶಮೃತ್ಯು ಗಾಳಿಸೋಂಕೋಣೆಲ್ಲ। ಹೇಸಿ ದುರ್ಭವದ ವಾಸನಳಿದ ಮಹ। ಶ್ರೀಶ ಶ್ರೀರಾಮನ ದಾಸ ದಾಸರಿಗೆ॥5॥

**ಚಂಚಲಿಸದೇ ನೀನು** **ರಾಗ: ಶಂಕರಾಭರಣ, ಅಟ್ಟತಾಳ**

ಚಂಚಲಿಸದೇ ನೀನು ಚತುರನಾಗು। ವಂಚಿಸದೆ ಸಕಲವೊಪ್ಪಿಸು ಹರಿಗೆ ಮನವೇ॥ಪ॥ ಆರು ನಿನ್ನವರೆಂಬೆ ಅವರಗಲಿದರು ಕಡೆಗೆ। ಭೂರಿ ಸಂಚಿತ ಸಂಪದೆರವಾಯಿತು। ಜಾರುತಿವೆ ಕ್ಷಣಲವಗಳೀಗಾಗ ತಿಳಿಯದು। ನಾರಸಿಂಹನ ನಂಬು ನಿಷ್ಠೆಯಲಿ ಮನವೆ॥1॥ ಅಲ್ಪ ಸುಖಕಾಗಿ ನೀ ಅನೇಕ ಸುಖ ಮರೆವರೆ। ಕಲ್ಪಕಲ್ಪಕೆ ನಿರಯನುಣಲಿ ಬಹುದೆ। ಅಲ್ಪರುಪದೇಶದಲಿ ಭ್ರಾಂತನಾಗದೆ ಶೇಷ। ತಲ್ಪನ್ನ ಮೊರೆ ಹೋಗು ತಡೆಯದೆಲೆ ಮನವೆ॥2॥ ನಿನ್ನಿಂದ ಭವ ಬಂಧನವು ಮೋಚನವು ನೋಡೋ। ನಿನ್ನಿಂದ ಪ್ರಸನ್ವೆಂಕ- ಟೇಶನೊಲಿಮೆ। ಇನ್ನೆನ್ನ ದಣಿಸದಿರು ಇದರಿಂದ ಮೀರಿದರೆ। ಘನ್ನಗುರು ಮಧ್ವೇಶನಾಣೆ ನಿನಗೆ ॥3॥



**ರೇ ರೇ ಮಾನಸ (ಕೀರ್ತನೆ)** **ರಾಗ: ಹಿಂದೋಳ–ಆದಿತಾಳ**

ರೇ ರೇ ಮಾನಸ ಭಜನರಸಿಂಹಂ। ಸ್ಮರಂ ಸ್ಮರಂ ಸ್ಮರಂ ಪರಬ್ರಹ್ಮಂ ॥ಪ॥ ವ್ಯರ್ಥಂ ಮಾಕುರುಂ ಮಾನವ ಜನ್ಮಂ। ಆರ್ತ ಪರಾಯಣ ಆಶ್ರಯ ಶೀಘ್ರಂ॥ಅ॥ ಪ್ರಹ್ಲಾದಾವನ ಪರಬಲಿಮರ್ದನ। ಆಹ್ಲಾದಾವನ ಸರ್ವಜಗತ್ ಪ್ರಭು। ಸೀಮಾತೀತ ಸರ್ವ ಸುಲಭಮಹೋ। ರಾಮಾನುಜನುತ ಘೃತಮಖ ಸಾರಯಾ॥ಚ॥

**ನರಸಿಂಹಾಗಚ್ಛ ಪರಬ್ರಹ್ಮ ಪುಚ್ಛ** **ರಾಗ: ಮೋಹನ–ಛಾಪುತಾಳ**

ನರಸಿಂಹಾಗಚ್ಛ ಪರಬ್ರಹ್ಮ ಪುಚ್ಛ ಸ್ವೇಚ್ಛ ಸ್ವಚ್ಛ॥ಪ॥ ಹರಿಹರ ಬ್ರಹ್ಮೇಂದ್ರಾದಿ ಪೂಜಿತಾತ್ಯಚ್ಛ। ಪರಮಭಾಗವತ ಪ್ರಹ್ಲಾದ ಭಕ್ತ್ಯಚ್ಛ ॥ಅ.ಪ॥ ಧೀರತರ ಘಟಿಕಾಚಲೇಶ್ವರ ಸೌರತರ ಹೇಮಕೋಟೀಶ್ವರ। ವೀರವರ ಮೋಹನ ವಿಭಾಸ್ವರ ಮಾರವರ ಮಾನಪ ಹರೀಶ್ವರ। ಮುರ ಹರನಗಧರ ಸರಸಿಜಕರ ಪರಮಪುರುಷ। ಪವನಜ ಶುಭಕರ। ಸುರಚಿರ ಕರಿಗಿರಿ ವರದವಿಚರ ಸರಸಗುರುಗುಹ ಹೃದಯ ಸಹಚರ ॥ಚ॥

**ಶ್ರೀ ನಾರಸಿಂಹ ಮಾಂ ಪಾಹಿ** **ರಾಗ: ಫಲರಂಜನಿ, ದೇಶಾದಿತಾಳ**

ಶ್ರೀ ನಾರಸಿಂಹ ಮಾಂ ಪಾಹಿ। ಕ್ಷೀರಾಬ್ಧಿ ಕನ್ಯಕಾರಮಣ॥ಪ॥ ದೀನಾರ್ತಿನಿವಾರಣ ಭವ್ಯಗುಣ। ದಿತಿತನಯ ತಿಮಿರ ಸೂರ್ಯತ್ರಿನೇತ್ರ ॥ಅ.ಪ॥ ಪ್ರಹ್ಲಾದ ಪರಾಶರ ನಾರದ ಹೃತ್। ಪಂಕೇರುಹ ನೀರಜ ಬಂಧುರ। ಆಹ್ಲಾದಕರಾಶುಭರೋಗ ಸಂಹಾ। ವರದ ತ್ಯಾಗರಾಜಾದಿ ವಿನುತ॥ಚ॥

**ನರಸಿಂಹಾನನು ಬ್ರೋವವೇ** **ರಾಗ: ಬಿಲಹರಿ-ತ್ರಿಪುಟತಾಳ**

ನರಸಿಂಹಾನನು ಬ್ರೋವವೇ ಶ್ರೀಲಕ್ಷ್ಮೀ॥ಪ॥ ಕೋರಮಾಲಿನ ನರುಲ- ಕೊನಿಯಾಡನು ನೇನು। ಪರಮಪಾವನ ನಾಪಾಲಿ ಶ್ರೀಲಕ್ಷ್ಮೀ॥ಅ.ಪ॥ ನೀಜಪವು, ನೀ ಸ್ಮರಣ ನೀ ಪಾದ। ಪೂಜ, ನೀವಾರಿ ಚೇಲಿಮಿಯೊಸಗಿ। ರಾಜಿಗಾದಯ ಜೇಯುತ್ಯಾಗ। ರಾಜಸನ್ನುತ ತರಮುಗಾದು॥ಚ॥

**ಪೆದೆಯೋ ಬಲ್ಲಾಪುಗೊಂಡ** **ರಾಗ:ಮೋಹನ-ಭಲ್ಲಾಟಿ**

ಪೆದೆಯೋ ಬಲ್ಲಾಪುಗೊಂಡ ಬೆರಿಗಿನಿದೆ। ವದಲಕಕೊಲಿಚಿತೆ ವರಮುಲಿಚಿನ್ನಿ ॥ಪ॥ ಪದಿವೆಲ ಶಿರಸುಲಬಲು ನರಸಿಂಹಾಮು। ಗುದಿಗೊನ್ನಚೇತುಲ ಗುರುತೈನದಿ। ಎದುಟ ಬಾದಾಲು ಕನ್ನುಲೆನನ್ನೈನಗಲಿಗಿನದಿ। ಯಿದಿ ಬ್ರಹ್ಮಾಂಡಪುಗುಹ ನಿರವೈನದಿ॥1॥ ಘನಶಂಖಚಕ್ರಾದುಲ ಕೈದುವಲತೋನುನ್ನದಿ। ವೊನಸಿ ರಾಕಾಸಿಮೇಕಮುಲಗೊಟ್ಟೇದಿ। ಕನಕಪುದೈತ್ಯುನಿಕಡುಪು ಚಿಂಚಿನದಿ। ತನುನಮ್ಮಿನ ಪ್ರಹ್ಲಾದುದಾಪುನು ದಂಡೈನದಿ॥2॥ ಶ್ರೀವನಿತ ತೊಡಮೀದ ಜೇಕುನಿ ನಿಲುಪಿನದಿ। ದೇವತಲು ಗೊಲುವ ಗದ್ದಪೈನುನ್ನದಿ। ಶ್ರೀವೆಂಕಟಾದ್ರಿಯೆಂದು ಜಲಗಿಭೋಗಿಂಚೇದಿ। ಭಾವಿಂಚಿ ಚೂಚಿತೇನು ಪರಬ್ರಹ್ಮಮೈನದಿ॥3॥

**ಸುಗ್ರೀವನಾರಸಿಂಹ** **ರಾಗ: ತೋಡಿ,**

ಸುಗ್ರೀವನಾರಸಿಂಹ ಸುಲಭುಡ ವಂದರಿಕಿ। ನಗ್ರೇಸರುಡ ನೀ ವವಧಾರು ದೇವಾ॥ಪ॥ ಸನಕಾದುಲೊಕವಂಕಜಯವೆಟ್ಟು ಚುನ್ನಾರು। ಯನಸಿ ಸುರಲು ಚೇತುಲೆತ್ತಿ ಮೊಕ್ಕೇರು। ಮುನು-ಲಿರುಮೇಲಾನುಂಡಿ ಮುನುಕೊನಿ ಸುತಿಂಚೇರು। ಅನುಪಮಾಲಾಂಕಾರ ಅವಧಾರು ದೇವಾ॥1॥ ಗಂಗಾದಿನದುಲೆಲ್ಲಾ ಗಡಗಿ ನೀಪಾದಮುಲು। ಪೊಂಗುಚು ಸಪ್ತರುಷುಲು ಪೂಜಿಂಚೇರು। ಸಂಗತಿ ವಾಯುದೇಡು ಸರಿನಾಲಪಟ್ಟಮಿದಿ। ಅಂಗಜಕೋಟಿರೂಪ ಯವಧಾರು ದೇವಾ॥2॥ ಪರಗ ನಾರದಾದುಲು ಪಾಡೇರು ನೀ ಚರಿತಲು। ಪರಮ ಯೋಗೀಂದ್ರುಲು ಭಾವಿಂಚೇರು। ಸಿರುಲು ಮಿಂಚಿನಯಟ್ಟಿ ಶ್ರೀವೆಂಕಟಾದ್ರಿಮೀದ। ನರುದುಗ ನುನ್ನಾಡವು ಅವಧಾರು ದೇವಾ॥3॥

**ಅರುದರು ದೀಗತಿ** **ರಾಗ:ಪೂರ್ವಿಕಲ್ಯಾಣಿ**

ಅರುದರು ದೀಗತಿ ಯಹೋಬಲೇಶ್ವರ। ಪೊರಿಬೊರಿ ದಾಸುಲು ಪೊಗಡುಟಯಟ್ಟು ॥ಪ॥ ಯದುಟ ಜಿಂಚಿತಿವಿ ಹಿರಣ್ಯಕಶಿಪುನಿ। ಅದೇ ಪ್ರಹ್ಲಾದುಡು ಬಂಟಗು ಟೆಟ್ಲು। ಕದಿಸಿನರುದ್ರುನಿಗರ್ವ ಮಡಂಚಿತಿವಿ। ಗುಡಿಗೊನಿಧಿವಿಜುಲು ಕೊಲುಚುಟಯಟ್ಟು॥1॥ ಘನಸಿಂಹಾ ಕೃತಿ ಗೈಕೊನಿ ವುಂಟಿವಿ। ಯನಯಗ ಗರಿ ಗಾಚಿನವೆಟ್ಲು। ಪನಿವಡಿ ಕಂಬಮುವಗುಲ ವೆಡಲಿತಿವಿ। ಮನುಜುಲು ಪೂಜಿಂಚಿ ಮರುಗುಟಯಟ್ಲು॥2॥ ಸರವಿತೋ ವೀರರಸಮುನ ಮಿಂಚಿತಿವಿ। ಅರಯಗ ಶೃಂಗಾರಿ ವೌಟೆಟ್ಟು। ಸಿರಿಪುರ ಮೆಕ್ಕನು ಶ್ರೀವೆಂಕಟಾದ್ರಿನಿ। ಯಿರವುಗ ನೀ ತೊಡಯಕ್ಕುಟಯಟ್ಟು॥3॥

**ಸಗಮು ಮಾನಿಸಿ** **ರಾಗ: ನಾಟ**

ಸಗಮು ಮಾನಿಸಿ ರೂಪು ಸಗಮು ಮೊಗಮುರೂಪು। ಅಗಣಿತ ಪ್ರತಾಪುಡಹೋಬಲೇಶುಡು॥ಪ॥ ಗದ್ದಮೀದ ಗೂಚುನ್ನಾಡು ಕಂಬಮುಲೋ ಬುಟ್ಟಿನಾಡು। ಕೊದ್ದಿಮೀರ ಗಡುನವ್ವು- ಕೊಂಟಾನುನ್ನಾಡು। ವದ್ದನೆ ಶ್ರೀಸತಿಚನ್ನುಲೋರಯುಚುನುನ್ನವಾಡು। ಅದ್ದಿವೋಚೂಡರಮ್ಮ ಅಹೋಬಲೇಶುಡು॥1॥ ಪೆನುಮೀಸಾಲವಾಡು ಪೆದಪೆದ ಗೋಳ್ಳವಾಡು। ಘನುನಿಗ ಪ್ರಹಲ್ಲಾದುನಿ ಗಾಚುಕುನ್ನಾಡು। ಮನಸಿಚ್ಚಿನಸುರಲತೋ ಮಾಟಲಾಡುಚುನ್ನವಾಡು। ಅನುಪಮ ತೇಜುಡಮ್ಮ ಅಹೋಬಲೇಶುಡು॥2॥ ವೇವೇಲು ಚೇತುಲವಾಡುವೆನ್ನೆಲಚಾಯಲವಾಡು। ಭಾವಿಂಚಿ ಕೊಲ್ಚಿನವಾರಿಲಿಟವಾಡು। ಶ್ರೀವೆಂಕಟಗಿರಿಮೀದ ಜೇರಿ ಭವನಾಶಿ ದಂಡ। ನಾವೆಲನೀವಲಮಿಂಚಿನಹೋಬಲೇಶುಡು॥3॥

**ಸುಗ್ರೀವ ನಾರಸಿಂಹುನೀ** **ರಾಗ:ಲತಾಂಗಿ**

ಸುಗ್ರೀವನಾರಸಿಂಹುನೀ ಜೂಡರೋ ವಾಡೆ। ಅಗ್ರಪೂಜಾ ಗೊನ್ನಾವಾಡು ಆದಿ ಸಿಂಹಮು॥ಪ॥ ದೇವತಲು ಜಯವೆಟ್ಟಿ ದಿವಿನುಂಡೆ ವೊಗಡಗ। ದೇವುಲತೋ ಗೂಡು ನಾಡು ದಿವ್ಯಸಿಂಹಮು। ಭಾವಿಂಪ ನೆಟ್ಟನೆದುಟ ಪ್ರಹ್ಲಾದುದುಂಡಗಾನು। ವೇವೇಲು ನವ್ವುಲು ನವ್ವಿ ವಿಜಯ ಸಿಂಹಮು ॥1॥ ಅಸುರುಲನು ಗೆಲಿಚಿ ಅದೇ ಸಿಂಹಾಸನಮುಪೈ। ವ್ಯಸಂ ಗೊಲುವುನ್ನಾಡು ವೀರಸಿಂಹಮು। ಪಸಡಿವರ್ಣಮುತೋಡ ಬಹು ದಿವ್ಯಾಯುಧಾಲತೋ। ದೇಸಲ ವೆಲುಗೊಂದಿನಿ ಧೀರಸಿಂಹಮು ॥2॥ ನಾನಾಭರಣಾಲು ವೆಟ್ಟಿ ನಮ್ಮಿನ ದಾಸುಲನೆಲ್ಲ। ಆನುಕೊನಿ ರಕ್ಷಿಂಚಿ ಪ್ರತ್ಯಕ್ಷಸಿಂಹಮು। ಪೂನಿ ಶ್ರೀವೆಂಕಟಾದ್ರಿನಿ ಬುಧುಲೆಲ್ಲಾಗೊಲುವಗಾ। ನಾನಾವರಮುಲೊಸಗಿ ಮಾನವಸಿಂಹಮು ॥3॥

**ಇಹಪರಮುಲಕೂನು** **ರಾಗ: ಶಂಕರಾಭರಣ**

ಇಹಪರಮುಲಕೂನು ಯೇಲಿಕವು। ಬಹುರೂಪಂಬುಲಪ್ರಹ್ಲಾದ ವರದಾ॥ಪ॥ ವೇಯಿಗರಂಬುಲ ವಿವಿಧಾಯುಧಂಬುಲ। ದಾಯಲ ನಡಚಿನ ದೈವಮವೂ। ನಿಯಂದು ನುನ್ನವಿ ನಿಖಿಲ ಜಗಂಬುಲು। ಪಾಯಕ ಮಮ್ಮೇಲು ಪ್ರಹ್ಲಾದವರದಾ॥1॥ ಕದಿಮಿ ದುಷ್ಟುಲನುಗತಮು ಸೇಸಿತಿನಿ। ತ್ರಿದಶುಲ ಗಾಚಿನ ದೇವುಡವು। ವದಲ ಕಿಂದರಿಕಿ ವರಮು ಲೊಸಂಗಗ। ಬ್ರದಿಕಿತಿ ಮಿದಿವೌ ಪ್ರಹ್ಲಾದ ವರದಾ॥2॥ ಶ್ರೀವಲ್ಲಭುಡವು ಚಿತ್ತ ಜಗುರುಡವು। ಕಾವಲಸಿನ ಚೋಗಲುಗುದುವು। ಶ್ರೀವೆಂಕಟಾದ್ರಿನಿ ಶ್ರೀಯಹೋಬಲನನು ಭಾವಿಂತು ನೀಮೂರ್ತಿ ಪ್ರಹ್ಲಾದ ವರದಾ॥3॥

**ಮೊದಲಿವೇಲ್ಪ ಮಾ ಮೊರ** **ರಾಗ:ರೇವತಿ**

ಮೊದಲಿವೇಲ್ಪ ಮಾ ಮೊರ ಯಾಲಿಂಚವೇ। ಯದುಟಗಾವು ಮಮು ನಿದಿವೋ ದೇವಾ॥ಪ॥ ದರಪೈ ದಪಸುಲತಪಮುಲು ಚೆರಿಚೆನು ನಿರತಪುಣ್ಯಮುಲು ನೀರುಸೆಸೆನದೆ। ಪರಕಾಮಿನುಲನು ಭಂಗಪೆಟ್ಟಿನದೇ। ಹಿರಣ್ಯಕಶಿಪುದಿದಿವೋ ದೇವಾ॥1॥ ಮುನುಲಜಡಲವಿಗೋಮೊಪುಲ ಕೊಲದುಲು। ಇವ ಚಂದ್ರಾದುಲ ನೆಕ್ಕುವಗೆಲಿಚೆನು। ಚನವರಿಯಿಂದ್ರುನಿ ಸ್ವರ್ಗಮು ಚೇಕೊನೆ। ಯನಗೊನಿ ಹಿರಣ್ಯುಡಿದಿವೋ ದೇವಾ॥2॥ ಪಲುದಿಕ್ಪಾಲುಲ ಬಾರಗ ದೋಲೆನು। ಬಲಿಮಿನೆ ಪ್ರಹ್ಲಾದು ಬರಚೀನಿ। ಯಲಮಿನಿ ಶ್ರೀವೆಂಕಟೇಶನೀವಲನ। ಯಿಲಗಶಿಪುಡು ಚೆಡೆ ನಿಧಿವೋ ದೇವಾ॥3॥

**ವಾಡೆವೋ ಪ್ರಹ್ಲಾದ** **ರಾಗ: ಗೌಳ**

ವಾಡೆವೋ ಪ್ರಹ್ಲಾದ ವರದುಡು। ವಾಡೆವೋ ಭಕ್ತವತ್ಸಲುಡು॥ಪ॥ ಕೋರದವಡಲತೋಡಾ ಕೋಟಿಸೂರ್ಯ ತೇಜಮುತೋ। ಹರಿಕೇಯೂರಾದಿ ಭೂಷಣಾಂಬರಾಲತೋ। ಚೇರಿಪ್ರಹ್ಲಾದುಲೆಲ್ಲಾನು ಸೇವಲು ಸೇಯಗಾನು। ಮೆರಮೀರಿನಶಿರುಲ ಮೆಡಲೋನುನ್ನಾಡು॥1॥ ತೆಲ್ಲನಿಮೇನಿತೋಡ ತೀಗೆನವ್ವುಲತೋಡ। ಚಲ್ಲನಿಗಂಧಮುಲವಾಸನಲ ತೋಡ। ಪೆಲ್ಲುಗಾ ನಾರದಾದುಲು ಪೇರುಕೊನಿ ನುತಿಂಚೆಗಾ। ವೆಲ್ಲವಿರಿ ಗೊಲುವ್ಯೆ ವೇಡುಕನುನ್ನಾಡು॥2॥ ಶಂಕುಚಕ್ರಮುಲತೋಡ ಜಂಟಪೂದಂಡಲ ತೋಡ। ಪೊಂಕಪು ನಾನಾವಿಧಭೋಗಮುಲತೋ। ಅಂಕಪು ಶ್ರೀ ವೆಂಕಟಾದ್ರಿ ನಹೋಬಲಮುನಂದು ಅಂಕೆಲ ನೇಪೊದ್ದು ನೆಲವೈತಾನುನ್ನಾಡು॥3॥

**ಪಡತುಲಾಲಾ ಶೋಭಾನ** **ರಾಗ:ರಾಮಕ್ರಿಯ**

ಪಡತುಲಾಲಾ ಶೋಭಾನ ಪಾಡರಮ್ಮಾ। ಅಡರಿ ಪೆಂಡ್ಲಾದಿನಿ ಅಹೋಬಲೇಶುಡು॥ಪ॥ ಯದುರು ಗೊಂಡಲಮೀದ ಯಿಂದಿರಾದಾಣುಕೂಚುಂಡಿ। ಮದನ ಕಳಲು ರೇಗಮಾಟಲಾಡಿ। ಪದಿಲಪು ಜೂಪುಲನೆ ಬಾಸಿಕಮು ಗಟ್ಟುಕ। ಅದಿವೋ ಪೆಂಡ್ಲಾಡಿ ನಹೋಬಲೇಶುಡು॥1 ॥ ಕನುಸನ್ನಲ ಮೆಲ್ಲನೆ ಕಾಗಿಟಿಕೀ ಚೇರಿ ಚೇರಿ। ಚೆನಕುಲ ನವ್ವುಲನೆ ಸೇಸಲು ಚಿಲ್ಲಿ। ವೆನುಕೊನಿ ಮೋವುಲನು ವಿಂದುಲು ವೆಟ್ಟುಕೊಂಟಾನು। ಅನಿಶಮು ಪೆಂಡ್ಲಾಡಿನಹೋಬಲೇಶುಡು॥2॥

ಸಂದಡಿಂಪು ವೇಡುಕಲ ಸಮರತುಲನು ಗೂಡಿ। ಕಂದುವ ಪೆಂಡ್ಲಿ ಪೀಟೈನ ಗದ್ದೆ ಮೀದನು। ಅಂದಮೈನ ಶ್ರೀವೆಂಕಟಾದ್ರಿ ಗರುಡಾದ್ರಿನಿ। ಅಂದುಕೊನಿ ಪೆಂಡ್ಲಾಡಿನಹೋಬಲೇಶುಡು॥3॥

**ತೂಣಿಲುಂ ಇರುಪ್ಪಾನ್ (ತಮಿಳು)** **ರಾಗ: ಬೇಹಾಗ್**

ತೂಣಿಲುಂ ಇರುಪ್ಪಾನ್ ತುರುಂಬಿಲುಂ ಇರುಪ್ಪಾನ್ ತೂಯವನ್ ಲಕ್ಷ್ಮೀ ನರಸಿಂಹನ್। ಅಣಿಲುಂ ಇರುಪ್ಪಾನ್ ಪೆಣ್ಣಿಲುಂ ಇರುಪ್ಪಾನ್ ಆನಂದ ಲಕ್ಷ್ಮೀನರಸಿಂಹನ್॥1॥ ನಾದತ್ತಿಲುಂ ಇರುಪ್ಪಾನ್ ನಾಮತ್ತಿಲುಂ ಇರುಪ್ಪಾನ್ ನಂಬಿದ ಪೇರುಕ್ಕುಂ ನರಸಿಂಹನ್। ವೇದತ್ತಿಲುಂ ಇರುಪ್ಪಾನ್। ವಿನ್ನೈಗಳ್ಳೆ ತೀರ್ಪಾನ್ ವೇಲನ್ ಮಾಯನ್ ನರಸಿಂಹನ್॥2॥ ಊನಿಲುಂ ಇರುಪ್ಪಾನ್ ಉಣರ್ವಿಲುಂ ಇವುಪ್ಪಾನ್ ಉನ್ಮೈಯಿನ್ ಜ್ಯೋತಿ ನಾರಾಯಣನ್। ವಿಣ್ಣಿಲುಂ ಇರುಪ್ಪಾನ್ ಮಣ್ಣಿಲುಂ ಇರುಪ್ಪಾನ್ ವಿಣ್ಣವರ ಜ್ಯೋತಿ ನಾರಾಯಣನ್॥3॥ ನೀರಿಲುಂ ಇರುಪ್ಪಾನ್ ನೆರುಪ್ಪಿಲುಂ ಇರುಪ್ಪಾನ್ ನೀಲವಣ್ಣನ್ ಕಣ್ಣನ್ ನಾರಾಯಣನ್। ನಿನ್ನೈವಿಲುಂ ಇರುಪ್ಪಾನ್। ಕನವಿಲುಂ ಇರುಪ್ಪಾನ್ ನೆಂಜಿಲೇ ಇರುಪ್ಪಾನ್ ನಾರಾಯಣನ್॥4॥



## ಸುಳಾದಿಗಳು

### ಶ್ರೀ ನಾರಸಿಂಹ ಸುಳಾದಿ

**ವೀರಸಿಂಹನೆ ನಾರಸಿಂಹನೆ** **ಧ್ರುವತಾಳ**

ವೀರಸಿಂಹನೆ ನಾರಸಿಂಹನೆ ದಯ ಪಾರಾ-ವಾರನೆ ಭಯ ನಿವಾರಣ ನಿರ್ಗುಣ। ಸಾರಿದವರ ಸಂಸಾರ ವೃಕ್ಷದ ಮೂಲ ಬೇರರಸಿ ಕೀಳುವ ಬಿರಿದು ಭಯಂಕರ। ಘೋರಾವತಾರ ಕರಾಳವದನ ಅ-ಘೋರ ದುರಿತ ಸಂಹಾರ ಮಾಯಾಕಾರ। ಕ್ರೂರ ದೈತ್ಯರ ಶೋಕ ಕಾರಣ ಉದುಭವ। ಈರೇಳು ಭುವನ ಸಾಗರದೊಡಿಯಾ। ಆ ರೌದ್ರನಾಮಾ ವಿಜಯ ವಿಠ್ಠಲ ನರಸಿಂಗ। ವೀರರಸಾತುಂಗ ಕಾರುಣ್ಯಾಪಾಂಗ॥

**ಮಗುವಿನ ರಕ್ಕಸನು ಹಗಲಿರುಳು ಬಿಡದೆ** **ಮಠ್ಯತಾಳ**

ಮಗುವಿನ ರಕ್ಕಸನು ಹಗಲಿರುಳು ಬಿಡದೆ। ಹಗೆಯಿಂದಲಿ ಹೊಯ್ದು ನಗಪನ್ನಗ ವನದಿ। ಗಗನ ಮಿಗಿಲಾದ ಅಗಣಿತ ಬಾಧೆಯಲಿ। ನಗೆದು ಒಗೆದು ಸಾವು ಬಗೆದು ಕೊಲ್ಲುತಿರಲು। ಜಗದವಲ್ಲಭನೆ ಸಗುಣಾನಾದಿಖನೆ। ನಿಗಮಾವಂದಿತನೆ ಪೊಗಳಿದ ಭಕುತರ। ತಗಲಿ ತೊಲಗನೆಂದೂ ಮಿಗೆ ಕೂಗುತಲಿರಲು। ಯುಗಯುಗದೊಳು ದಯಾಳುಗಳ ದೇವರ ದೇವ। ಯುಗಾದಿಕೃತ್ ನಾಮಾ ವಿಜಯ ವಿಠ್ಠಲ ಹೋ, ಹೋ ಯುಗಳಕರವ ಮುಗಿದು ಮಗುವು ಮೊರೆಯಿಡಲು॥

**ಕೇಳಿದಾಕ್ಷಣದಲ್ಲಿ ಲಾಲಿಸಿ ಭಕ್ತನ್ನ** **ರೂಪಕತಾಳ**

ಕೇಳಿದಾಕ್ಷಣದಲ್ಲಿ ಲಾಲಿಸಿ ಭಕ್ತನ್ನ। ಮೌಳಿವೇಗದಲಿ ಪಾಲಿಸುವೆನೆಂದು। ತಾಳಿಸಂತೋಷವ ತೂಳಿತುಂಬಿದಂತೆ। ಮೂರ್ಲೋಕದ ಪತಿ- ಯಾಲಯದಿಂದ ಸು-।ಶೀಲ ದುರ್ಲಭನಾಮ ವಿಜಯವಿಠ್ಠಲ ಪಂಚ-। ಮೌಳಿ ಮಾನವ ಕಂಭ ಸೀಳಿ ಮೂಡಿದ ದೇವ॥

**ಲಟಲಟಾ ಲಟಲಟಾ ಲಟಕಿಸಿ ವನಜಾಂಡ** **ಝಂಪೆತಾಳ**

ಲಟಲಟಾ ಲಟಲಟಾ ಲಟಕಿಸಿ ವನಜಾಂಡ। ಕಟಹ ಪಟಪಟ ಪಟುತ್ಕಟದಿ ಬಿಚ್ಚುತಿರಲು। ಪುಟಪುಟಾ ಪುಟನೆಗೆದು ಚೀರಿ ಹಾರುತ್ತ ಪ-ಲ್ಕಟ ಕಟಾ ಕಟ ಕಡಿದು ರೋಷದಿಂದ। ಮಿಟಿಮಿಟಿ ಮಿಟನೆ ರಕ್ತಾಕ್ಷಿಯಲ್ಲಿ ನೋಡಿ। ತಟಿತ್ಕೋಟಿ ಉರ್ಭಟಗೆ ಆರ್ಭಟವಾಗಿರಲು। ಕುಟಿಲ ರಹಿತ ವ್ಯಕ್ತ ವಿಜಯವಿಠ್ಠಲ ಶಕ್ತ ಧಿಟ ನಿಟಿಲ ನೇತ್ರ ಸುರಕಟಕ ಪರಿಪಾಲಾ॥

**ಬೊಬ್ಬಿರಿಯೇ ವೀರಧ್ವನಿಯಿಂದ ತನಿಗಿಡಿ** **ತ್ರಿವಿಡಿತಾಳ**

ಬೊಬ್ಬಿರಿಯೇ ವೀರಧ್ವನಿಯಿಂದ ತನಿಗಿಡಿ। ಹಬ್ಬಿಮುಂಜೋಣಿ ಉರಿ ಹೋರೆದ್ದು ಸುತ್ತೆ। ಉಬ್ಬಸ ರವಿಗಾಗೆ, ಅಬ್ಜಾಂಡ

ನಡುಗುತಿರೆ। ಅಬ್ಧಿಸಪುತ ಉಕ್ಕಿ ಹೊರಚಲ್ಲಿ ಬರುತಿರೆ। ಅಬ್ಜ ಭವಾದಿಗಳು ತಬ್ಬಿಬ್ಬುಗೊಂಡರು। ಅಬ್ಬರವೇನೆನುತ ನಭದ ಗೂಳಿಯು ತಗಿಯೆ। ಶಬ್ದತುಂಬಿತು ಅವ್ಯಾಕೃತಾಕಾಶ ಪರಿಯಂತ। ನಿಬ್ಬರ ತರುಗಿರಿ ಜರ್ಝರಿಸಲು। ಒಬ್ಬರಿಗೊಶವಲ್ಲದ ನಮ್ಮಾ ವಿಜಯ ವಿಠ್ಠಲ। ಇಬ್ಬಗೆಯಾಗಿ ಕಂಭದಿಂದ ಪೊರಮಟ್ಟ॥

**ಘುಡಿಘುಡಿಸುತ ಕೋಟಿ ಸಿಡಿಲು ಗಿರಿಗೆ ಬಂದು** **ಅಟ್ಟತಾಳ**

ಘುಡಿಘುಡಿಸುತ ಕೋಟಿ ಸಿಡಿಲು ಗಿರಿಗೆ ಬಂದು। ಹೊಡೆದಂತೆ ಚೀರಿ ಬೊಬ್ಬಿಡುತಲಿ ಲಂಘಿಸಿ। ಹಿಡಿದು ರಕ್ಕಸನ್ನ ಕೆಡಹಿ ಮಂಡಿಯ ತುಡುಕಿ। ತೊಡಿಯ ಮೇಲೇರಿಸಿ ಹೇರೊಡಲು ಕೂರುಗುರಿಂದ।ಪಡುವಲಗಡಲ ತಡಿಯ ತರಣಿಯ ನೋಡಿ। ಕಡುಕೋಪದಲಿ ಸದೆಬಡಿದು ರಕ್ಕಸನ ಕೆಡಹಿ। ನಿಡಿಗರುಳನು ಕೊರಳಡಿಯಲ್ಲಿ ಧರಿಸಿದ। ಸಡಗರದ ದೈವ ಕಡುಗಲಿ ಭೂರ್ಭೂವ ವಿಜಯವಿಠ್ಠಲ ಪಾ-ಲ್ಗಡಲೊಡಿಯಾ ಶರಣ- ರೊಡೆಯ ಒಡನೊಡನೆ॥

**ಉರಿ ಮಸಗೆ ಚತುರ್ದಶ ಧರಣಿ ತಲ್ಲಣಿಸಲು** **ಏಕತಾಳ**

ಉರಿ ಮಸಗೆ ಚತುರ್ದಶ ಧರಣಿ ತಲ್ಲಣಿಸಲು। ಪರಮೇಷ್ಠಿಹರ ಸುರರು ಸಿರಿದೇವಿಗೆ ಮೊರೆ ಇಡಲು। ಕರುಣದಿಂದಲಿ ತನ್ನ ಶರಣನ್ನ ಸಹಿತ ನಿನ್ನ ಚರಣಕ್ಕೆ ಎರಗಲು ಪರಮ ಶಾಂತನಾಗಿ। ಹರಹಿದೆ ದಯವನ್ನು ಸುರರು ಕುಸುಮವರುಷ। ಕರೆಯಲು ಭೇರಿ ವಾದ್ಯ ಮೆರೆವುತ್ತರರೆ ಎನುತ। ಪರಿಪರಿವಾಲಗ ವಿಸ್ತಾರದಿಂದ ಕೈಕೊಳ್ಳುತ್ತ। ಮೆರೆದು ಸುರರುಪದ್ರ ಹರಿಸಿ ಬಾಲಕನ ನಿಮ್ಮ। ಚರಿತೆ ದುಷ್ಟರಿಗೆ ಭೀಕರವೋ ಸಜ್ಜನ ಪಾಲಾ॥

**ಜತೆ**

ಪ್ರಹ್ಲಾದವರ ಪ್ರಪನ್ನ ಕ್ಲೇಶಭಂಜನ್ನ।
ಮಹಹವಿಷೆ ವಿಜಯ ವಿಠ್ಠಲ ನರಮೃಗವೇಷಾ॥



**ಅಕಾಲಮೃತ್ಯು ಪ್ರಾರ್ಥನಾ ಸುಳಾದಿ**

**ನಂಬಿದೆ ಎಲೊ ಹರಿ** **ರಾಗ: ರೇಗುಪ್ತಿ, ಧೃವತಾಳ**

ನಂಬಿದೆ ಎಲೊ ಹರಿ ಅಂಬರ ರೂಪಕಾರಿ। ಬೆಂಬಲವಾಗು ಭವರೋಗ ನೀಗು। ಡಿಂಬವುಳ್ಳನಕ ಕ್ಲೇಶ ಬಡಿಸುವ ಶೋಕ। ಯೆಂಬುದುಕಾಣಿಸದಿರು ಕೈಯ್ಯಾದೋರೊ। ಕುಂಭಿಣಿಯೊಳು ನೀನೆಂಬ ಮಾನವರಿಗೆ। ಅಂಬುಧಿ- ಯಾ ಪೋಷಣ್ಯಾಗದೇನೋ। ತಿಂಬೆನೆಂಬಾ ಮೃಗ ಟಂಬ ಅಡವಿಯೊಳು। ಅಂಬೆಯಾ ತಡದಂತೆ ತೆರನಾಗಿದೇ। ಮುಂಬಡಿಸುವರಿಲ್ಲ ಮುದ್ದು ಲಕುಮಿನಲ್ಲ। ಅಂಬುಜಭವಗಾದರು ನೀನೇ ಗತಿಯೊ। ಜಂಭಾರಿನುತ। ವಿಷ್ಣು ವಿಜಯವಿಠ್ಠಲ ಕರು। ಣಾಂಬುಧಿಯೇ ನೀನು, ನಮಿಸುವೆ ನಾನು॥

**ಅಪಮೃತ್ಯು ಸಮೀಪಿಸಿದೆ ಎನ್ನ ಅಪಹಾಸ ಸಲ್ಲವೋ** **ಮಠ್ಯತಾಳ**

ಅಪಮೃತ್ಯು ಸಮೀಪಿಸಿದೆ ಎನ್ನ ಅಪಹಾಸ ಸಲ್ಲವೋ। ಕೃಪೆಯಿಂದಲಿ ನೋಡು ಪರಂಪರಮ ಮಹಿಮಾ। ತಪಸಿಗಳ ಒಡೆಯಾ ಕಪಿ ವಿಜಯ ವಿಠ್ಠಲ। ಉಪಶಮನಗೈಸೋ॥

**ಅಕಾಲ ಮೃತ್ಯುವಿನ ಗಂಟಲ ಗಾಣನೆಂದು** **ತ್ರಿವಿಡಿತಾಳ**

ಅಕಾಲ ಮೃತ್ಯುವಿನ ಗಂಟಲ ಗಾಣನೆಂದು। ನಾಕಾದಿ ಲೋಕದಲಿ ಪೊಗಳುತಿದೆ ಪದ। ಸೋಕಲು ಪಾಷಾಣ ಪೆಣ್ಣಾಗಿ ಮೆರದದು। ಲೋಕ ಈರೇಳರೊಳು ಬಲ್ಲರೆಲ್ಲ। ಲೋಕಾಧ್ಯಕ್ಷನಾಮ ವಿಜಯವಿಠ್ಠಲ ದೇವ। ನೂಕುವದು ಬಂದ ಅಮೃತ್ಯುಗಳ।ನ।

**ಭಕುತಿ ವಿರಕುತಿ ನಿಜ ಶಕುತಿ ಬೇಕು ನಿನ್ನ ಭಜಿಸಿ** **ಅಟ್ಟತಾಳ**

ಭಕುತಿ ವಿರಕುತಿ ನಿಜ ಶಕುತಿ ಬೇಕು ನಿನ್ನ ಭಜಿಸಿ। ಮುಕುತಿಯನ್ನು ಪಡೆವವಂಗೆ ಯುಕುತಿ ಎಂದು। ಯುಕುತಿವಂತರು ಮುಕುತಾರ್ಥ ಪೇಳುವವರು। ರಿಕುತ ಎನ್ನ ಮಾತು ಲಾಲಿಸಿ ಭಕುತಿ ವಿರಕುತಿ। ಶಕುತಿ ಎಲ್ಲ ಭಕುತಿ ಮಿತಿಗೆ ಪಾಲಿಸಯ್ಯ। ಶಕುತಿ ಮತ ಶ್ರೇಷ್ಠನಾಮಾ ವಿಜಯವಿಠ್ಠಲ ಸಕಲರೊಡಿಯಾ। ಸುಕುತಾರ್ಥ ತೋರಿಸಯ್ಯಾ ಸತತ ನಿನ್ನ ನೆನೆಸುವಂತೆ॥

**ನಿನ್ನ ದಿವ್ಯ ಚರಣವನ್ನು ಇನ್ನು ಪಿಡಿದಮ್ಯಾಲೆ** **ಆದಿತಾಳ**

ನಿನ್ನ ದಿವ್ಯ ಚರಣವನ್ನು ಇನ್ನು ಪಿಡಿದಮ್ಯಾಲೆ। ಎನ್ನ ದುಷ್ಕರ್ಮಗಳಿನ್ನು ಪೋಗದಿರಲು। ಇನ್ನು ನಿನ್ನ ಬರಿದೆ ನಾ ಮುನ್ನೆ ಭಜಿಸಲು ಯಾಕೆ। ಮಣ್ಣು ಕಸ್ತೂರಿಯಾ ಕೂಡೆ ಬಣ್ಣ ಪ್ರತಿ ಕುರುಹವೇನೋ॥ ಚನ್ನಿಗ ನಿನ್ನಂಘ್ರಿಯ ಪ್ರಸನ್ನೀಕರಿಸಿಕೊಂಡಮೇಲೆ। ಎನ್ನ ಕರ್ಮ ಬೆನ್ನು ಬಿಡದೆ ಸನ್ನಿಧಿಯಾಗಿಪ್ಪದೆ ಪ್ರ-। ಸನ್ನಾತ್ಮನಾದ ದೇವ ರನ್ನ ವಿಜಯವಿಠ್ಠಲ। ನಿನ್ನ ನಾಮಾ ನೆನಿಸಿ ದೂರನ್ನ ಮಾಡೊ ಪಾಪದಿಂದ॥

**ಜತೆ**

ತಪ್ಪದಂತೆ ಜತನವ ಮಾಡಿ ನಿಜ ಭಾಗ।

ವತರೊಳು ಇಡು ನಮ್ಮ ವಿಜಯವಿಠ್ಠಲ ದಕ್ಷ।



**ಜಯಜಯ ನಾರಸಿಂಹ ದಯಾಂಬುನಿಧಿಯೇ ನಮೋ ಸುಳಾದಿ**

**ಜಯ ಜಯ ನಾರಸಿಂಹ ದಯಾಂಬುನಿಧಿಯೇ** **ರಾಗ: ಸಾರಂಗ,ಧ್ರುವತಾಳ**

ಜಯ ಜಯ ನಾರಸಿಂಹ ದಯಾಂಬುನಿಧಿಯೇ ನಮೋ। ಭಯ ನಿವಾರಣ ನಮೋ ಭವ್ಯ ಮೂರ್ತೇ। ಸಯವಾಗಿ ಭಕುತನಿಕಾಯ ಅಭಯಪ್ರದ। ಜಯ ಜಾಹ್ನವಿಜನಕ ಜಗದೀಶನೇ ಜಯ। ಜಯವರದಗೋಪಾಲ - ವಿಠಲ ನಮಗೆ। ಜಯಪ್ರದ ಕೊಡುವನೆ ನಮೋ ನಮೊ॥

**ಕರವಿಡಿದು ಎನ್ನ ಕರತಂದು ನಿನ್ನ ದರುಶನ ಮಾಡಿಸಿ** **ಮಠ್ಯತಾಳ**

ಕರವಿಡಿದು ಎನ್ನ ಕರತಂದು ನಿನ್ನ ದರುಶನ ಮಾಡಿಸಿ। ದಾರಿದ್ರ್ಯ ಕಳೆದೂ ಸಿರಿಗೆ ಪೇಳಿ ಇವನ। ಪೊರಿ ಎಂದಿಯೊ ನಿನ್ನ ಕರುಣಕೆ ನಮೊ। ವರದ ಗೋಪಾಲವಿಠಲ ಸಿರಿಯನ್ನೇ ನೋಡಿದ। ಪರಿ ತಿಳಿದೆನೋ ಸ್ವಾಮಿ॥

**ಇದ್ದಲ್ಲೆ ನಿನಗೆ ನಾ ಈಪ್ಸೀತಗಳನೀವೆ** **ತ್ರಿವಿಡಿತಾಳ**

ಇದ್ದಲ್ಲೆ ನಿನಗೆ ನಾ ಈಪ್ಸೀತಗಳನೀವೆ। ಕ್ಷುದ್ರರಿಂದುಪದ್ರಗಳ ಪರಿಹರಿಸೋ। ಭದ್ರವಾಗಲಿ ನಿನ್ನ ಪ್ರೀತಿ ಸತಿ ಸುತರಿಗೆ। ಮದ್ಗುರು ವರದಗೋಪಾಲವಿಠಲ ದಯಾಬ್ದಿತಾನೆ ಒಲಿದು ವರವನಿತ್ತಾ॥

**ವ್ಯಾಸತತ್ವಜ್ಞರ ಕರುಣಕಟಾಕ್ಷದಿ** **ಅಟ್ಟತಾಳ**

ವ್ಯಾಸತತ್ವಜ್ಞರ ಕರುಣಕಟಾಕ್ಷದಿ। ವಾಸುದೇವ ಸುಖರಾಶಿ ಪಾಲಿಸಿದನು। ಏಸೇಸು ಸುಕೃತಿಗಳಿವರಿಗೆ ಸರಿಯೇ। ಕಾಶಿ ರಾಮೇಶ್ವರ ತೀರ್ಥಗಳ ಳಿವರಲ್ಲಿ। ವಾಸವಾಗಿದ್ದವಗೆಲ್ಲ ಮಿಂದ ಫಲ। ವಾಸವ ವರದನು ಒದಗಿ ಪಾಲಿಸುವನು। ಈ ಸುಕೃತಿಗಳಿಗೆ ಸರಿಯುಂಟೆ ಜಗದೊಳು। ಶಾಶ್ವತ ವರದಗೋಪಾಲವಿಠಲ ಸುಖ-ರಾಶಿ ಎನಗೆ ಸುಖ ಸೂಸಿದ ನೋಡಿ॥

**ಪರರ ಬೇಡಿಸದೆ ಪಾಲಿಪೆನೆಂದನು** **ಆದಿತಾಳ**

ಪರರ ಬೇಡಿಸದೆ ಪಾಲಿಪೆನೆಂದನು। ಪರವೆನೆತೋ ಸುಖ ಸುರಿಸುವೆನೆಂದ। ಮರಿಯದೆ ನಿನ್ನಯ ಮಾತು ಸಲ್ಲಿಸುವೆನು। ಇರು ಈ ವಿಧದಲಿ ಎನ್ನ ಸ್ಮರಿಸುತಲಿ। ಕರಕರಿಗಳು ನಿನ್ನ ಕಂಡರೋಡುವವು। ನರಹರಿ ವೆಂಕಟಪತಿ ತಾ ಒಲಿದೂ। ವರದ ಗೋಪಾಲವಿಠಲ ವರವ ನೀಡಿದಾ॥

**ಜತೆ**

ವಿಭುವೆ ವಿಭುದೇಂದ್ರ ವರದಗೋಪಾಲವಿಠಲ।
ಪ್ರಭುವೆ ಪ್ರಹ್ಲಾದವರದ ನಮೋ ನಮೋ॥



## ಅಹೋಬಲ ನರಸಿಂಹ ಮಹಿಮಾ ಸುಳಾದಿ

**ಅನಂತಾನಂತ ಶಯನಾ** **ಕೇದಾರಗೌಳ–ಧೃವತಾಳ**

ಅನಂತಾನಂತ ಶಯನಾ ಅಂಬುಜದಳ ನಯನ। ಉನ್ನಂತ ಗುಣನಿಲಯಾ ಪನ್ನ ಗೇಯ। ಘನ್ನ ಕಾರುಣ್ಯ ಮೂರ್ತಿ ಸತತ ಮಂಗಳ ಕೀರ್ತಿ । ಚನ್ನ ಪ್ರಸನ್ನ ರನ್ನ ಶಿರಿ ಸಂಪನ್ನ । ಚಿನ್ನಾಂಬರ ಚಿನ್ನರೂಪ ಚಿನ್ಮ ಯ ಕಾಯ। ಭಿನ್ನ ಜೀವರ ಪರಿಚ್ಛಿನ್ನ ವ್ಯಾಪ್ತ। ಪನ್ನಗನಾಗಾತಲ್ಪಾ ನಾಗಭಯ ವಿನಾಶ। ಜುನ್ನಾ ಚೋರಾ ಚತುರಾ ಚತುರ್ಮೊಗನೈಯ್ಯಾ। ಅಣ್ಣೋರಣೀ ಅಜರಾ ಅನಾದಿದೇವ ಪಾ-ವನ್ನಾ ಜೀವನ್ನಾ ದುಷ್ಟಜನ ಮರ್ದನಾ। ಬಣ್ಣಾ ಬಣ್ಣಾದ ಘನ್ನಾವರ್ಣ ಸುಪರ್ಣವಾ-। ಹನ್ನಾ ಭವಾರಣ್ಯಾ ದಾಹನ್ನ ನಿತ್ಯಾ। ಚೊನ್ನ ಪ್ರಕಾಶ ಧಿಕ್ಕರಿಸುವ ತೇಜಾ ಪ್ರ-। ಸನ್ನಾ ಕ್ಲೇಶವ ಭಂಜನ್ನಾ ಸುನಿರರಂಜನ್ನಾ। ಎನ್ನಂತರಂಗದೊಳಗಿಪ್ಪ ವಿಜಯವಿಠ್ಠಲಾ। ಅನ್ನಂತಗಿರಿವಾಸ ನರಕೇಸರಿ ವೇಷಾ ।

**ಕಲ್ಪಾಯು ಪಡೆದ ಮುನಿ ಮಾರ್ಕಾಂಡೇಯ** **ಮಠ್ಯತಾಳ**

ಕಲ್ಪಾಯು ಪಡೆದ ಮುನಿ ಮಾರ್ಕಾಂಡೇಯ। ಸರ್ಪಗಿರಿಯಲ್ಲಿ ಶ್ರೀನಿವಾಸನ ನೋಡೀ ತಪ್ಪದೆ ದೇವನ್ನ ವರವ ಸಂಪಾದಿಸೆ। ಒಪ್ಪದಿಂದಲಿ ಈ ಗಿರಿಯಾ ಕಡೆ ಭಾಗಾ। ತಪ್ಪಾಲಲ್ಲೀ ಪೋಗಿ ತಪವನು ಮಾಡೆಂದು। ಅಪ್ಪಣೆ ಕೊಡಲಾಗಿ ಶುದ್ಧನ ಒಡಗೂಡಿ। ಸುಪ್ರೀತಿಯಿಂದ ಭುವನವ ಸಂಚರಿಸೀ। ಅಪ್ಪತಿಯಾಗಿದ್ದ ಸ್ಥಳವನೆ ವೀಕ್ಷಿಸುತ। ಮುಪ್ಪುರದೊಳಗಿದಕೆ ಎದುರು-ಗಾಣೆನೆಂದು। ಅಲ್ಪು ಮನಸು ಮಾಡದೆ ವಾಸವಾದನು ಇಲ್ಲಿ। ಮುಪ್ಪು- ಯಿಲ್ಲದ ದೇವ ವಿಜಯ ವಿಠ್ಠಲನ್ನಾ। ವರ್ಷಗಳು ಗುಣಿಸಿ ಧ್ಯಾನವ ಐದಿದನು ।

**ಪದಿನಾಲ್ಕು ಸಾವಿರ ವರುಷ ಭಕುತಿಯಿಂದ** **ತ್ರಿವಿಡಿ ತಾಳ**

ಪದಿನಾಲ್ಕು ಸಾವಿರ ವರುಷ ಭಕುತಿಯಿಂದ। ಒದಗಿ ತಪವಮಾಡಿ ಆಹಾರ ತೊರೆದೂ। ಮುದದಿಂದ ಬಂದು ನೇಮವ ಮಾಡಿಕೊಂಡಿಪ್ಪ ಸದಮಲವಾದ ಅಹೋಬಲರಾಯನ। ಪದ ದರುಶನ ಮತ್ತೆ ಭವನಾಶಿ ಮಜ್ಜನ। ಬುಧನು ಬಿಡದೆ ಒಂದು ಗುಹಾದಿಂದ। ಉದಯಕಾಲಕೆ ಪೋಗಿ ಬಲಗೊಂಡು ಬರುವಾ ಪ್ರಾಂತ್ಯದಲಿ ಬಂದಾಯಿತು ಕೇಳಿ ಜನರೂ। ಅದೂಭೂತಾ ದಿವಸ ಪ್ರಾಪ್ತವಾಯಿತು। ಮೊದಲು ಚಾತುರ್ಮಾಸ್ಯ ಏಕಾದಶಿ। ಅದರ ತರುವಾಯ ಕಳಾಮಾತ್ರ ಸಾಧನಿ॥ ಪದವಿಗೆ ಕೇವಲಾ ಶುಚಿಮಾರ್ಗವೋ। ಇದು ಉಲ್ಲಂಘಿಸಿದರೆ ಪಾಪ ಅಲ್ಲಿಗೆ ಪೊಗಾದೊ। ಇದ್ದಾರೆ ಎನ್ನಾ ನೇಮ ಭಂಗ। ಹದುಳ ತೋರದೇ ಮೌನಿ ಉಭಯ ಸಂಕಟದಿಂದ। ಪದುಮನಾಭನ ಚರನ ನೆನೆಸಿ ಗುಣಿಸೆ। ಅದೆ ಅದೆ ಸಮಯದಲಿ ದೇವ ನುಡಿದ ತಾನೆ। ಉದಯವಾಗದ ಮುನ್ನೆ ಅರುಣನ ಗತಿಗೆ। ನದಿ ಭವನಾಶಿಯಾ ಕರಕೊಂಡು ಪಾರಿಜಾ-। ತದ ವೃಕ್ಷ ಸಮೇತಾ ಬರುವೆನೆಂದು। ಹೃದಯದೊಳಗೆ ತಿಳಿಸಿ ಪೇಳಿದಂತೆ ಬಂದು। ಉದುಭವ -ನಾದನು ಅಹೋಬಲರಾಯ। ಗಡಗಡನೆ ನಡುಗುತ್ತ ಆಂಜಲಿ ಪುಟದಿಂದ। ತೊದಲು ವಾಕ್ಯಗಳಿಂದ ಹರಿಯ ಸ್ತುತಿಸಿ। ತ್ರಿದಶಾದಿ ವಂದ್ಯ ನಾರಸಿಂಹನೆ ಪರಮಾ ಸು-। ಹೃದಯನೆ ಅನಂತನಾಮಕ ದೇವನೆ। ಮದಡಮತಿಗೆ ಒಲಿದು ಉದ್ಧರಿಸಿದೆ ಎಂದು। ಹದವನರಿತು ಪುಣ್ಯಗಳಿಸಿಕೊಂಡ। ಮಧು ವೈರಿ ವಿಜಯವಿಠ್ಠಲ ಇಲ್ಲಿ ಪೊಳೆಯಲು। ವಿಧಿ ಶಿವಾದ್ಯರು ಬಂದು ವಾಲಗ ಮಾಡಿದರು।

**ಅನುಗ್ರಹ ಮಾಡಿದಿ ಅನಿಮಿತ್ತ ಬಂಧುವೆ** **ಅಟ್ಟತಾಳ**

ಅನುಗ್ರಹ ಮಾಡಿದಿ ಅನಿಮಿತ್ತ ಬಂಧುವೆ । ಎನಗೊಂದು ವರವ ಪಾಲಿಸುವುದು ನೀನಿಲ್ಲಿ । ಅನುಗಾಲಾವಾಸಾವಾಗಿರಬೇಕು

ತೊಲಗಾದೆ। ವನಧಿಸಂಭವೆ ಬೊಮ್ಮ ಶಂಭು ಸುರರು ಮಿಕ್ಕ । ಮುನಿ ಮನುಗಳು ತೀರ್ಥಾಭಿಮಾನಿಗಳಾ। ಜನರೆಲ್ಲಾ ಸನ್ನಿಧಿಯಾಗಿ ಇರಬೇಕು। ಮನುಜನಾವನು ಇಲ್ಲಿಗೆ ಬಂದರವನಿಗೆ। ಘನ ಪಾಪಾ ಓಡಿಸಿ ಪುಣ್ಯವೆ ತಂದಿತ್ತು। ಜನುಮಾ ಜನುಮದಲ್ಲಿ ಜ್ಞಾನವೇ ಕೊಟ್ಟು ನೀ। ನಿನ್ನನೆ ಧೇನಿಸುವಂತೆ ಕೃಪೆಮಾಡು ಎನಲಾಗಿ। ಮುನಿಗೆ ಒಲಿದು ವರವನು ಇತ್ತನು ಇತ್ತಾ। ಕನಕಮಯವಾದಾ ಗಿರಿ ಇದೆ ಇದೆ ಇದೆ। ವನಧಿ ಬಂಧನ ಕುರುಜಾಂಗುಲಿ ವಿಶಾಲಾ । ಮಣಿಕರ್ಣಿಕೆ ಕಾಶಿ ಶ್ರೀರಂಗಕ್ಷೇತ್ರ। ಮಣಿಯಾಗಿಪ್ಪಾದೆಂದು ಅತಿಶಯವಾದಾ। ಮಾತನು ಕೊಟ್ಟಾ ಪರಮಾತ್ಮಾ। ದಿನ ಒಂದು ಮೂರೈದು ಏಳೆಂಟು ಒಂಭತ್ತು। ಇನ್ನಿತರ ಮೇಲೆ ವೆಗ್ಗಳವಾಗಿ ಇದ್ದು। ಅನಿಮಿಷ ಗಂಗಾತೀರದಲ್ಲಿ ಶತವತ್ಸ-। ರನುಸರಿಸಿ ಇದ್ದ ಫಲಕೆ ಮಿಗಿಲಯ್ಯಾ । ಎಣಿಕೆ ಮಾಡುವರ್‍ಯಾರು ಈ ಕ್ಷೇತ್ರದ ಯಾತ್ರೆ। ಜನುಮದೊಳಗೆ ಒಮ್ಮೆ ಸಾರಿದಾನಂತ। ಜನನಕೆ ಯಾತ್ರೆ ಮಾಡಿದಂಥ ಫಲವಕ್ಕು। ಕನಸೀಲಿ ಮನಸೀಲಿ ಚಿಂತಿಸೆ। ಧನವಂತನಾಗುವಾ ಇಹ ಪರದಲ್ಲಿ ಸೌಖ್ಯ। ಹನುಮಾ ವಂದಿತ ನಮ್ಮ ವಿಜಯವಿಠ್ಠಲರೇಯ। ಸನತ್ಕುಮಾರ ನಾರದರಿಗೆ ಒಲಿದ ಕಾಣೋ।

**ಎಸೆವಾ ತೀರ್ಥಂಗಳುಂಟು ಶೇಷ ಮಾರ್ಕಂಡ** **ಆದಿತಾಳ**

ಎಸೆವಾ ತೀರ್ಥಂಗಳುಂಟು ಶೇಷ ಮಾರ್ಕಂಡ ಬ್ರಹ್ಮಾ ಬಿಸರುಹನಾಭ ಲಕುಮಿ ಹನುಮಾ ರುದ್ರ ರುದ್ರಾಣಿ। ಋಷಿ ಗೌತುಮಾ ವಿಭಾಂಡಾ ಸ್ಕಾಂದ ಅಂತರಗಂಗೆ। ಬೆಸೆಸುವೆ ಭೈರವ ಪಾಪವಿನಾಶನ। ವಸುಧಿಯೊಳಗಿದ್ದ ಎಲ್ಲಾ ತೀರ್ಥಗಳಕ್ಕು। ಬೆಸನೆ ಲೋಕದ ಜನರು ಬಂದು ವಿಧಾನ ತಿಳಿದು। ಕುಶಲ ಮತಿಯಿಂದಾ ಸತ್ಕರ್ಮಾಚರಿಸಲು। ವಶವಾಗಿಪ್ಪರು ಸರ್ವದೇವತೆಗಳು। ವಿಷಯಗಳಲ್ಲಿ ಬಿದ್ದು ಕೆಟ್ಟುಪೋಗದೆ ರ-। ಕ್ಕಸ ಯೋಗ ಮಾಡದಿರಿ ಗತಿಗೆ ಮಾರ್ಗವಾಗದು। ಅಸುರ ವಿರೋಧಿ ನಮ್ಮ ವಿಜಯವಿಠ್ಠಲರೇಯ। ನಸು ನಗುತ ಗಂಡಿಕಿ ಶಿಲೆಯೊಳಗಿರುತಿಪ್ಪ।।

ಜತೆ

ಪರಮಾಯು ಸಿದ್ಧಿಪುದು ಮಾರ್ಕಂಡ್ಯ ಕ್ಷೇತ್ರ।
ನರಸಿಂಹಾನಂತಾ ವಿಜಯವಿಠ್ಠಲ ವಾಸಾ।



**ಆದಿ ಯುಗದಿ ಮಹ (ಸುಳಾದಿ)** **ರಾಗ: ನಾಟ, ಧ್ರುವತಾಳ**

ಆದಿ ಯುಗದಿ ಮಹ ಆದಿದೈತೇಯನೊಬ್ಬ। ಮೇದಿನಿಯೋಳ್ ಸ್ವರ್ಣಕಶ್ಯಪು ನಾಮದಿ। ಸಾಧಿಸಿ ಬಂದವಗೊಬ್ಬ ಸೋದರ ಸ್ವರ್ಣಾಂಬಕನೆನಿಸಿ। ಮೇದಿನಿ ಚೋರನಾಗಿ ಹತನಾದನು। ಆದಿಶೇಷನೆ ವಿಶ್ವಕ್ಸೇನ ತಾ-। ನಾದ ಪ್ರಹ್ಲಾದ ಪ್ರಾಣಾವೇಶದಿಂದ। ಸೋದರ ಜೀವಾಂಶಾಪಾನಾವಿಷ್ಟ ಸ-। ಹ್ಲಾದ ನಾಮಕ ಮಿತ್ರನಾದ ಕ। ಹ್ಲಾದ ವ್ಯಾನಾವೇಶದಿಂದ। ಮೋದದಿ ಸೋಮಾಂಶೋದಾ- ನಾಯುತ ನು-। ಹ್ಲಾದ ನಾಮಕ ಸಂಭೂತನಾದ। ಆದಿಗಣಪ ಸಮಾನಾವೇಶದಿಂದ। ಆದರೈವರಾದ್ಯತ್ಯಗೆ ಪುತ್ರರು। ಮೇದಿನಿ ಸುರರುದ್ಧಾರಗೋಸುಗ। ಆದಿದೈವ ನಾರೇಯಣ ತಾ। ನಾದಿಕಾರಣ ವಿಶ್ವಕರ್ತಾ। ಮೋದಾನಂದಮೂರುತಿ ಸುಗುಣ। ಬೋಧಪೂರ್ಣ ಸರ್ವಜ್ಞ ಸ್ವಾತಂತ್ರ। ವೇದಪುರಷಾದಿ ಜಡಾದಿ ಜಗಕೆ। ಆಧಾರ ಹರಿ ಎಂಬ ಜ್ಞಾನವ ಬೋಧಿಸಿ ಬೊಮ್ಮ ಮುಖರು ಹರಿ। ಪಾದಸೇವಕರೆನುತ ನಿತ್ಯ। ವಾದದಿ ವಾದಿಗಳ ಜಯಸಿದರವರ। ಪಾದಸೇವಿಸಿ ಕರುಣಾ ಪಡೆದು। ಆದಿ ಗುರು ಜಗನ್ನಾಥವಿಠಲನ್ನ। ಆದರದಲಿ ಭಜಿಸೆ ಪರಮ ಸುಖ।।

**ಅಸುರರ ಜನ್ಮದಿ ಪುಟ್ಟಿದ ಇವರಿಗೆ** **ರಾಗ – ಕಲ್ಯಾಣಿ, ಮಠ್ಯತಾಳ**

ಅಸುರರ ಜನ್ಮದಿ ಪುಟ್ಟಿದ ಇವರಿಗೆ। ಶ್ವಸನನ ಆವೇಶ ಸುರರಾವೇಶ ಬಲದಿ। ಅಸಮಜ್ಞಾನ ಭಕುತಿ ವಿರಾಗವು। ವಸುಧಿಯ ತಳದಿ ದಿನದಿನದಲ್ಲಿ। ಪಸರಿಪ ಸೂರ್ಯನ ಪ್ರಭೆಯಂದದಲಿ। ಮಿಸುಪದಕಿದೇ ಕಾರಣ ಉಂಟು। ಬಿಸಜಾಂಬಕ ಹರಿ ಪೇಳಿದ ಇವರಿಗೆ। ಅಸುರೇಶ ಹಿರಣ್ಯಕಶಪುವಿನಲ್ಲಿ। ಶಿಶುಭಾವದಿಂದ ಜನಿಸಲು ಪೋಗಿರಿ। ಪುಸಿಯಲ್ಲ

ಮಚ್ಚಾಪ। ಅಸುರಭಾವ ಪ್ರಹ್ಲಾದಾದ್ಯ। ರಸಮಮಹಿಮರಾಗೀ ಜನಿಸಿರೆಂದು। ಉಸಿರಿದ ವಾಕ್ಯವು ಪ್ರಮಾಣ ಸಿದ್ಧವೆನ್ನಿ। ವ್ಯಸನದಲ್ಲೈವರು ಹರಿಯನೆ ಮತ್ತೆ। ಬೆಸಗೊಂಡರೀಪರಿ ಪರಿಯಾ। ಅಸುರನ ಪತ್ನಿಯ ಬಸಿರೊಳು ಪುಟ್ಟುವುದು। ವಶವಲ್ಲವೋ ಸ್ವಾಮಿ। ಕುಸುಮನಾಭನೆ ನಿನ್ನ। ಅಸಮ ಲೋಕದ ಸುಖ ವಸುಧಿತಳಾದಲ್ಲಿ। ಎಸಗದು ಎಸಗದು ಎಂದಿನಕಾಲಕ್ಕೂ। ಮುಸಕುವುದಜ್ಞಾನ ದುಃಖದ ಭವದಲ್ಲಿ। ಕಸವಿಸಿಗೊಳುತಾ ಜ್ಞಾನವನೀಗಿ। ಬಿಸನಿಲಯನೆ ನಿನ್ನ ದರುಶನವಿಲ್ಲದೆ। ಅಸು ನಿಲ್ಲುವ ಬಗೆ ಯಾವುದು ಪೇಳೋ। ಶಶಿಧರವಂದ್ಯ ಗುರುಜಗನ್ನಾಥ ವಿಠಲ ನಮ್ಮ । ವ್ಯಸನವನು ಕಳೆದು ಸುಖವನು ಸಲಿಸೋ।।

**ಭಕುತ ವಾಕ್ಯವ ಲಾಲಿಸಿ ತಾನಾಗ** **ರಾಗ: ಕಾಂಬೋಧಿ, ತ್ರಿವಿಡಿತಾಳ**

ಭಕುತ ವಾಕ್ಯವ ಲಾಲಿಸಿ ತಾನಾಗ। ಲಕುಮಿರಮಣನು ಈಪರಿ ನುಡಿದನು। ವಿಕಳ ಪೊಂದದೆ ನೀವು ತ್ವರಿತಾದಿ ಧರೆಯೊಳು। ಸಕಲರು ಜನಿಸಲು ಮುಸುಕದಜ್ಞಾನ। ಲಕುಮಿ ಭೂಮಿಯ ಸಹಿತ ಇರುವೆನು ನಿಮ್ಮೊಳು। ವ್ಯಕುತನೆನಿಸಿ ನಿತ್ಯ ಪರಿಪರಿ ಮಹಿಮವ। ಪ್ರಕಟಮಾಡುವೆ ಮುಖ್ಯಪ್ರಾಣನಿಪ್ಪನು ಸತತ। ಕಕುಲಾತಿ ಯಾಕಿನ್ನು ನಡಿರೆಂದು ಹರಿಯೆಂದ। ಉಕುತ ವಾಕ್ಯದಲಿಂದ ದಿತಿಜನಲ್ಲಿ। ಸುಕೃತಿಗಳೈವರು ಉದಯವೈದಿದ- ರಾಗ। ಮುಕುತಿದಾಯಕ ಗುರುಜಗನ್ನಾಥವಿಠಲನೆಂಬ। ಭಕುತಿ ಪೂರ್ವಕ ಜ್ಞಾನವೃದ್ಧಿಯೈದಿದರು।।

**ಪಿರಿಯ ಪ್ರಹ್ಲಾದನ್ನ – ಕರದು ತೊಡೆಯ ಮೇಲೆ** **ರಾಗ: ಆರಭಿ, ಅಟ್ಟತಾಳ**

ಪಿರಿಯ ಪ್ರಹ್ಲಾದನ್ನ - ಕರದು ತೊಡೆಯ ಮೇಲೆ। ಇರಿಸಿ ಪ್ರೇಮದಿ ನಿಮ್ಮ - ಗುರುವೇನು ಪೇಳ್ಯಾನೆ। ಮರಿಯಾದೆ ಎನಮುಂದೆ - ಅರಹು ಎನಲು ಬಾಲ। ಕಿರಿನಗೆ ಮುಖದಿಂದ - ಹರಿಯೆ ಸರ್ವೋತ್ತಮ। ಹರಬೊಮ್ಮ ಮುಖರೆಲ್ಲ - ಪರಿವಾರ ಭೂತರು। ಅರಿದಿಪ್ಪೆ ಎನ್ನಯ್ಯ ಸರಸಿಜಜಾಂಡಕ್ಕೆ। ಅರಸು ತಾನಾಗಿದ್ದು ಇರುವಾದಿ ಚೇತನ। ತರುವಾದಿ ಜಡಮಯ ಸರ್ವಸ್ಥಳದಲ್ಲಿ। ನಿರುತದಿ ವ್ಯಾಪಿಸಿ ಇರುತಿಹ ಹರಿ ಎಂದು। ಅರಿತ ಮಾನವನಿಗೆ ದೊರೆವೋನು ನಿಶ್ಚಯ। ಅರಿತು ಪೇಳಿದ ತನ್ನ ತರಳಾನ ನುಡಿಕೇಳಿ। ಭರದಿಂದ ಕಂಬವ ಕರದಿಂದ ಬಡಿಯಾಲು। ನರಮೃಗಾಕಾರದಿ ಹೊರಗೆ ಬಂದಾದೈತ್ಯನು-। ದರವ ಬಗೆದು ಕರುಳಮಾಲೆಯ ತಾ। ಕೊರಳೊಳು ಧರಿಸಿದ ಚರಜನ ಪರಿಪಾಲ। ಬಿರುದು ಬೀರಿದ ನಮ್ಮ ಗುರುಜಗನ್ನಾಥವಿಠಲ। ಶರಣರ ಮರೆಯನೋ ಧರಿತಳದೊಳಗೆ।।

**ಈ ತೆರ ಪ್ರಹ್ಲಾದ ಹರಿಪಾದವ ಭಜಿಸಿ** **ರಾಗ: ಇಚ್ಛಾ, ಆದಿತಾಳ**

ಈ ತೆರ ಪ್ರಹ್ಲಾದ ಹರಿಪಾದವ ಭಜಿಸಿ। ಪ್ರೀತಿಯ ಪಡೆದು ಭೂಸುರಗಣಕೆ। ಭೂತಳದೊಳಗೆ ಯತಿಗಳ ಕುಲಕೆ। ನಾಥನು ವ್ಯಾಸಮುನಿ ಎನಿಸಿ ಮರಳಿ। ಖ್ಯಾತ ಶ್ರೀರಾಘವೇಂದ್ರನೆಂದೆನಿಸಿ। ಪ್ರೀತಿಯಿಂದಲಿ ಭಕ್ತರ ಪೊರೆಯಲು। ನೀತಿಭಾವದಲಿ ಯತಿಯಾಶ್ರಮ ಪೊಂದಿ। ಸೀತಾಪತಿರಾಮ ಯದುನಾಯಕಕೃಷ್ಣ। ಭೀತಿಹರ ನರಸಿಂಹ ವ್ಯಾಸರ ಭಜಿಸಿ। ದೂತರ ಮನೋರಥ ಪೂರ್ತಿಸಿ ಪೊರೆವನು। ದಾತ ಗುರು ಜಗನ್ನಾಥ ವಿಠಲನ್ನ। ನೀತವಿಭೂತಿಯ ಪಡೆದು ನಿರ್ಭೀತನಾಗಿಹನು।।

**ಜತೆ**

**ದೂತ ಜನರ ಮಹಾಪಾತಕ ಹರನೆನ್ನಿ।**

**ಪ್ರೀತ ಗುರು ಜಗನ್ನಾಥವಿಠಲನೊಲಿವ।।**

❖❖❖

**ಅಂಜುವೆ ನಾನೀ ಸಿಂಗದ ಮುಖದವ (ಸುಳಾದಿ)** **ಧ್ರುವತಾಳ**

ಅಂಜುವೆ ನಾನೀ ಸಿಂಗದ ಮುಖದವ। ಹುಂಕರಿಸುವಿ ಮರೆದೊಮ್ಮೊ ಮ್ಮೆ । ಅಂಜುವೆ ನಾನೀ ತೆರೆವಾಯ ತೆರವುತ।

ಗಹಿಗಹಿಸುವಿ ಮರೆದೊಮ್ಮೊಮ್ಮೆ। ಅಂಜುವೆ ನಾನೀ ಘುಡುಘುಡಿಸುತ ಕಿಡಿಗಳ್ಳರಗಿಸುವಿ ಒಮ್ಮೊಮ್ಮೆ। ಅಂಜುವೆ ನಾನೀ ಕಿವಿಯನುಳುಪಿ ಮೇಲೇ ಕವಿದೆರಗುವಿ ಮರೆದೊಮ್ಮೊಮ್ಮೆ। ಅಂಜುವೆ ನಾನೀ ಸಿರಿ ಮುದ್ದು ನರಸಿಂಹ ಪುರಂದರವಿಠಲ ನೀ ಉರಿಮಾರಿದೈವವೆಂದಂಜುವೆ॥1॥

**ಮಠ್ಯತಾಳ**

ಹಿರಣ್ಯ ಕಶುಪಿವಿನ್ನ ಉದರ ಬಗಿದ ಬಳಿಕ। ಕರಳುಮಾಲೆಯ ತೆಗೆದು ಕೊರಳೊಳಿಟ್ಟ ಬಳಿಕ। ಉರಿಯನುಗುಳಲೇತಕೆ ಸಿರಿಯ ನುಡಿಸದ್ಯಾತಕೆ। ಹರಬೊಮ್ಮಾದಿಗಳ ಸರಕು ಮಾಡದಿದ್ದ್ಯಾತಕೆ। ಸಿರಿಮುದ್ದು ನರಸಿಂಹ ಪುರಂದರವಿಠಲ। ಪ್ರಹ್ಲಾದ ದೇವ ಬಂದರೆ ನಿನಗೆದಿರಾರೀ ಜಗದೊಳು॥2॥

**ತ್ರಿವಿಡಿತಾಳ**

ಅಟ್ಟಹಾಸಕಬುಜಜಾಂಡ। ಕಟ್ಟಾಹ ಪ್ರತಿಧ್ವನಿಯಗೊಡುತಿರೆ। ಮೆಟ್ಟದಿಳೆ ತಲೆ ಕೆಳಗಾಗುತಿಲಿರೆ। ಬೆಟ್ಟಗಳುರುಳುರುಳಿ ಬೀಳುತಿರೆ। ಅಷ್ಟ ದಿಕ್ಕುಗಳ ಬೆಳಗುತಿರೆ। ದಿಟ್ಟ ಮುದ್ದು ನರಸಿಂಹ ಪುರಂದರ। ವಿಠಲ ನಿನಗೆದಿರಾರೀ ಜಗದೊಳು॥3॥

**ಅಟ್ಟತಾಳ**

ಉರಿಸಾಗರಗಳು ಸುರಿಯೆ ನಾಲಿಗೆಯಿಂದ। ಚರಾಚರಂಗಳು ಚಾರಿವರಿವುತಲಿರೆ। ಬ್ರಹ್ಮಾಂಡ ಒಂದೆ ಸಿಡಿದು ಹೋಗುತ್ತಿತ್ತು। ಬ್ರಹ್ಮ ಪ್ರಳಯವಂದಾಗಿ ಪೋಗುತ್ತಿತ್ತು। ಬ್ರಹ್ಮಾಂಡ ಒಂದೆ ಸಿಡಿದು ಹೋಗುತ್ತಿತ್ತು। ಸಿರಿ ಮುದ್ದು ನರಸಿಂಹ ಪುರಂದರ ವಿಠಲ ಪ್ರಹ್ಲಾದ ದೇವನು ನಿಲಿಸದಿರೆ॥4॥

**ಆದಿತಾಳ**

ಹಿರಣ್ಯಕಶ್ಯಪವಿನುದರ ಬಗಿದುಗರಿಲಿ। ಸರಸವಾಡಿದಿರಾ। ನರಹರಿ। ಸರಸವಾಡಿದಿರ ನಾನಂಜುವೆ। ಸರಸವಾಡಿದಿರ ಗರುಡಾಚಲವಾಸ। ಸಿರಿಮುದ್ದು ನರಸಿಂಹ ಪುರಂದರ ವಿಠಲ। ಮುರಹರ ವಂದಿತ ಸರಸವಾಡದಿರಿ ನಾನಂಜುವೆ॥5॥

**ಜತೆ**

**ಸಿರಿ ಮುದ್ದು ನರಸಿಂಹ ಪುರಂದರವಿಠಲ।**
**ಶರಣ ಪ್ರಹ್ಲಾದ ಸಂರಕ್ಷಕ ಜಯ ಜಯ॥**



**ಧರೆಯೊಳಗೆ ನಮ್ಮ ಗುರುರಾಘವೇಂದ್ರರಿನ್ನು (ಸುಳಾದಿ)** **ಧ್ರುವತಾಳ**

ಧರೆಯೊಳಗೆ ನಮ್ಮ ಗುರುರಾಘವೇಂದ್ರರಿನ್ನು। ಇರುತಿಪ್ಪ ವಿವರವ ಅರಿತಷ್ಟು ವರ್ಣಿಸುವೆ। ಸ್ಥಿರವಾಗಿ ಮಂತ್ರಾಲಯಪುರ ತುಂಗಾತೀರದಿ। ಹರಿಭಕ್ತ ಪ್ರಹ್ಲಾದ ವರಯಾಗ ಇಲ್ಲಿಮಾಡಿ। ಸುರರಿಗಮೃತ ಉಣಿಸಿ ಪರಿಪರಿ ಕ್ರಿಯೆಮಾಡಿ। ಪರಿಶುದ್ಧ ಆದೆನೆಂದು ಅರಿತು ಈ ಸ್ಥಳದಲ್ಲಿ। ಗುರುರಾಘವೇಂದ್ರರಾಯ ಶರೀರ ಪೋಗಾಡಿಸಿಲ್ಲಿ। ಪರಲೋಕ ಸಾಧನವ ಪರಿಪೂರ್ತಿ ಮಾಡಿಕೊಂಡು। ಸಿರಿಕೃಷ್ಣನ ಚರಣಕ್ಕೆರಗಿ ಸಂತೋಷದಲ್ಲಿ। ಧರೆಯ ಮೇಲಿದ್ದ ಜನರ ಪೊರೆಯಬೇಕೆಂದೆನಲು। ಹರಿನೋಡಿದನಿವರ ಪರಮದಯಾಳುತನವ। ಗುರುವಂತರ್ಯಾಮಿ -ಯಾಗಿ ವರವ ನೀಡಲು ಜಗಕೆ। ನರಹರಿ ತಾನೆ ನಿಂದು ನಿರುತ ಪೂಜೆಯಗೊಂಡು। ಸಿರಿವುಳ್ಳ ಕೀರುತಿಯ ಸುರರ ಪಾಲಕ ಚಕ್ರ-ಧರ ನಾರಾಯಣ ತಾನಿವರ ಸನ್ನಿಧಾನನಾಗಿ-ವರಿಗೆ ಫಲ ತಂದೀವ ಇಹಪರದಲ್ಲಿ ಇನ್ನು। ಕರುಣಾಕರ ರಂಗ ಗೋಪಾಲವಿಠಲ ತನ್ನ। ಶರಣರ ಪೊರೆವಂಥ ಚರಿಯ ಪರಿಪರಿವುಂಟು॥

### ತ್ರಿಪುಟ ತಾಳ

ನರಹರಿ ರೂಪನಾಗಿ ವಾಸವಾಗಿ ಇಲ್ಲಿ। ದುರಿತ ದುಷ್ಕೃತ ಬ್ರಹ್ಮ ತ್ಯಗಳ ದೂರೋಡಿಸುವ। ಸಿರಿರಾಮನಾಗಿ ವಾಸವಾಗಿ ಇಲ್ಲಿ। ಪರಿಪರಿಯಿಂದ ದೇಶಾಂತರ ಅನ್ನ ಕಳಕೊಂಡು। ನರರಿಲ್ಲಿ ಬಂದರೆ ಸ್ಥಿರಪಟ್ಟಗಟ್ಟುವ। ಸಿರಿಕೃಷ್ಣನಾಗಿ ವಾಸವಾಗಿ ಇಲ್ಲಿ। ಪರಿಪರಿಯಲ್ಲಿ ಬಂದ ಪರಮಾತುರರಿಗೆ। ವರವೀವ ಪುತ್ರೋತ್ಸವ ಮದುವೆ ಮುಂಜಿ। ಹರಕೆಗಳ ಕೈಕೊಂಡು ಹರುಷ ಬಡಿಸುವ। ವರ ವೇದವ್ಯಾಸನಾಗಿ ವಾಸವಾಗಿ ಇಲ್ಲಿ। ಭರದಿಂದಲಿ ಬಂದ ದುರ್ವಾದಿಗಳನೆಲ್ಲ। ದೂರ ಓಡಿಸಿ ಮುರಿದು ಅವರ ಕುಶಾಸ್ತ್ರವ। ಹರಿ ಸರ್ವೋತ್ತಮನೆಂದು ಇರುವನಿಲ್ಲಿ ತೋರಿ। ಶರಣ ಜನಕೆ ಇನ್ನು ವರಜ್ಞಾನ ಸುಧೆಯ। ಕರೆದು ಕೊಡುತ ಇರುತಿಪ್ಪವನಿಲ್ಲಿ। ಸಿರಿ ವಂದಿತ ಪಾದ ಗೋಪಾಲವಿಠಲ ಪರಿಪರಿಯಲಿ ಓಲಗ ಕೈಕೊಳುತಿಪ್ಪ॥



## ಸಂಸ್ಕೃತ ಸ್ತೋತ್ರಗಳು

### ನರಸಿಂಹ ಮಾಂ ರಕ್ಷ

ನರಸಿಂಹ ಮಾಂ ರಕ್ಷ, ನರಸಿಂಹ ಮಾಂ ರಕ್ಷ, ನರಸಿಂಹ ಮಾಂ ರಕ್ಷ ನಳಿನದಳಾಕ್ಷ॥ಪ॥ ಲೀಲ ವಿನೋದಿನಿ ಗಾಲವ ಪೋಷಕ। ಪಾಲಿತ ಹಿತಸುತಜ್ವಾಲಾ ನರಸಿಂಹ॥1॥ ಬಲಬಂಧು ತಲ್ಪ ನೀಲ, ಬಲವೈರಿ ಸೋದರ, ಬಲವೈರಿ ನುತ ಅಹೋಬಲನರಸಿಂಹ॥2॥ ಫಾಲಾಕ್ಷ ಕವಿಪಾಲ ಪ್ರಣೆತಮಾನುನಿಜಾಲ। ಮಾಲಿಕದರಮಾಲ ಲೋಲ ನರಸಿಂಹ॥3॥ ನೀಡೋದ್ಭವ ವಾಹ ವಡಬಾಸುಸ್ನೇಹ ವಡಬಾನಲಸಮ ಕ್ರೋಢ ನರಸಿಂಹ॥4॥ ಭಂಜಿತ ದಾನವರಂಜಿತ ನೂಪುರಕಂಜದಳಾಕ್ಷ ಕರಂಜನರಸಿಂಹ॥5॥ ಭರ್ಗವಿನುತ ಭೃತ್ಯವರ್ಗವಂದಿತ ದೈತ್ಯವರ್ಗ ಪ್ರತಾಪ ಭಾರ್ಗವ ನರಸಿಂಹ॥6॥ ಮಂದರಧರ ಗೋವಿಂದ ಮುಕುಂದಾನಂದ ನಂದನ ಯೋಗನರಸಿಂಹ ॥7॥ ನಿಟಿಲಾಕ್ಷ ಪೂಜಿತ ಚಟುಲವಿಕ್ರಮ ಸಂಸ್ಫುಟಿಕರ ವಿಷ ಚಕ್ರವಟ ನಾರಸಿಂಹ॥8॥ ಕನಕಾಂಬರಧಾರ ಕನಕಾಕ್ಷ ಸಂಹಾರ ವನದಿ ಗಂಭೀರ ಪಾವನ ನರಸಿಂಹ॥9॥

### ಯದ್ಧಿತಂ ತವ (ಶ್ರೀ ನರಸಿಂಹಾಷ್ಟಕಮ್)

ಯದ್ಧಿತಂ ತವ ಭಕ್ತಾನುಮಸ್ಮಾಕಂ ನೃಹರೇ ಹರೇ। ತದಾಶು ಕಾಯಂ ಕಾರ್ಯಜ್ಞ ಪ್ರಲಯಾರ್ಕಾಯುತಪ್ರಭ ॥1॥ ರಟತ್ಸಟೋಗ್ರಭ್ರುಕುಟೀ ಕಠೋರಕುಟಿಲೇಕ್ಷಣ ನೃಪಂಚಾಸ್ಯಜ್ವಲಜ್ವಾಲೋಜ್ವಲಾಸ್ಯಾರಿನ್ ಹರೇ ಹರ॥2॥ ಉನ್ನದ್ಧ ಕರ್ಣವಿನ್ಯಾಸ ವಿವೃತಾನನ ಭೀಷಣ। ಗತಧೂಷಣ ಮೇ ಶತ್ರೂನ್ ಹರೇ ನರಹರೇ ಹರ॥3॥ ಹರೇ ಶಿಖಿಶಿಖೋದ್ಭಾಸ್ವದುರಃಕ್ರೂರನಖೋತ್ಕರ। ಅರೀನ್ಸಂಹರ ದಂಷ್ಟ್ರೋಗ್ರಸ್ಫುರಜ್ಜಿಹ್ವ ನೃಸಿಂಹ ಮೇ॥4॥ ಜಠರಸ್ಥಜಗಜ್ಜಾಲ ಕರಕೋಟ್ಯುದ್ಯುತಾಯುಧ। ಕಟಿಕಲ್ಪತಟಿತ್ಕಲ್ಪವಸನಾರೀನ್ ಹರೇ ಹರ॥5॥ ರಕ್ಷೋಧ್ಯಕ್ಷಬೃಹದ್ವಕ್ಷೋರೂಕ್ಷ ಕುಕ್ಷಿ ವಿದಾರಣ। ನರಹರ್ಯಕ್ಷ ಮೇ ಶತ್ರುಪಕ್ಷ ಕಕ್ಷಂ ಹರೇ ದಹ॥6॥ ವಿಧಿಮಾರುತ ಶರ್ವೇಂದ್ರ ಪೂರ್ವ ಗೀರ್ವಾಣಪುಂಗವೈ। ಸದಾ ನತಾಂಘ್ರಿದ್ವಂದ್ವಾರೀನ್ನರಸಿಂಹ ಹರೇ ಹರ॥7॥ ಭಯಂಕರೋರ್ವಲಂಕಾರ ವರಹುಂಕಾರ- ಗರ್ಜಿತ। ಹರೇ ನರಹರೇ ಶತ್ರೂನ್ಮಮಸಂಹರ ಸಂಹರ ॥8॥ ವಾದಿರಾಜಯತಿಪ್ರೋಕ್ತ ಮೇವಂ ಹರ್ಯಷ್ಟಕಂ ನವಮ್। ಪಠನ್ನೃಸಿಂಹಕೃಪಯಾ ರಿಪೂನ್ಸಂಹರತಿ ಕ್ಷಣಾತ್॥

॥ ಇತಿ ವಾದಿರಾಜೋಕ್ತಮ್ ನೃಸಿಂಹಾಷ್ಟಕಮ್ ಸಂಪೂರ್ಣಂ ॥

### ಧ್ಯಾಯಾಮಿ ನಾರಸಿಂಹಾಖ್ಯಂ (ಶ್ರೀ ನೃಸಿಂಹಾಷ್ಟಕಂ)

ಧ್ಯಾಯಾಮಿ ನಾರಸಿಂಹಾಖ್ಯಂ ಬ್ರಹ್ಮ ವೇದಾಂತಗೋಚರಂ। ಭವಾಬ್ಧಿ ತರಣೋಪಾಯಂ ಶಂಖಚಕ್ರಧರಂ ಪದಮ್॥ ನೀಳಾಂ ರಮಾಂ ಚ ಪರಿಭೂಯ ಕೃಪಾರನೇನ। ಸ್ತಂಭೇ ಸ್ವಶಕ್ತಿ ಮನಘಾಂ ವಿನಿಧಾಯದೇವ। ಪ್ರಹ್ಲಾದರಕ್ಷಣ ವಿಧಾಯಪತಿ ಕೃಪಾತೇ। ಶ್ರೀನಾರಸಿಂಹ ಪರಿಪಾಲಯಮಾಂಚಭಕ್ತಮ್॥1॥ ಇಂದ್ರಾದಿದೇವ ನಿಕರಸ್ಯ ಕಿರೀಟಕೋಟಿ। ಪ್ರತ್ಯುಪ್ತರತ್ನ

ಪ್ರತಿಬಿಂಬಿತ ಪಾದಪದ್ಮ। ಕಲ್ಪಾಂತ ಕಾಲ ಘನಘರ್ಜನ ತುಲ್ಯನಾದ। ಶ್ರೀನಾರಸಿಂಹ ಪರಿಪಾಲಯ ಮಾಂಚಭಕ್ತಮ್॥2॥ ಪ್ರಹ್ಲಾದ ಈಡ್ಯ ಪ್ರಳಯಾರ್ಕ ಸಮಾನವಕ್ತ್ರ। ಹುಂಕಾರ ನಿರ್ಜಿತ ನಿಶಾಚರ ಬೃಂದನಾತ। ಶ್ರೀನಾರದಾದಿ ಮುನಿಸಂಘ ಸುಗೀಯಮಾನ। ಶ್ರೀನಾರಸಿಂಹ ಪರಿಪಾಲಯ ಮಾಂಚಭಕ್ತಮ್॥3॥ ರಾತ್ರಿಂಚರಾ ದ್ರಿಜಟರಾತ್ವರಿ- ಸ್ರಂಸ್ಯಮಾನ। ರಕ್ತಂನಿಪೀಯ ಪರಿಕಲ್ಪಿತಸಾಂತ್ರಮಾಲ। ವಿದ್ರಾವಿತಾಖಿಲಸುರೋಗ್ರ ನೃಸಿಂಹರೂಪ। ಶ್ರೀನಾರಸಿಂಹ ಪರಿಪಾಲಯ ಮಾಂಚಭಕ್ತಮ್॥4॥ ಯೋಗೀಂದ್ರ ಯೋಗ ಪರಿರಕ್ಷಕದೇವದೇವ। ದೀನಾರ್ತಹಾರಿ ವಿಭವಾಗಮ ಗೀಯಮಾನ। ಮಾಂ ವೀಕ್ಷ್ಯದೀನಮಶರಣ್ಯಮಗಣ್ಯ ಶೀಲ। ಶ್ರೀನಾರಸಿಂಹ ಪರಿಪಾಲಯ ಮಾಂಚಭಕ್ತಮ್॥5॥ ಪ್ರಹ್ಲಾದ ಶೋಕ ನಿವಾರಣ ಭದ್ರಸಿಂಹ। ನಕ್ತಂಚರೇಂದ್ರ ಮದಖಂಡನ ವೀರಸಿಂಹ। ಇಂದ್ರಾದಿ ದೇವಜನ ಸನ್ನುತ ಪಾದಪದ್ಮ। ಶ್ರೀನಾರಸಿಂಹ ಪರಿಪಾಲಯ ಮಾಂಚಭಕ್ತಮ್॥6॥ ತಾಪತ್ರಯಾಬ್ಧಿ ಪರಿಶೋಷಣ ಬಾಡಬಾಗ್ನೇ। ತಾರಾಧಿಪ ಪ್ರತಿನಿಬಾನನ ದಾನವಾರೇ। ಶ್ರೀರಾಜ ರಾಜ ವರದಾಖಿಲ ಲೋಕನಾಥ। ಶ್ರೀನಾರಸಿಂಹ ಪರಿಪಾಲಯ ಮಾಂಚಭಕ್ತಮ್॥7॥ ಜ್ಞಾನೇನ ಕೇಚಿದವಲಂಬ್ಯ ಪದಾಂಬುಜಂತೇ। ಕೇಚಿತ್ಸುಕರ್ಮನಿಕ ರೇಣು ಪರೇಚಭಕ್ತ್ಯಾ। ಮುಕ್ತಿಂ ಗತಾಃ ಖಲು ಜನಾ ಕೃಪಯಾ ಮುರಾರೇ। ಶ್ರೀನಾರಸಿಂಹ ಪರಿಪಾಲಯ ಮಾಂಚಭಕ್ತಮ್॥8॥ ನಮಸ್ತೇ ನಾರಸಿಂಹಾಯ ನಮಸ್ತೇ ಮಧುವೈರಿಣೇ। ನಮಸ್ತೇ ಪದ್ಮ ನೇತ್ರಾಯ ನಮಸ್ತೇ ದುಃಖಹಾರಿಣೇ॥

**ಭೋ ಖಂಡಂ ವಾರಣಾಂಡಂ (ಶ್ರೀನರಸಿಂಹಾಷ್ಟಕಮ್)**

ಭೋ ಖಂಡಂ ವಾರಣಾಂಡಂ ಪರವರವಿರಟ್ಟಂ ಡಂಪಡಂಪೋ- ರುಡಂಪಂ। ಡಿಂಡಿಂಡಿಂಡಿಂ ಡಿಡಿಂಬಂ ದಹಮಪಿ ದಹಮ್ಮೈರ್ಝಂಪ- ಝಂಪೈಶ್ಚ ಝಂಪೈಃ॥ ತುಲ್ಯಾಸ್ತುಲ್ಯಾಸ್ತುತುಲ್ಯಾಃ ಧುಮುಧುಮು- ಧುಮುಕ್ಯೈಃ ಕುಂಕುಮಾಂಕ್ಯೈಃ ಕುಮಾಂಕೈಃ। ಏತತ್ತೇ ಪೂರ್ಣಯುಕ್ತಂ ಅಹರಹಕರಹಃ ಪಾತು ಮಾಂ ನಾರಸಿಂಹಃ॥1॥ ಭೂಭೃದ್ಭೂ-ಭೃದ್ಭುಜಂಗಂ ಪ್ರಲಯರ-ವವರಂ ಪ್ರಜ್ವಲದ್ ಜ್ವಾಲಮಾಲಮ್। ಖರ್ಜರ್ಜಂ ಖರ್ಜದುರ್ಜಂ ಕಖಚಖಚಖಚಿತ್ಖರ್ಜದುರ್ಜರ್ಜಯಂತಂ॥ ಭೂ ಭಾಗಂ ಭೋಗಭಾಗಂ ಗಗಗಗಗಗನಂ ಗರ್ದಮತ್ಯು- ಗ್ರಗಂಡಂ। ಸ್ವಚ್ಛಂ ಪುಚ್ಛಂ ಸ್ವಗಚ್ಛಂ ಸ್ವಜನಜನನುತಃ ಪಾತು ಮಾಂ ನಾರಸಿಂಹಃ॥2॥ ಏನಾಭ್ರಂ ಗರ್ಜಮಾನಂ ಲಘುಲಘು ಮಕರೋ ಬಾಲಚಂದ್ರಾರ್ಕದಂಷ್ಟ್ರಂ। ಹೇಮಾಂಭೋಜಂ ಸರೋಜಂ ಜಟಜಟ- ಜಟಿಲೋ ಜಾಡ್ಯಮಾನಸ್ತು ಭೀತಿಃ॥ ದಂತಾನಾಂ ಬಾಧಮಾನಾಂ ಖಗಟಖಗಟವೋ ಭೋಜಜಾನುಸ್ಸುರೇಂದ್ರೋ। ನಿಷ್ಪತ್ಯೂಹಂ ಸ ರಾಜಾ ಗಹಗಹಗಹತಃ ಪಾತು ಮಾಂ ನಾರಸಿಂಹಃ॥3॥ ಶಂಖಂ ಚಕ್ರಂ ಚ ಚಾಪಂ ಪರಶುಮಶಮಿಷಂ ಶೂಲಪಾಂಶಾಂಕುಶಾಸ್ತ್ರಂ। ಭಿಭ್ರಂತಂ ವಜ್ರಖೇಟಂ ಹಲಮುಸುಲಗದಾಕುಂತಮತ್ಯುಗ್ರ-ದಂಷ್ಟ್ರಂ॥ಜ್ವಾಲಾಕೇಶಂ ತ್ರಿನೇತ್ರಂ ಜ್ವಲದನಿಲನಿಭಂ ಹಾರಕೇಯೂರಭೂಷಮ್। ವಂದೇ ಪ್ರತ್ಯೇಕರೂಪಂ ಪರಪದನಿವಸಃ ಪಾತು ಮಾಂ ನಾರಸಿಂಹಃ॥4॥ ಪಾದದ್ವಂದ್ವಂ ಧರಿತ್ರೀ ಕಟಿವಿಪುಲತರೋ ಮೇರುಮಧ್ಯೂಡ್ವಮೂರುಮ್। ನಾಭಿಬ್ರಹ್ಮಾಂಡ ಸಿಂಧುಃ ಹೃದಯ-ಮಪಿಭವೋ ಭೂತವಿದ್ವತ್ಸಮೇತಃ॥ ದುಶ್ಚಕ್ರಾಕಂ ಸ್ವಬಾಹುಂ ಕುಲಿಶನಖಮುಖಂ ಚಂದ್ರಸೂರ್ಯಾಗ್ನಿನೇತ್ರಂ। ವಕ್ತ್ರಂ ವನ್ಹಿಸ್ಸುವಿದ್ಯುತ್ಸುರಗಣವಿಜಯಃ ಪಾತು ಮಾಂ ನಾರಸಿಂಹಃ ॥5॥ ನಾಸಗ್ರಂ ಪೀನಗಂಡಂ ಪರಬಲ- ಮಥನಂ ಬದ್ಧ ಕೇಯೂರಹಾರಂ। ರೌದ್ರಂ ದಂಷ್ಟ್ರಾಕರಾಲಂ ಅಮಿತ ಗುಣಗಣಂ ಕೋಟಿಸೂರ್ಯಾಗ್ನಿನೇತ್ರಂ॥ ಗಾಂಭೀರ್ಯಂ ಪಿಂಗಲಾಕ್ಷಂ ಭ್ರಕುಟಿತವಿಮುಖಂ ಷೋಡಶಾರ್ಧಾರ್ಧ ಬಾಹುಂ। ವಂದೇ ಭೀಹಾಟ್ಟಹಾಸಂ ತ್ರಿಭುವನವಿಜಯಃ ಪಾತು ಮಾಂ ನಾರಸಿಂಹಃ॥6॥ ಕೇಕೇ ನೃಸಿಂಹಾಷ್ಟಕೇ ನರವರಸದೃಶಂ ದೇವ ಭೀತ್ವಂ ಗೃಹೀತ್ವಾ। ದೇವಂದ್ಯೋ ವಿಪ್ರದುಂದುಂ ಪ್ರತಿವಚನ- ಪಯಾಯಾಮ್ಯನ- ಪ್ರತ್ಯನೈಷೀಃ। ಶಾಪಂ ಚಾಪಂ ಚ ಖಡ್ಗಂ। ಪ್ರಹಸಿತ- ವದನಂ ಚಕ್ರಚಕ್ರೀಚಕೇನ। ಓಮಿತ್ಯೇದೈತ್ಯನಾದಂ ಪ್ರಕಚವಿವಿದುಷಾ ಪಾತು ಮಾಂ ನಾರಸಿಂಹಃ ॥7॥ ಝುಂಝುಂಝುಂ- ಝುಂಝುಕಾರಂ ಝುಷಝುಷ-ಝುಷಿತಂ ಜಾನುದೇಶಂ ಝುಕಾರಂ। ಹುಂಹುಂಹುಂಹುಂ ಹಕಾರಂ ಹರಿತಕಹ ಹಸಾಯಂದಿಶೇವಂ ವಕಾರಂ॥ ವಂವಂವಂವಂ ವಕಾರಂ ವದನ ದಲಿತತಂ ವಾಮಪಕ್ಷಂ ಸುಪಕ್ಷಂ। ಲಂಲಂಲಂಲಂ ಲಕಾರಂ ಲಘುವಣ ವಿಜಯಃ ಪಾತು ಮಾಂ ನಾರಸಿಂಹಃ॥8॥ ಭೂತಪ್ರೇತ- ಪಿಶಾಚ ಯಕ್ಷಗಣಶಃ ದೇಶಾಂತರೋಚ್ಚಾಟ- ನಾತ್। ಚೋರವ್ಯಾಘ್ರಮಹ- ಜ್ವರಂ ವಿಪಹರಂ ಶತ್ರುಕ್ಷಯಂ ನಿಶ್ಚಯಂ॥ ಸಂಧ್ಯಾಕಾಲಜಪಂತ- ಮಷ್ಟಕಮಿದಂ

ಸದ್ಭಕ್ತಿಭೂರ್ವಾಧಿಭಿಃ। ಪ್ರಹ್ಲಾದದೇವವರೋ ವರಸ್ತು ಜಯಿತಾ ಸತ್ಪೂಜಿತಾಂ ಭೂತಯೇ॥9॥

**ಶ್ರೀಮತ್ಪಯೋನಿಧಿನಿಕೇತನ (ಶ್ರೀ ಲಕ್ಷ್ಮೀನೃಸಿಂಹ ಸ್ತೋತ್ರಮ್)**

ಶ್ರೀಮತ್ಪಯೋನಿಧಿನಿಕೇತನ ಚಕ್ರಪಾಣೇ। ಭೋಗೀಂದ್ರಭೋಗಮಣಿ ರಂಜಿತ ಪುಣ್ಯಮೂರ್ತೇ। ಯೋಗೀಶ ಶಾಶ್ವತ ಶರಣ್ಯ ಭವಾಬ್ಧಿಪೋತ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥1॥ ಬ್ರಹ್ಮೇಂದ್ರರುದ್ರಮರುದರ್ಕಕಿರೀಟಕೋಟಿಸಂಘಟ್ಟಿತಾಂಘ್ರಿ ಕಮಲಾಮಲಕಾಂತಿಕಾಂತ। ಲಕ್ಷ್ಮೀಲಸತ್ಕುಚಸರೋರುಹರಾಜಹಂಸ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥2॥ ಸಂಸಾರದಾವದಹನಾತುರಭೀಕರೋರುಜ್ವಾಲಾವ- ಲೀಭಿರತಿದಗ್ಧ ತನೂರುಹಸ್ಯ। ತ್ವತ್ಪಾದಪದ್ಮ ಸರಸೀರುಹಮಾಗತಸ್ಯ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥3॥ ಸಂಸಾರಜಾಲ- ಪತಿತಸ್ಯ ಜಗನ್ನಿವಾಸ। ಸರ್ವೇಂದ್ರಿಯಾರ್ಥಬಡಿಶಾಗ್ರಝಷೋಪಮಸ್ಯ। ಪ್ರೋತ್ಕಂಪಿತಪ್ರಚುರ- ತಾಲುಕಮಸ್ತಕಸ್ಯ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥4॥ ಸಂಸಾರಕೂಪ- ಮತಿಘೋರಮಗಾಧಮೂಲಂ। ಸಂಪ್ರಾಪ್ಯ ದುಃಖಶತಸರ್ಪಸಮಾಕುಲಸ್ಯ। ದೀನಸ್ಯ ದೇವ ಕೃಪಯಾ ಪದಮಾಗತಸ್ಯ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥5॥ ಸಂಸಾರ- ಭೀಕರಕರೀಂದ್ರ ಕರಾಭಿಘಾತನಿಷ್ಪಿಷ್ಟಮರ್ಮವಪುಷಃ ಸಕಲಾರ್ತಿ- ನಾಶ। ಪ್ರಾಣಪ್ರಯಾಣ- ಭವಭೀತಿಸಮಾಕುಲಸ್ಯ। ಲಕ್ಷ್ಮೀ ನೃಸಿಂಹ ಮಮ ದೇಹಿ ಕರಾವಲಂಬಮ್॥6॥ ಸಂಸಾರಸರ್ಪ ಘನವಕ್ತ್ರಭಯೋಗ್ರತೀವ್ರದಂಷ್ಟ್ರಾಕರಾಲವಿಷದಗ್ಧವಿನಷ್ಟಮೂರ್ತೇಃ। ನಾಗಾರಿವಾಹನ ಸುಧಾಬ್ಧಿ ನಿವಾಸ ಶೌರೇ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥7॥ ಸಂಸಾರವೃಕ್ಷಮಘಬೀ- ಮನಂತಕರ್ಮಶಾಖಾಶತಂ ಕರಣಪತ್ರ ಮನಂಗಪುಷ್ಪಮ್। ಆರುಹ್ಯ ದುಃಖಫಲಿತಂ ಪತತೋ ದಯಾಲೋ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥8॥ ಸಂಸಾರಸಾಗರ- ವಿಶಾಲಕರಾಲಕಾಲನಕ್ರಗ್ರಹಗ್ರಸನನಿಗ್ರಹವಿಗ್ರಹಸ್ಯ। ವ್ಯಗ್ರಸ್ಯ ರಾಗನಿಚಯೋರ್ಮಿನಿಪೀಡಿತಸ್ಯ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥9॥ ಸಂಸಾರಸಾಗರ ಮಜ್ಜನಮುಹ್ಯಮಾನಂ। ದೀನಂ ವಿಲೋಕಯ ವಿಭೋ ಕರುಣಾನಿಧೇಮಾಮ್। ಪ್ರಹ್ಲಾದಖೇದಪರಿಹಾರಪರಾವತಾರ। ಲಕ್ಷ್ಮೀ- ನೃಸಿಂಹ ಮಮ ದೇಹಿ ಕರಾವಲಂಬಮ್॥10॥ ಸಂಸಾರಘೋರಗಹನೇ ಚರತೋ ಮುರಾರೇ। ಮಾರೋಗ್ರಭೀಕರಮೃಗಪ್ರಚುರಾರ್ದಿತಸ್ಯ। ಆರ್ತಸ್ಯ ಮತ್ಸರನಿದಾಘಸುದುಃಖಿತಸ್ಯ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥11॥ ಬದ್ಧ್ವಾಗಲೇ ಯಮಭಟಾ ಬಹುರ್ಜ -ಯಂತಃ । ಕರ್ಷಂತಿ ಯತ್ರ ಭವಪಾಶಶತೈರ್ಯುತಂ ಮಾಮ್। ಏಕಾಕಿನಂ ಪರವಶಂ ಚಕಿತಂ ದಯಾಲೋ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥12॥ ಲಕ್ಷ್ಮೀಪತೇ ಕಮಲನಾಭ ಸುರೇಶ ವಿಷ್ಣೋ। ಯಜ್ಞೇಶ ಯಜ್ಞಮಧುಸೂದನ ವಿಶ್ವರೂಪ। ಬ್ರಹ್ಮಣ್ಯ ಕೇಶವ ಜನಾರ್ದನ ವಾಸುದೇವ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥13॥ ಏಕೇನ ಚಕ್ರಮಪರೇಣ ಕರೇಣ ಶಂಖ-ಮನ್ಯೇನ ಸಿಂಧುತನಯಾಮವಲಂಬ್ಯತಿಷ್ಠನ್। ವಾಮೇ ಕರೇಣ ವರದಾಭಯ- ಪದ್ಮ ಚಿಹ್ನಂ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥14॥ ಅಂಧಸ್ಯ ಮೇ ಹೃತವಿವೇಕಮಹಾಧನಸ್ಯ। ಚೋರೈಃಪ್ರಭೋ ಬಲಿಭಿರಿಂದ್ರಿಯನಾಮಧೇಯೈಃ। ಮೋಹಾಂಧ- ಕೂಪ ಕುಹರೇ ವಿನಿಪಾತಿತಸ್ಯ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್॥15॥ ಪ್ರಹ್ಲಾದನಾರದಪರಾಶರಪುಂಡರೀಕವ್ಯಾಸಾದಿಭಾಗವತಪುಂಗವಹೃನ್ನಿವಾಸ। ಭಕ್ತಾನುರಕ್ತ ಪರಿ- ಪಾಲನಪಾರಿಜಾತ। ಲಕ್ಷ್ಮೀನೃಸಿಂಹ ಮಮ ದೇಹಿ ಕರಾವಲಂಬಮ್ ॥16॥ ಲಕ್ಷ್ಮೀನೃಸಿಂಹ ಚರಣಾಬ್ಜ ಮಧುವ್ರತೇನ। ಸ್ತೋತ್ರಂ ಕೃತಂ ಶುಭಕರಂ ಭುವಿ ಶಂಕರೇಣ। ಯೇ ತತ್ಪಠಂತಿ ಮನುಜಾ ಹರಿಭಕ್ತಿ- ಯುಕ್ತಾ-। ಸ್ತೇಯಾಂತಿ ತತ್ಪದಸರೋಜಮಖಂಡರೂಪಮ್॥

**ಪ್ರಲಯರವಿಕರಾಲಾಕಾರರುಕ್ಚಕ್ರವಾಲಂ (ಶ್ರೀ ನೃಸಿಂಹ ಸ್ತುತಿಃ)**

ಪ್ರಲಯರವಿಕರಾಲಾಕಾರರುಕ್ಚಕ್ರವಾಲಂ। ವಿರಲಯದುರುರೋಚೀರೋಚಿತಾ ಶಾಂತರಾಲ। ಪ್ರತಿಭಯತಮಕೋ ಪಾತ್ಯುತ್ಕಟೋಚ್ಚಾಟ್ಟಹಾಸಿನ್। ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥1॥ ಸರಸರಭಸಪಾದಾ

ಪಾತಭಾರಾಭಿರಾವಪ್ರಚಕಿತಚಲಪ್ತದ್ವಂದ್ವಲೋಕಸ್ತುತಸ್ತ್ವಮ್। ರಿಪು- ರುಧಿರನಿಷೇಕೇಣೇವ ಶೋಣಾಂಘ್ರಿಶಾಲಿನ್। ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥2॥ ತವ ಘನಘನಘೋಷೋ ಘೋರಮಾಘ್ರಾಯ ಜಂಘಾ-ಘುಪರಿಘಮಲಘುಮೂರು ವ್ಯಾಜತೇಜೋಗಿರಿಂ ಚ। ಘನವಿಘಟಿತ ಮಾಗಾದ್ದೈತ್ಯಜಂಘಾಲಸಂಘೋ। ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥3॥ ಕಟಕಿಕಟಕರಾಜದ್ಧಾಟಕಾಗ್ರ್ಯಸ್ಥಲಾಭಾ। ಪ್ರಕಟಪಟತಟಿತ್ ತೇ ಸತ್ಕಟಿಸ್ಥಾತಿಪಟ್ವೀ। ಕಟುಕಕಟುಕದುಷ್ಟಾಟೋಪದೃಷ್ಟಿಪ್ರಮುಷ್ಟೌ। ದಹ ದಹ ನರಸಿಂಹಾಸ- ಹ್ಯವೀರ್ಯಾಹಿತಂ ಮೇ॥4॥ ಪ್ರಖರನಖರವಜ್ರೋತ್ಖಾತ ರೂಕ್ಷಾರಿವಕ್ಷಃಶಿಖರಿಶಿಖರ- ರಕ್ತೈರಾಕ್ತಸಂದೋಹದೇಹ। ಸುವಲಿಭ ಶುಭಕುಕ್ಷೇ ಭದ್ರ ಗಂಭೀರನಾಭೇ। ದಹ ದಹ ನರಸಿಂಹಾಸಹ್ಯ- ವೀರ್ಯಾಹಿತಂ ಮೇ॥5॥ ಸ್ಫುರಯತಿ ತವ ಸಾಕ್ಷಾತ್ ಸೈವ ನಕ್ಷತ್ರಮಾಲಾ। ಕ್ಷಪಿತದಿತಿಜ- ವಕ್ಷೋವ್ಯಾಪ್ತನಕ್ಷತ್ರಮಾರ್ಗಮ್। ಅರಿದರಧರ ಜಾನ್ವಾಸಕ್ತಹಸ್ತ- ದ್ವಯಾಹೋ ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥6॥ ಕಟುವಿಕಟಸಟೌ- ಘೋದ್ಘಟ್ಟನಾದ್ಭ್ರಷ್ಟ- ಭೂಯೋ। ಘನಪಟಲವಿಶಾಲಾಕಾಶಲಬ್ಧಾವಕಾಶಮ್ ಕರಪರಿಘವಿಮರ್ದಪ್ರೋದ್ಯಮಂಧ್ಯಾಯ- ತಸ್ತೇ । ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥7॥ ಹಠಲುಠದಲಘಿಷ್ಠೋತ್ಕಂಠ ದಷ್ಟೋಷ್ಠ ವಿದ್ಯುತ್ಸಟ ಶಠಕಠಿನೋರಃ ಪೀಠಭಿತ್ ಸುಷ್ಠು ನಿಷ್ಠಾಮ್। ಪಠತಿ ನು ತವ ಕಂಠಾಧಿಷ್ಠಘೋರಾಂತ್ರಮಾಲಾ। ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥8॥ ಹೃತಬಹುಮಿಹಿರಾಭಾಸಹ್ಯಸಂಹಾರರಂಹೋಹುತ-ವಹಬಹುಹೇತಿಹ್ರೇಪಿಕಾನಂತಹೇತಿ। ಅಹಿತವಿಹಿತಮೋಹಂಸಂವಹನ್ ಸೈಂಹಮಾಸ್ಯಂ। ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥9॥ ಗುರುಗುರುಗಿರಿರಾಜತ್ಕಂದರಾಂತರ್ಗತೇ ವಾ। ದಿನಮಣಿಮಣಿಶೃಂಗೇ ವಾಂತವಹ್ನಿ- ಪ್ರದೀಪ್ತೇ। ದಧದತಿಕಟುದಂಷ್ಟ್ರೇ ಭೀಷಣೋಜ್ಜಿಹ್ವವಕ್ತ್ರೇ। ದಹ ದಹ ನರಸಿಂಹಾಸಹ್ಯ- ವೀರ್ಯಾಹಿತಂ ಮೇ॥10॥ ಅಧರಿತವಿಬುಧಾಬ್ಧಿ ಧ್ಯಾನಧೈರ್ಯಂ ವಿದೀಧ್ಯದ್ವಿವಿಧವಿಬುಧ- ಧೀಶ್ರದ್ಧಾಪಿತೇಂದ್ರಾರಿನಾಶಮ್। ವಿದಧದತಿಕಟಾಹೋದ್ಘಟ್ಟನೇದ್ಧಾಟ್ಟ ಹಾಸಂ। ದಹ ದಹ ನರಸಿಂಹಾಸಹ್ಯವೀಯಾಹಿತಂ ಮೇ॥11॥ ತ್ರಿಭುವನತೃಣಮಾತ್ರ ತ್ರಾಣತೃಷ್ಣಂ ತು ನೇತ್ರತ್ರಯಮತಿ -ಲಘಿತಾರ್ಚಿರ್ವಿಷ್ಟ ಪಾವಿಷ್ಟಪಾದಮ್। ನವತರರವಿ- ತಾಮ್ರಂ ಧಾರಯನ್ ರೂಕ್ಷವೀಕ್ಷಂ। ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥12॥ ಭ್ರಮದಭಿಭವಭೂ ಭೃದ್ಭೂರಿಭೂಭಾರಸದ್ಭಿ -ದ್ಭಿದನವ ವಿಭವಭ್ರೂವಿಭ್ರಮಾದಭ್ರಶುಭ್ರ। ಋಭುಭವಭಯಭೇತ್ತರ್ಭಾಸಿ ಭೋ ಭೋ ವಿಭೋऽಭೀ ರ್ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ ॥13॥ ಶ್ರವಣಖಚಿತಚಂಚತ್ಕುಂಡ -ಲೋಚ್ಚಂಡಗಂಡಭ್ರುಕುಟಿಕಟುಲಲಾಟ ಶ್ರೇಷ್ಠನಾಸಾರುಣೋಷ್ಠ। ವರದ ಸುರದ ರಾಜತ್ಕೇಸರೋ- ತ್ಸಾರಿತಾರೇ। ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥14॥ ಪ್ರವಿಕಚಕಚರಾಜದ್ರತ್ನ- ಕೋಟೀರಶಾಲಿನ್। ಗಲಗತಗಲದು ಸ್ರೋದಾರರತ್ನಾಂಗದಾಢ್ಯ। ಕನಕಕಟಕ- ಕಾಂಚೀಸಿಂಜಿನೀ- ಮುದ್ರಿಕಾವನ್। ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥115। ಅರಿದರಮಸಿಖೇಟೌ ಬಾಣಚಾಪೇ ಗದಾಂ ಸನ್ಮುಸಲಮಪಿ ಕರಾಭ್ಯಾಮಂಕುಶಂ ಪಾಶವರ್ಯಮ್। ಕರಯುಗಲಧೃತಾಂತ್ರ -ಸ್ರಗ್ವಿಭಿನ್ನಾರಿವಕ್ಷೋ। ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥16॥ ಚಟ ಚಟ ಚಟ ದೂರಂ ಮೋಹಯ ಭ್ರಾಮಯಾರೀನ್। ಕಡಿಕಡಿಕಡಿ ಕಾಯಂ ಜ್ವಾರಯ ಸ್ಫೋಟಯಸ್ವ। ಜಹಿ ಜಹಿ ಜಹಿ ವೇಗಂ ಶಾತ್ರವಂ ಸಾನುಬಂಧಂ। ದಹ ದಹ ನರಸಿಂಹಾಸಹ್ಯವೀರ್ಯಾಹಿತಂ ಮೇ॥17॥ ವಿಧಿಭವ- ವಿಬುಧೇಶ ಭ್ರಾಮಕಾಗ್ನಿಸ್ಫುಲಿಂಗ-। ಪ್ರಸವಿವಿಕಟದಂಷ್ಟ್ರೋಜ್ಜಿ ಹ್ವವಕ್ತ್ರ ತ್ರಿನೇತ್ರ। ಕಲ ಕಲ ಕಲ ಕಾಮಂ ಪಾಹಿ ಮಾಂ ತೇ ಸುಭಕ್ತಂ। ದಹ ದಹ ನರಸಿಂಹಾಸಹ್ಯ ವೀರ್ಯಾಹಿತಂ ಮೇ॥18॥ ಕುರು ಕುರು ಕರುಣಾಂ ತಾಂ ಸಾಂಕುರಾಂ ದೈತ್ಯಪೋತೇ। ದಿಶ ದಿಶ ವಿಶದಾಂ ಮೇ ಶಾಶ್ವತೀಂ ದೇವ ದೃಷ್ಟಿಮ್। ಜಯ ಜಯ ಜಯಮೂರ್ತೇऽನಾರ್ತ ಜೇತವ್ಯಪಕ್ಷಂ। ದಹ ದಹ ನರಸಿಂಹಾಸಹ್ಯ- ವೀರ್ಯಾಹಿತಂ ಮೇ॥19॥ ಸ್ತುತಿರಿಯಮಹಿತಘ್ನೀಸೇವಿತಾ ನಾರಸಿಂಹೀ। ತನುರಿವ ಪರಿಶಾಂತಾ ಮಾಲಿನೀ ಸಾऽಭಿತೋऽಮೋಲಮ್। ತದಖಿಲಗುರುಮಾಗ್ರ್ಯಶ್ರೀದರೂಪಾ ಲಸದ್ಭಿಃ। ಸುನಿಯಮನ- ಯಕೃತ್ಯೈಃ ಸದ್ಗುಣೈರ್ನಿತ್ಯಯುಕ್ತಾ॥20॥ ಲಿಕುಚತಿಲಕಸೂನುಃ ಸದ್ಧಿತಾರ್ಥಾನುಸಾರೀ। ನರಹರಿ- ನುತಿಮೇತಾಂ ಶತ್ರುಸಂಹಾರಹೇತುಮ್। ಅಕೃತ ಸಕಲಪಾಪ ಧ್ವಂಸಿನೀಂ ಯಃ ಪಠೇತ್ ತಾಂ। ವ್ರಜತಿ ನೃಹರಿಲೋಕಂ ಕಾಮಲೋಭಾದ್ಯಸಕ್ತಃ ॥21॥

### ಉಗ್ರಂ ವೀರಂ (ದ್ವಾತ್ರಿಂಶದಕ್ಷರಿ ನೃಸಿಂಹಾನುಷ್ಟುಪ್ ಮಂತ್ರಃ)

ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋ ಮುಖಂ।
ನೃಸಿಂಹಂ ಭೀಷಣಂ ಭದ್ರಂ ಮೃತ್ಯುಂ ಮೃತ್ಯುಂ ನಮಾಮ್ಯಹಂ॥
(ಸ ಏವ ಮಂತ್ರರಾಜ ಇತಿ ಪ್ರಸಿದ್ಧಃ)

### ವೃತ್ತೋತ್ಫುಲ್ಲ-ವಿಶಾಲಾಕ್ಷಂ (ಶ್ರೀಮಂತ್ರರಾಜಪದಸ್ತೋತ್ರಂ)

ವೃತ್ತೋತ್ಫುಲ್ಲ-ವಿಶಾಲಾಕ್ಷಂ। ವಿಪಕ್ಷಕ್ಷಯ-ದೀಕ್ಷಿತಮ್।ನಿನಾದತ್ರಸ್ತ ವಿಶ್ವಾಂಣ್ಡಂ। ವಿಷ್ಣುಮುಗ್ರಂ ನಮಾಮ್ಯಹಮ್॥1॥ ಸರ್ವೈರವಧ್ಯತಾಂ ಪ್ರಾಪ್ತಂ। ಸಬಲೌಘಂ ದಿತೇಃ ಸುತಮ್। ನಖಾಗ್ರೈಃ ಶಕಲೀಚಕ್ರೇ। ಯಸ್ತಂ ವೀರಂ ನಮಾಮ್ಯಹಮ್॥2॥ ಪಾದವಷ್ಟಬ್ಧಪಾತಾಲಂ। ಮೂರ್ಧಾವಿಷ್ಟ- ತ್ರಿವಿಷ್ಟಪಮ್। ಭುಜಪ್ರವಿಷ್ಟಾಷ್ಟದಿಶಂ। ಮಹಾವಿಷ್ಣು ನಮಾಮ್ಯಹಮ್ ॥3॥ ಜ್ಯೋತೀಂಷ್ಯರ್ಕೇಂದುನಕ್ಷತ್ರ। - ಜ್ವಲನಾದೀನ್ಯನುಕ್ರಮಾತ್। ಜ್ವಲಂತಿ ತೇಜಸಾ ಯಸ್ಯ। ತಂ ಜ್ವಲಂತಂ ನಮಾಮ್ಯಹಮ್॥4॥ ಸರ್ವೇಂದ್ರಿಯೈರಪಿ ವಿನಾ। ಸರ್ವಂ ಸರ್ವತ್ರ ಸರ್ವದಾ। ಜಾನಾತಿ ಯೋ ನಮಾಮ್ಯಾದ್ಯಂ। ತಮಹಂ ಸರ್ವತೋಮುಖಮ್॥5॥ ನರವತ್ ಸಿಂಹವಚ್ಚೈವ। ರೂಪಂ ಯಸ್ಯ ಮಹಾತ್ಮನಃ। ಮಹಾಸಟಂ ಮಹಾದಂಷ್ಟ್ರಂ ತಂ ನೃಸಿಂಹಂ ನಮಾಮ್ಯಹಂ॥6॥ ಯನ್ನಾಮಸ್ಮರಣಾದ್ ಭೀತಾಃ। ಭೂತವೇತಾಲರಾಕ್ಷಸಾಃ। ರೋಗಾದ್ಯಾಶ್ಚ ಪ್ರಣಶ್ಯಂತಿ। ಭೀಷಣಂ ತಂ ನಮಾಮ್ಯಹಮ್॥7॥ ಸರ್ವೋಽಪಿ ಯಂ ಸಮಾಶ್ರಿತ್ಯ। ಸಕಲಂ ಭದ್ರಮಶ್ನುತೇ। ಶ್ರಿಯಾ ಚ ಭದ್ರಯಾ ಜುಷ್ಟೋ। ಯಸ್ತಂ ಭದ್ರಂ ನಮಾಮ್ಯಹಂ॥8॥ ಸಾಕ್ಷಾತ್ ಸ್ವಕಾಲೇ ಸಂಪ್ರಾಪ್ತಂ ಮೃತ್ಯುಂ ಶತ್ರುಗುಣಾನಪಿ। ಭಕ್ತಾನಾಂ ನಾಶಯೇದ್ಯಸ್ತು। ಮೃತ್ಯುಮೃತ್ಯು ನಮಾಮ್ಯಹಂ॥9॥ ನಮಸ್ಕಾರಾತ್ಮಕಂ ಯಸ್ಮೈ। ವಿಧಾಯಾಽಽತ್ಮ ನಿವೇದನಮ್। ತ್ಯಕ್ತದುಃಖೋಽಖಿಲಾನ್ ಕಾಮಾನ್। ಅಶ್ನುತೇ ತಂ ನಮಾಮ್ಯಹಂ॥10॥ ದಾಸಭೂತಾಃ ಸ್ವತಃ ಸರ್ವೇ। ಹ್ಯಾತ್ಮಾನಃ ಪರಮಾತ್ಮನಃ। ಅತೋಽಹಮಪಿ ತೇ ದಾಸ। ಇತಿ ಮತ್ವಾ ನಮಾಮ್ಯಹಮ್ ॥11॥ ಶಂಕರೇಣಾದರಾತ್ ಪ್ರೋಕ್ತಂ। ಪದಾನಾಂ ತತ್ತ್ವಮುತ್ತಮಮ್। ತ್ರಿಸಂಧ್ಯಾಂ ಯಃ ಪಠೇತ್ ತಸ್ಯ। ಶ್ರೀರ್ವಿದ್ಯಾಯುಶ್ಚ ವರ್ಧತೇ॥12॥

### ಅಹೋಬಿಲಂ ನಾರಸಿಂಹಂ (ನೃಸಿಂಹ ಪಂಚಾಮೃತ ಸ್ತೋತ್ರಂ)

ಅಹೋಬಿಲಂ ನಾರಸಿಂಹಂ ಗತ್ವಾ ರಾಮಃ ಪ್ರತಾಪವಾನ್। ನಮಸ್ಕೃತ್ವಾ ಶ್ರೀನೃಸಿಂಹಂ ಅಸ್ತೌಷೀತ್ ಕಮಲಾಪತಿಮ್॥1॥ ಗೋವಿಂದ ಕೇಶವ ಜನಾರ್ದನ ವಾಸುದೇವ ವಿಶ್ವೇಶ ವಿಶ್ವ ಮಧುಸೂದನ ವಿಶ್ವರೂಪ। ಶ್ರೀಪದ್ಮನಾಭ ಪುರುಷೋತ್ತಮ ಪುಷ್ಕರಾಕ್ಷ ನಾರಾಯಣಾಚ್ಯುತ ನೃಸಿಂಹ ನಮೋ ನಮಸ್ತೇ॥2॥ ದೇವಾಃ ಸಮಸ್ತಾಃ ಖಲು ಯೋಗಿಮುಖ್ಯಾಃ ಗಂಧರ್ವ-ವಿದ್ಯಾಧರ-ಕಿನ್ನರಾಶ್ಚ। ಯತ್ಪಾದಮೂಲಂ ಸತತಂ ನಮಂತಿ ತಂ ನಾರಸಿಂಹಂ ಶರಣಂ ಗತೋಸ್ಮಿ ॥3॥ ವೇದಾನ್ ಸಮಸ್ತಾನ್ ಖಲು ಶಾಸ್ತ್ರಗರ್ಭಾನ್ ವಿದ್ಯಾಂ ಬಲಂ ಕೀರ್ತಿಮತೀಂ ಚ ಲಕ್ಷ್ಮೀಮ್। ಯಸ್ಯ ಪ್ರಸಾದಾತ್ ಪುರುಷಾ ಲಭಂತೇ ತಂ ನಾರಸಿಂಹಂ ಶರಣಂ ಗತೋಸ್ಮಿ ॥4॥ ಬ್ರಹ್ಮ ಶಿವಸ್ತ್ವಂ ಪುರುಷೋತ್ತಮಶ್ಚ ನಾರಾಯಣೋಽಸೌ ಮರುತಾಂ ಪತಿಶ್ಚ। ಚಂದ್ರಾರ್ಕ-ವಾಯ್ವಗ್ನಿ-ಮರುದ್ ಗಣಾಶ್ಚ ತ್ವಮೇವ ತಂ ತ್ವಾಂ ಸತತಂ-ನತೋಽಸ್ಮಿ ॥5॥ ಸ್ವಪ್ನೇಽಪಿ ನಿತ್ಯಂ ಜಗತಾಮಶೇಷಂ ಸ್ರಷ್ಟಾ ಚ ಹನ್ತಾ ಚ ವಿಭುರಪ್ರಮೇಯಃ। ತ್ರಾತಾ ತ್ವಮೇಕಂ ತ್ರಿವಿಧೋ ವಿಭಿನ್ನಃ ತಂ ತ್ವಾಂ ನೃಸಿಂಹಂ ಸತತಂ ನತೋಽಸ್ಮಿ ॥6॥

### ಪಾಂತ್ವಸ್ಮಾನ್ ಪುರುಹೂತ (ಶ್ರೀನರಸಿಂಹ ನಖಸ್ತುತಿಃ)

ಪಾಂತ್ವಸ್ಮಾನ್ ಪುರುಹೂತ ವೈರಿಬಲಮ್-ಮಾತಂಗಮಾದ್ಯದ್ ಘಟಾ। ಕುಂಭೋಚ್ಚಾದ್ರಿ- ವಿಪಾಟನಾಧಿಕ ಪಟು-ಪ್ರತ್ಯೇಕ ವಜ್ರಾಯಿತಾಃ। ಶ್ರೀಮತ್ ಕಂಠೀರವಾಸ್ಯ-ಪ್ರತತ ಸುನಖದಾ- ದಾರಿತಾರಾತಿ ದೂರ- ಪ್ರಧ್ವಸ್ತ-ಧ್ವಾಂತ-ಶಾಂತ-ಪ್ರವಿತತ-ಮಸನಾ, ಭಾವಿತಾ ನಾಕಿ ವೃಂದೈಃ॥ ಲಕ್ಷ್ಮೀಕಾಂತಃ ಸಮಂತ- ತೋಽಪಿ (ವಿ) ಕಲಯನ್ ನೈವೇಶಿತುಸ್ತೇ ಸಮಂ। ಪಶ್ಯಾಮ್ಯುತ್ತ- ಮವಸ್ತು ದೂರತರತೋ-ಪಾಸ್ತಂ ರಸೋ ಯೋಷ್ಟಮಾಂ॥ ಯದ್ರೋ- ಷೋತ್ಕರ-ದಕ್ಷನೇತ್ರ ಕುಟಿಲ-

ಪ್ರಾಂತೋ ತ್ಥಿತಾಗ್ನಿಸ್ಫುರತ್- ಖದ್ಯೋತೋ ಪಮ-ವಿಷ್ಫುಲಿಂಗ ಭಸಿತಾ, ಬ್ರಹ್ಮೇಶ- ಶಕ್ರೋತ್ಕರಾಃ ।।

### ಅಸ್ಯಶ್ರೀ ಲಕ್ಷ್ಮೀನೃಸಿಂಹ (ಶ್ರೀ ಲಕ್ಷ್ಮೀ ನೃಸಿಂಹ ದ್ವಾದಶನಾಮ)

ಅಸ್ಯ ಶ್ರೀ ಲಕ್ಷ್ಮೀನೃಸಿಂಹ ದ್ವಾದಶನಾಮ ಸ್ತೋತ್ರ ಮಹಾಮಂತ್ರಸ್ಯ। ವೇದವ್ಯಾಸೋ ಭಗವಾನ್ ಋಷಿಃ, ಅನುಷ್ಟುಪ್ ಛಂದಃ। ಶ್ರೀ ಲಕ್ಷ್ಮೀನೃಸಿಂಹೋ ದೇವತಾ, ಶ್ರೀ ಲಕ್ಷ್ಮೀನೃಸಿಂಹ ಪ್ರೀತ್ಯರ್ಥೇ ಜಪೇ ವಿನಿಯೋಗಃ।। ಪ್ರಥಮಂತು ಮಹಾಜ್ವಾಲೋ, ದ್ವಿತೀಯಂ ತೂಗ್ರ ಕೇಸರೀ। ತೃತೀಯಂ ವಜ್ರಂದಂಷ್ಟ್ರಶ್ಚ, ಚತುರ್ಥಂ ತು ವಿಶಾರದಃ।। ಪಂಚಮಂ ನಾರಸಿಂಹಶ್ಚ, ಷಷ್ಠ ಕಶ್ಯಪಮರ್ದನಃ। ಸಪ್ತಮೋ ಯಾತುಹಂತಾಚ, ಅಷ್ಟಮೋ ದೇವವಲ್ಲಭಃ।। ತತಃ ಪ್ರಹ್ಲಾದ ವರದೋ, ದಶಮೋ ನಂತ ಹಂತಕಃ। ಏಕಾದಶೋ ಮಹಾರುದ್ರಃ, ದ್ವಾದಶೋ ದಾರುಣಸ್ತಥಾ।। ದ್ವಾದಶೈತಾನಿ ನಾಮಾನಿ ನೃಸಿಂಹಸ್ಯ ಮಹಾತ್ಮನಃ। ಮಂತ್ರರಾಜ ಇತಿಜ್ಞಾತಂ ಸರ್ವಪಾಪವಿನಾಶನಂ। ಕ್ಷಯಾಪಸ್ಮಾರ ಕುಷ್ಠಾದಿ ತಾಪಜ್ವರ ನಿವಾರಣಂ। ರಾಜದ್ವಾರೇ ಮಹಾಘೋರೇ ಸಂಗ್ರಾಮೇ ಚ ಜಲಲಾಂತರೇ।। ಗಿರಿಗಹ್ವರಕಾರಣ್ಯೇ ವ್ಯಾಘ್ರ ಚೋರಾಮಯಾದಿಷು। ರಣೇಚ ಮರಣೇ ಚೈವ ಶಮವಂ ಪರಮಂ ಶುಭಂ।। ಶತಮಾವರ್ತಯೇದ್ಯಸ್ತು ಮುಚ್ಯತೇ ವ್ಯಾಧಿಬಂಧನಾತ್। ಆವರ್ತಯನ್ ಸಹಸ್ರಂತು ಲಭತೇ ವಾಂಛಿತಂ ಫಲಂ।।

### ಅಹೋಬಿಲ ನವನಾರಸಿಂಹ ನಾಮಗಳು

ಜ್ವಾಲ, ಅಹೋಬಿಲ, ಮಾಲೋಲ, ಕ್ರೋಧ, ಕಾರಂಜ, ಭಾರ್ಗವ, ಯೋಗಾನಂದ, ಛತ್ರವತಾಹ, ಪವನೋ ನವಮೂರ್ತಯಾ।।

### ನರಸಿಂಹ ಗೋವಿಂದ (ಅಕ್ಷರಮಾಲಾ)

ನರಸಿಂಹ ಗೋವಿಂದ ನರಸಿಂಹ ಗೋವಿಂದ ನರಸಿಂಹ ಗೋವಿಂದ ನಿತ್ಯಾನಂದ।।ಪ।। ಅಕ್ಷರ ಪುರುಷ ಅಧೋಕ್ಷಜ ಶ್ರೀವತ್ಸ ವಕ್ಷಸ ವಿಷ್ಣು ತ್ರ್ಯಕ್ಷ ನರಸಿಂಹ।।1।। ಆಗಮ ಸ್ತುತ ಭವರೋಗ ವೈದ್ಯ ಕಾಮರಾಗರಹಿತ ಸುಪ್ರಯೋಗನರಸಿಂಹ।।2।। ಇಂದು ಸಹಸ್ರಾರ ಬಂಧುರ ಕೌಸ್ತುಭಕಂಧರ ನಿರ್ಜಿತ ಬಂಧ ನರಸಿಂಹ।।3।।(ಚಿ) ಈಶದಿಶಾನನ ಪೋಷಿತ ಪರಬ್ರಹ್ಮ ಸುರೇಶ ಮಂಜೀಕೃತ-ಶೇಷ ನರಸಿಂಹ ।।4।। ಉಗ್ರವಿಕಂಪಿತ ಭಗ್ರಹ ದಿತಿಜಾತನಿಗ್ರಹ ವಿಮಲಾ ಪವರ್ಗ ನರಸಿಂಹ ।।5।। ಊರ್ರ್ವೀಧರ ಲೋಕಸಾರ್ವಭೌಮಾಚ್ಯುತ ಸರ್ವೇಶ ವಿನುತ ನರಸಿಂಹ।।6।। ಋಚದೂರ ಸುಕೃತಿ ವ್ರಜಪರಿಪಾಲಕ ಭಜಕಾಯ ಸಸ್ತಂ ಭಜನರಸಿಂಹ।।7।। ಋೂಚ ಚತುಷ್ಟಯ ಸಚರಾಚರ -ಮಯ ವಾಚಾ ಗೋಚರ ಹರಿಸತ್ಯವಾಚ ನರಸಿಂಹ।।8।। ಉ ಪರಿಪಾಲ ಬಹುಸುಪವಿತ್ರ ಕಥಾನಾತಿ ಕೃಪಾಣಾಳಿ ರಕ್ಷಣ ನಿಪುಣ ನರಸಿಂಹ।।9।। ಊ ಕೇತನಾತ್ಮಜ ಪಾಕಾರಿ ವರದಾ ಗರ್ಭೀಕೃತ ಅಗಣಿತ ಲೋಕ ನರಸಿಂಹ।।10।। ಏಕೋಪಿ ಸರ್ವ ಹೃದಕಾತ ಭರಿತ ದಿವಾಕರ ಚ್ಛಿನ್ಮಯೂಖ ನರಸಿಂಹ।।11।। ಐ ಸಹಸ್ರಾಯುತ ಆಸುರರ ಭಂಜನ ವಾಸುದೇವ ಶ್ರೀನಿವಾಸ ನರಸಿಂಹ ।।12।। ಓ ತನುಜಾಂತಕ ಸೀತಾರಮಣ ಸಾಕೇತ ಪಟ್ಟಣಾದಿ ನಾಥ ನರಸಿಂಹ।।13।। ಔ ಜನಕಾಜ ಬಿಡೌಜಸನ್ನುತ ಜನ ಪೂಜಿತ ಪಾದ ಸರೋಜ ನರಸಿಂಹ ।।14।। ಅಂಬುಜ ನಾಭ ವಿಶ್ವಂಭರ ಚಾಮೀಕ ರಾಂಬರ ಭಕ್ತ ಕುಟುಂಬಿ ನರಸಿಂಹ।।15।। ಅಃ ರಹಸ್ತ ವನಾಮ ಗೃಸಣ ಜನ ಕ್ಷೇಮಾವಹಃ ನಾಥರಸ್ವಾಮಿಸಹ ನರಸಿಂಹ।।16।। ಗುರುಶೇಷಾಚಲ ಭಾರ್ಗಪುರ- ಧೀಶಾಂತಕ ಭಯ ಹರ ಮುಕುಂದಾಮರೋದ್ಧಾರ ನರಸಿಂಹ।।17।। ಕಮನೀಯ ಗುಣಗಣ ಸುಮನಸಪೋಷಣ ಪ್ರಮದಾರಿ ಮಥನ ವಿಕ್ರಮ ನರಸಿಂಹ।।18।। ಖರಮುರದೂಷಣ ನರಕಾದಿ ಭೀಷಣ ಪರಮ ಪಾವನ-ತೀರ್ಥ ಚರಣ ನರಸಿಂಹ।।19।। ಗಜೇಂದ್ರಮುಕ್ತಿದ ತ್ರಿಜಗಸೇವಿತ ಗೋಪೀವ್ರಜಾ ಲಿಂಗಿತ ಚಾರುಭುಜ ನರಸಿಂಹ।।20।। ಘ ಹಾರ ಕೀರ್ತಿ- ಅಂತರ ಬಹಿಃ ವ್ಯಾಪಕ ಮೋಹ ಗಹನದಾವ ಹವ್ಯ ನರಸಿಂಹ।।21।। ಙರ್ಥಾಯ ಮನ್ಯುತಿ ವೆರ್ಥಮಾಟದಿ ಚಿತ್ತ ಸ್ವಸ್ತಂತುರ್ಮೇವಕ್ಕರ್ತ ನರಸಿಂಹ।।22।। ಚಕಿತಮಾನಸ ದೂರ ಅಕುಟಿಲ ಸ್ವಾಂತಾಂಬುಜಕರ ದಿವ್ಯ ನಾಯಕ ನರಸಿಂಹ।।23।। ಛಂದಸ್ವ

ಔರ ಸಿಂಹ ರೂಪ ಧರ, ಪ್ರಕಟ ಭಯೇ ಸ್ವಾಮಿ, ಸ್ವಾಮಿ। ನಿರ್ಭಯ ಹುಯೇ ಭಕ್ತ ಜನ, ಭಯ ಪೋಯೇ ಕಾಮಿ॥ ಪ್ರಕಟ ಭಯೇ ಪ್ರಹ್ಲೇದ ಕೇ ಕಾರಣ, ಸಬಕೋ ದರ್ಶ ದಿಯಾ, ಸ್ವಾಮಿ। ನರ ಔರ ಹರಿ ಬನಕರ, ಸಂಕಟ ದೂರ ಕಿಯಾ॥ ದೈಹಿಕ, ದೈವಿಕ, ಭೌತಿಕ, ಪಾಪ ಕಟೇ ಸಾರೇ, ಸ್ವಾಮಿ। ರಕ್ಷಕನಿಜ ಭಕ್ತನ ಕೇ, ದಾನವ ದಲ ಮಾರೇ॥ ಶರಣ ರಹಸ್ಯ ಪ್ರಧಾತಾ, ಭವ ಬಂಧನ ಹಾರಿ, ಸ್ವಾಮಿ। ದುಖಹಾರಿ ಸುಖಕರೀ ಗದಾ ಚಕ್ರ ಧಾರಿ॥ ಅಕ್ಷಯ ಭಕ್ತಿ ದಯಾರ್ಣವ, ಹಮ ಸಬಕೋ ದೀಜೇ, ಸ್ವಾಮಿ। ಪಾಪ ತಪ ಹರ ನರ ಹರಿ, ನಿಜ ಜನ ಕರ ಲೀಜೇ॥ ಶಿವ ಸ್ವರೂಪ ಶರಣಾಗತ ಅತಿಮಲ ಅಧಹಾರೀ ಸ್ವಾಮಿ। ಪದ ಸರೋಜ ರಜ ಚಾಹತ, ನರ ಹರಿ ತನಲ ಧಾರೀ॥ ನರ ಸಿಂಹ ಪ್ರಭು ಜೀ ಕೀ ಆರತೀ, ಜೋ ಕೋಈ ನರ ಗೋವೇಂ, ಸ್ವಾಮಿ। ಹರ ಅಜ್ಞಾನ ಮೋಹ ತಮ, ಮನ ವಾಂಚಿತ ಫಲ ಪಾವೇಂ॥

**ಆರತಿ ಎತ್ತಿರೆ ನರಸಿಂಹಗೆ** **ರಾಗ: ಮಧ್ಯಮಾವತಿ–ಆದಿತಾಳ**

ಆರತಿ ಎತ್ತಿರೆ ನರಸಿಂಹಗೆ। ಮುತ್ತಿನ ಆರತಿ ಎತ್ತಿರೆ ಯೋಗಾ ನರಸಿಂಹಗೆ ॥ಪ॥ ಲೋಕಪಾಲ ನರಸಿಂಹಗೆ। ಕಮಲನಾಭ ನರಸಿಂಹಗೆ। ಲಕ್ಷ್ಮೀನರಸಿಂಹಗೆ। ಯೋಗ ನರಸಿಂಹಗೆ। ಅಹೋಬಲ ನರಸಿಂಹಗೆ। ಪ್ರಹ್ಲಾದ ವರದ ನರಸಿಂಹಗೆ। ಮಹಾಮಹಿಮ ನರಸಿಂಹಗೆ। ಮುಕ್ತಿನೀಡುವ ನರಸಿಂಹಗೆ॥



**ಲಾಲಿ ಲಾಲಿ ಎಂದು ಪಾಡಿರೆ** **ರಾಗ : ಗೌಳಿ,ತಾಳ : ಆದಿ**

ಲಾಲಿ ಲಾಲಿ ಎಂದು ಪಾಡಿರೆ ಬಾಲಕಿಯರು ॥ಪ॥ಲಾಲಿ ಎಂದು ಪಾಡಿರೆ ಶ್ರೀ ಲೋಲನಾದ ನರಹರಿಯ ।ಲೀಲೆಯ ಕೊಂಡಾಡುತ ಉತ್ಸಾಹ ಪಡುತ ॥ಅ.ಪ॥ತರಳನ್ನಾ ಮೊರೆ ಕೇಳಿ ಕಂಭಾ ಬಿರಿದು ಹೊರಗೆಬಂದುದೈತ್ಯೇ ।ಶ್ವರನೊಳ್ಯುದ್ಧಾರಗೈದಾಯಾಸ ಭರದಿಂದ ಮಲಗೀದ ಹರಿಗೆ ॥1॥ಲಕ್ಷ ಬ್ರಾಹ್ಮಣರಿಂದ ನಿತ್ಯ ಭಕ್ಷ್ಯ ಭೋಜ್ಯವನುಂಡು ಬೃಹ । ತ್ಕುಕ್ಷಿ ಆಕಳಿಕೆ ನಿದ್ರಾಪೇಕ್ಷೆಗೈದ ನರಹರಿಗೆ ॥2॥ಶ್ರೀ ಭೂದೇವಿಯರೊಳ್ ರಾತ್ರಿ ವೈಭವ ಕಮಲೇಶವಿಠಲ ।ನೊ ಭೂಪಾಳೀ ತೊಟ್ಟಿಲೊಳು ಶೋಭಿಸಿ ಶಯನಿಸಿದಾ ಹರಿಗೆ ॥3॥

**ಲಾಲಿ ಶ್ರೀ ನರಸಿಂಹಗೆ** **ರಾಗ: ಕುರಂಜಿ–ಏಕತಾಳ**

ಲಾಲಿ ಶ್ರೀ ನರಸಿಂಹಗೆ। ಲಾಲಿ ಮಹದಾದಿ ದೇವನಿಗೆ॥ಪ॥ ಲಾಲಿ ಪಕ್ಷಿವಾಹನನಿಗೆ। ಲಾಲಿ ಕನಕ ಕಿರೀಟನಿಗೆ। ಜೋ ಜೋ ಜೋ ಜೋ ಲಾಲಿ ಜೋಜೋ॥1॥ ಲಾಲಿ ಲಕ್ಷ್ಮೀಕಾಂತನಿಗೆ ಲಾಲಿ ಲಕ್ಷಣವಂತಗೆ। ಲಾಲಿ ಭಕ್ತರಾಧೀಶನಿಗೆ। ಲಾಲಿ ಮುಕ್ತಿದಾತಗೆ॥ ಜೋ ಜೋ ಜೋಜೋಜೋ ಲಾಲಿ ಜೋ ಜೋ॥ ಜೋ ಜೋ ಜೋ ॥2॥



**ಜಯಮಂಗಳಂ ನಿತ್ಯ ಶುಭಮಂಗಳಂ (ಮಂಗಳ ರಂಗ)** **ರಾಗ: ಸುರುಟಿ**

ಜಯಮಂಗಳಂ ನಿತ್ಯ ಶುಭಮಂಗಳಂ। ಮಂಗಳಂ ರಂಗ ನರಸಿಂಗ ಉತ್ತುಂಗನಿಗೆ। ಮಂಗಳಂ ಸಿಂಗದ ಚಿತ್ತಾಂಗದ ಹರಿಗೆ।ಮಂಗಳಂ ಸಿಂಗರದ ಕಂಗೊಳಿಪ ಮುಂಗುರುಳ। ಕಂಗಳ ಧವಳಾಂಗ ಶುಭಾಂಗ ಹರಿಗೆ॥1॥ ಇತ್ತರದಿ ಚಿತ್ತಿಣಿಯರೊತ್ತಿಡರಸತ್ತಿಗೆಯ। ಮತ್ತಗಜವೆತ್ತವೆನೆ ಕೆತ್ತಿಸಿರಲು। ಹತ್ತಿರದೆ ಚಿತ್ತದಿಂದೊತ್ತಿರಗವನ ಹತ್ತಿರಕೆ। ನೆತ್ತಿಯೊಳು ಹೊತ್ತರಾರತಿಗಳನು॥2॥ ಕಡಕ ಕಡಲ ತೆರೆಯಂತೆ ನೊಡನೊಡನೆ ನಾರಿಯರು। ಬೆಡಗಿನಿಂದಡಸಿ ದಾರತಿಯನು। ಬಡನಡುವು ನಡುನಡುಗೆ ಮೃಡಸಖನಿಗೆತ್ತುತಲಿ। ಎಡಬಿಡದೆತ್ತಿ ಪಾಡಿದರು ಕಡಲ ಶಯನನ್ನ॥3॥ ಸಂಭ್ರಮದ ಸಾಹಸವ ವಿಭವದಿಂದ ಪೊಗಳು। ಅಭಯರಿಗೆ ಶುಭಕರದೊಳಭಯವಿತ್ತು। ನಭದೊಳಗೆ ಇಭಪತಿಯ ರಭಸದಿಂಪೊಗಳಲು। ತ್ರಿಭುವನದಿ ಮೆರೆವ ರಂಗವಿಠಲನಿಗೆ॥4॥

**ವಸುದೇವ ತನಯನಿಗೆ** ರಾಗ: ಆನಂದಭೈರವಿ-ರೂಪಕತಾಳ

ವಸುದೇವ ತನಯನಿಗೆ ವೈಕುಂಠನಿಲಯನಿಗೆ। ಕುಸುಮನಾಭನಿಗೆ ಕೋಮಲರೂಪಗೆ। ಯಶೋದೆನಂದನಗೆ ವಸುಧೆಯ ರಮಣನಿಗೆ। ನಸುನಗೆಯೊಳೊಪ್ಪುವ ನರಸಿಂಹಗೆ।।ಮಂಗಳ।। ಕನಕಕಿರೀಟನಿಗೆ ಕಸ್ತೂರಿತಿಲಕನಿಗೆ। ಕನಕಕುಂಡಲ ಕೌಸ್ತುಭಧಾರಗೆ। ಕನಕಾಂಬರಧರನಿಗೆ ಕಾರುಣ್ಯರೂಪನಿಗೆ। ಸನಕಾದಿ ಮುನಿವಂದ್ಯ ನರಸಿಂಹಗೆ।।ಮಂಗಳ।। ಪಂಕಜನಾಭನಿಗೆ ಪಾಂಚಾಲಿ ರಕ್ಷಕಗೆ। ಲಂಕೆಯನು ವಿಭೀಷಣನಿಗಿತ್ತವಗೆ। ಕುಂಕುಮಾಂಕಿತನಿಗೆ ಕುವಲಯನೇತ್ರನಿಗೆ। ಬಿಂಕದಿಂದಲಿ ಮೆರೆವ ನರಸಿಂಹಗೆ।।ಮಂಗಳ।। ಪಕ್ಷಿವಾಹನನಿಗೆ ಪರಮಪಾವನನಿಗೆ। ಕುಕ್ಷಿಯೊಳು ಜಗವನಿಂದಿಟ್ಟವನಿಗೆ। ಲಕ್ಷುಮೀಕಾಂತನಿಗೆ ಲಕ್ಷಣವಂತನಿಗೆ। ಲಕ್ಷಣದೊಳೊಪ್ಪುವ ನರಸಿಂಹಗೆ।। ಮಂಗಳ।। ಭಕ್ತವತ್ಸಲನಿಗೆ ಭವದುಃಖ ದೂರನಿಗೆ। ಮುಕ್ತಿದಾಯಕಗೆ ಚಿನ್ಮಯರೂಪಗೆ। ಮಿತ್ರೆರುಕ್ಮಿಣಿ ಸತ್ಯಭಾಮೆಯರರಸನಿಗೆ। ನಿತ್ಯ ಕಲ್ಯಾಣ ಶ್ರೀಹಯವದನನಿಗೆ।।ಮಂಗಳ।।

**ಮಂಗಳಂ ಜಯ ಮಂಗಳ** ರಾಗ: ಕಾಂಬೋಧಿ

ಮಂಗಳಂ ಜಯ ಮಂಗಳ। ಮಂಗಳ ಶ್ರೀ ನರಸಿಂಗ ಮೂರುತಿಗೆ ।।ಪ।। ಅಂಗುಟಾಗ್ರದಿ ಗಂಗೆಯ ಪಡೆದ ಮಂಗಳಗಾತ್ರ ಶ್ರೀರಂಗನಿಗೆ। ಅಂಗಜರಿಪು ಧನುಭಂಗವ ಮಾಡಿಸೀ। ಕಾನಂಗನೆಯಳ ಕರಪಿಡಿದವಗೆ ।।1।। ವರಮತ್ಸ್ಯಗೆ ಗಿರಿಧರ ಕ್ರೋಢಗೆ। ತರಳನ ರಕ್ಷಿಸಿ ಧರೆಯ ಬೇಡಿದಗೆ। ಪರಶುಧರಿಸಿದ ರಾಮಕೃಷ್ಣಗೆ। ಧರಿಸದೆ ವಸನವ ತುರಗನೇರಿದಗೆ।।2।। ಕರಿವರ ಕರೆಯಲು ಭರದಿ ಬಂದವಗೆ। ಸ್ಮರಿಪರಭಯ ಪರಿಹರಿಸುವ ದೇವಗೆ। ಶರಣು ಜನಕೆ ಸುರತರು ವೆಂದೆನಿಸಿದ। ಸಿರಿಕಾರ್ಪರ ನರಹರಿ ರೂಪಗೆ।।3।।

**ಮಂಗಳ ನರಶಿಂಗ ಮೂರುತಿಗೆ** ರಾಗ: ಆನಂದಭೈರವಿ

ಮಂಗಳ ನರಶಿಂಗ ಮೂರುತಿಗೆ ಲಕ್ಷ್ಮೀ ಸಮೇತಗೆ। ತುಂಗಮಹಿಮ ವಿಹಂಗ ವಾಹನಗೆ।। ಅಂಗಜನಪಿತಗೆ ಅಂಗುಟದಿ ಗಂಗೆಯನು ಪಡೆದವಗೆ ಮಾತಂಗ ವರದಗೆ। ವಾರಿಜಾಸನ ಮುಖ್ಯಸುರನುತಗೆಉ-। ದಾರಚರಿತಗೆ ಸೇರಿದವರಘ ದೂರ ಮಾಡುವಗೆ। ಕಾರ್ಪರ ಖುಷಿಗೆ ತಪಸಿಗೆ ಒಲಿದು ಬಂದವಗೆ ಅಶ್ವತ್ಥರೂಪಗೆ। ಕುಕ್ಷಿಯೊಳು ಜಗವಿಟ್ಟು ರಕ್ಷಿಪಗೆ ಕರುಣಾಕ-। ಟಾಕ್ಷಗೆ ವಕ್ಷದೊಳು ಶ್ರೀವತ್ಸಲಾಂಛನಗೆ ದ್ರೌಪದಿದೇವಿಗೆ। ಅಕ್ಷಯಾಂಬರವಿತ್ತು ಸಲಹಿದಗೆ ಲಕ್ಷ್ಮಿನೃಸಿಂಹಗೇ। ಕೃಷ್ಣವೇಣಿ ತಟವಿರಾಜಿತಗೆ ಸೃಷ್ಟ್ಯಾದಿಕರ್ತಗೆ। ಶ್ರೇಷ್ಠತರು ಪಿಪ್ಪಲದಿ ಪ್ರಕಟಿತಗೆ ದುಷ್ಟ ನಿಗ್ರಹಗೆ। ದೃಷ್ಟಬಾಹುಗಳಿಂದ ಭಜಕರಿಗೆ ಇಷ್ಟಾರ್ಥಗರಿವಗೆ। ಹಿಂದೆ ಗೋರೂಪದಲಿ ಬಂದವಗೆ ಬಹು ಸುಂದರಾಂಗಗೆ। ವಂದಿಸುವೆ ಶ್ರೀ ವೆಂಕಟೇಶನಿಗೆ ಮಂದರೋದ್ಧರಗೆ। ವಂದಿಪರ ಭವಬಂಧ ಬಿಡಿಸುವಗೆ ಆನಂದವೀವಗೆ। ತರಳ ಪ್ರಹ್ಲಾದನ್ನ ಕಾಯ್ದವಗೆ ಸುರಸಾರ್ವಭೌಮಗೆ। ಶರಣು ಜನ ಮಂದಾರ ನೆನಿಸುವಗೆ ಭೂಸುರರ ಪೊರೆವಗೆ। ಧರಣಿಯೊಳು ಕಾರ್ಪರ ಸುಮಂದಿರಗೆ ಶಿರಿನಾರಶಿಂಹಗೆ।।

**ಮಂಗಳ ಜಯ ಜಯ ಮಂಗಳಾ** ರಾಗ: ಸುರುಟಿ

ಮಂಗಳ ಜಯ ಜಯ ಮಂಗಳಾ ।ಶುಭ। ಮಂಗಳ ಶ್ರೀಲಕ್ಷ್ಮೀ ನರಸಿಂಹನಿಗೇ। ಸಹಸ್ರ। ಮಂಗಳ ಭಕ್ತರ ಸಲಹುವಗೆ। ಶರಣ ಪ್ರಹ್ಲಾದಗೆ ಪಟ್ಟಾಭಿಷೇಚನ। ಕರುಣದಿ ಮಾಡಿಸಿ ಸುರರಿಂದಲಿ। ಅರಸುತನವ ಕೊಟ್ಟು ಭಕ್ತಾಗ್ರಣಿಮಾಡಿ। ವರಮುಕ್ತಿಗಳ ಸೂರಾಡಿದವಗೆ।।ಮಂಗಳ।। ಎನ್ನನು ನೆನೆಯಲಿ ನೆನೆಯದವರಿರಲಿ ಒಮ್ಮೆ। ನಿನ್ನ ನೆನೆದು ಘನ ಚರಿತೆಯನು।। ಮನ್ನಿಸಿ ಓದಿಸಿ ಕೇಳುವ ಮನುಜರ। ಚೆನ್ನಾಗಿ ಕಾಯ್ವೆನೆಂದಭಯ ವಿತ್ತವಗೆ।।ಮಂಗಳ।। ಅಂದಿಗಿಂದಿಗೆ ತನ್ನ ದಾಸರಾದಾಸನಾ। ಮಂದಿರ ಸಾರಿದವಗೆ ದಯದೀ।। ಚಂದಾಗಿ ತನ್ನ ಭಕುತಿ ಎಚ್ಚರವ ನೀವ। ತಂದೆ ಮಹೀಪತಿ ಸುತಪ್ರೀಯಗೆ।।ಮಂಗಳಾ।।

**ಮಂಗಳಂ ಯೋಗಾ ನರಸಿಂಹಗೆ** ರಾಗ: ಕಲ್ಯಾಣಿ

ಮಂಗಳಂ ಯೋಗಾ ನರಸಿಂಹಗೆ। ಜಯಮಂಗಳಂ ಯದುಗಿರಿನಿಲಯನಿಗೆ।।ಪ।। ಮೇಲುಕೋಟೆಯ ಮೇಲೆ। ಮಾಲೆ

ಬೆಟ್ಟದ ಮೇಲೆ-ಮೇಲಾಗಿ ನೆಲಸಿದ ನಾಗಶಯನಗೆ। ಭೋಗಿಯ ಮೂರುತಿ ನಿಮ್ಮ ಪಾದವನಂಬಿದೆ। ಪ್ರಾರಬ್ಧಕರ್ಮವಾ। ಪರಿಹರಿಸೊ।।1।। ಮಂಗಳಂ ನಾರಾಯಣನಿಗೆ ಸಾಗರಶಯನಗೆ। ಕಾರುಣ್ಯ ಮೂರುತಿ ಎನಿಪೊನಿಗೆ ಕರುಣಾಕಟಾಕ್ಷಗೆ ಕಮಲೇಶವಿಠಲಗೆ। ತರಳನ್ನ ರಕ್ಷಿಸಿದಾ। ನರಹರಿಗೆ।।2।।

**ಮಂಗಳ ಕರಿಗಿರಿ ನರಹರಿಗೇ** **ರಾಗ: ಮಧ್ಯಮಾವತಿ**

ಮಂಗಳ ಕರಿಗಿರಿ ನರಹರಿಗೇ। ಜಯ। ಮಂಗಳ ಶರಣರ ಪೊರೆವನಿಗೇ ।।ಪ।। ಕಣ್ಣ ತೆರೆದು ಗಿರಿ ಬೆನ್ನೊಳು ಪೊತ್ತಗೆ। ಮಣ್ಣನು ಅಗಿಯುತ ಚಿಣ್ಣಗೊಲಿದಗೇ।।1।। ಚಿನ್ನ ವಟುವು ಆದ ಘನ್ನ ಪರಶುಧರ। ಮುನ್ನುಜರೂಪಗೆ ಕೃಷ್ಣಮೂರುತಿಗೆ।।2।। ಬೆತ್ತಗೆ ನಿಂತಗೆ। ಉತ್ತಮ ಕಲ್ಕಿಗೇ। ಹತ್ತಾವತಾರ ಗುರುಗೋವಿಂದ ವಿಠಲಗೆ।।3।।

**ಜಯಮಂಗಳಂ ನಿತ್ಯ (ಜಗದೊಡೆಯ ನಾರಸಿಂಹಗೆ)** **ರಾಗ: ಶ್ರೀ**

ಜಯಮಂಗಳಂ ನಿತ್ಯ ಶುಭ ಮಂಗಳಂ। ಜಗದೊಡೆಯ ನಾರಸಿಂಹಗೆ ಮಂಗಳಂ।।ಪ।। ಕಂಬದಿಂ ಬಂದವಗೆ। ನಂಬಿಕೆಯ ತಂದವಗೆ। ಅಂಬುಜಾಕ್ಷಿಯ ಸಹಿತ। ಕಂಗೊಳಿಪಗೆ।। ಬಿಂಬರೂಪನು ಎನಿಸಿ। ಸಕಲ ಜೀವಿಗಳನು। ಬೆಂಬಿಡದೆ ಪೊರೆಯುವ ಪರಮಾತ್ಮಗೆ।।1।। ಕರುಳ ಆಭರಣಗೆ। ಕಾರುಣ್ಯ ಮೂರುತಿಗೆ। ಮರೆಯದೆ ಭಕ್ತರನು। ರಕ್ಷಿಸುವಗೆ।। ವರಕೆ ಅನುಗುಣವಾಗಿ। ತನ್ನವರ ಪೊರೆಯಲು। ನರಹರಿಯ ರೂಪವನು ಧರಿಸಿದವಗೆ।।2।। ಬಾಲಕನ ಕರೆಕೇಳಿ। ಲೀಲೆಯ ತೋರ್ದಗೆ। ಫಾಲಾಕ್ಷ ತಾ ಸತತ ಧ್ಯಾನಿಸುವಗೆ। ಕಾಲರೂಪನು ಎನಿಪ। ಕಲ್ಯಾಣ ಗುಣನಿಗೆ। ಕೋಲಾಹಲದ ದೈವ। ಜಯಕೃಷ್ಣಗೆ।।3।।

**ಜಯ ಜಯ ಮಂಗಳ** **ರಾಗ: ಪುನ್ನಾಗವರಾಳಿ–ಏಕತಾಳ**

ಜಯ ಜಯ ಮಂಗಳ ಲಕ್ಷ್ಮೀನರಸಿಂಹಗೆ। ಜಯ ಶುಭ ಮಂಗಳ ಯೋಗಾ ನರಸಿಂಹಗೆ।।ಪ।। ಜಯ ಜಯ ಮಂಗಳ ಪ್ರಹ್ಲಾದ ಪಾಲಕಗೆ। ಜಯ ಶುಭ ಮಂಗಳ ಭಾಗವತ ಪ್ರಿಯಗೆ। ಜಯ ಜಯ ಮಂಗಳ ಆನಂದ ಮೂರುತಿಗೆ। ಜಯ ಶುಭ ಮಂಗಳ ಆಶ್ರಿತ ವತ್ಸಲಗೆ।।1।। ಜಯ ಜಯ ಮಂಗಳ ಕಲ್ಯಾಣ ರೂಪಗೆ। ಜಯ ಶುಭ ಮಂಗಳ ಲಕ್ಷ್ಮೀ ಲೋಲಗೆ। ಜಯ ಜಯ ಮಂಗಳ ಗರುಡ ವಾಹನನಿಗೆ। ಜಯ ಶುಭ ಮಂಗಳ ಮುಕ್ತಿದಾತಗೆ।।2।।

**ಮಂಗಳಂ ಜಯ** **ರಾಗ: ಶ್ರೀರಾಗ–ಏಕತಾಳ**

ಮಂಗಳಂ ಜಯ ಮಂಗಳಂ। ಶುಭ ಮಂಗಳಂ ನಾರಸಿಂಹಗೆ।।ಪ।। ವೇದೋದ್ಧಾರಗೆ ಜಯ ಮಂಗಳಂ। ಆತ್ಮಾನಂದಗೆ ಶುಭಮಂಗಳಂ। ಲೋಲಲೋಚನನಿಗೆ ಜಯಮಂಗಳಂ। ನಿತ್ಯ ನಿರ್ಮಲನಿಗೆ ಶುಭ ಮಂಗಳಂ।।1।। ಪ್ರಹ್ಲಾದ ಪಾಲಕಗೆ ಜಯಮಂಗಳಂ। ಲೋಕೋದ್ಧಾರಕಗೆ ಶುಭಮಂಗಳಂ। ಲಕ್ಷ್ಮೀ ವಲ್ಲಭಗೆ ಜಯ ಮಂಗಳಂ। ಮುಕ್ತಿ ದಾತಗೆ ಶುಭಮಂಗಳಂ।।2।।

**ಮಂಗಳಂ ಸ್ತಂಭಡಿಂಬಾಯ** **ರಾಗ: ಸುರುಟಿ**

ಮಂಗಳಂ ಸ್ತಂಭಡಿಂಬಾಯ ಮಂಗಳಂ ಮೃತ್ಯು ಮೃತ್ಯುವೇ। ಮಂಗಳಂ ರೌದ್ರರೂಪಾಯ ನಾರಸಿಂಹಾಯ ಮಂಗಳಂ।। ಹಿರಣ್ಯ ಕಶ್ಯಪಂ ಹತ್ವ ದೈತ್ಯೇಂದ್ರ ದೈವ ಕಂಟಕಂ। ಜಗದ್ರಕ್ಷಣ ದುರ್ಯಾಯ ಜಗದ್ಬೀಜಾಯ ಮಂಗಳಂ। ಕರಾಗ್ರೇ ವಜ್ರ ಸಂಸ್ಪರ್ಶೇಃ ನಖರೈಃ ಶತ್ರ- ಧಾರಿಣೇ। ತೀಕ್ಷ್ಣಂ ದಂಷ್ಟ್ರಾಯ ಸತ್ವಾಯತ್ಯಾಕ್ಷಾತ್ವಾಹಾಯ ಮಂಗಳಂ।। ನರಕಂಠೀರವಾಕಾರ ವ್ಯಕ್ತಾತ್ಯುಗ್ರ ವಿಭೂತಯೇ। ಮೃಗೇಂದ್ರಾಯ ನರೇಂದ್ರಾಯ ದೈವತೇಂದ್ರಾಯ ಮಂಗಳಂ।। ಕಿರೀಟ ಹಾರ ಕೇಯೂರ ಕುಂಡಲಾಂಕೃತಾ ಯಚ। ಕೋಟಿಸೂರ್ಯ ಪ್ರಕಾಶಾಯ ದೈವ ಸಿಂಹಾಯ ಮಂಗಳಂ।। ತ್ರಿಯುಗಾಯ ತ್ರಿಪೃಷ್ಠಾಯ ತ್ರಿಗುಣಾಯ ತ್ರಿಮೂರ್ತಯೇ। ನರಕೇಸರಿ ರೂಪಾಯ ಲಕ್ಷ್ಮೀಲೋಲಾಯ ಮಂಗಳಂ।। ಮತ್ಸ್ಯ ಕಚ್ಛಪವಾರಾಹ ರಾಮ ವಾಮನ ಮೂರ್ತಯೇ। ರಾಮ ಕೃಷ್ಣಾತ್ಮನೇ ಬೌದ್ಧೌ ಕಲ್ಕಿ ಸಿಂಹಾಯ

ಮಂಗಳಂ।। ಸರ್ವಬೀಜಾಯ ಸತ್ಯಾಯ ಸರ್ವಾರಿಷ್ಠಾನ ಮೂರ್ತಯೇ। ಸರ್ವೇಶ್ವರಾಯ ಸರ್ವಸ್ಮೈ ಸತ್ಯಸಿಂಹಾಯತೇ ನಮಃ।।

**ಅಪಾರ ಕರುಣಾಸಿಂಧೋ ರಾಗ: ಕಾಂಬೋಧಿ**

ಅಪಾರ ಕರುಣಾಸಿಂಧೋ ನಿವಾರಣ ಪರಾನಿಮಾಮ್। ವಿದಾರಯ ಹಿರಣ್ಯಾಕ್ಷ ವಿದಾರಣ ನಖಾಯುಧೈಃ।।1।। ಸರ್ವವೇದಾಂತ ವೇದ್ಯಾಯ ಕಾರಣಾಯ ಮಹಾತ್ಮನೇ। ಸರ್ವಲೋಕ ಶರಣ್ಯಾಯ ಶ್ರೀನೃಸಿಂಹಾಯ ಮಂಗಳಂ।।2।। ಶೇಷಿಣೇ ಸರ್ವವಸ್ತೂನಾಂ ವಾಂಛಿತಾರ್ಥ ಪ್ರದಾಯಿನೇ। ಸಂಶ್ರಿತಾನಾಂ ಸದಾಭೂಯಾತ್ ಶ್ರೀ ನೃಸಿಂಹಾಯ ಮಂಗಳಂ।।3।। ಪವಿತ್ರಾಣಾಂ ಪವಿತ್ರಾಯ ಪ್ರಾಪಕಾಯ ಫಲಾತ್ಮನೇ। ಭದ್ರಾಣಾಮಪಿ ಭದ್ರಾಯ ಶ್ರೀನೃಸಿಂಹಾಯ ಮಂಗಳಂ।।4।। ಆದಿವಣ್ ಶಠಕೋಪಾಖ್ಯೈಃ ಮುನಿವರ್ಯೆ ಮಹಾತ್ಮಭಿಃ। ಸಮರ್ಚಿತಾಯ ನಿತ್ಯಾಯ ಶ್ರೀ ನೃಸಿಂಹಾಯ ಮಂಗಳಂ।।5।। ಜಗಜ್ಜನ್ಮಾದಿ ಲಕ್ಷಾಯ ಸ್ವೇಚ್ಛಾ ಸ್ವೀಕೃತ ಮೂರ್ತಯೇ। ವಿಧ್ವಸ್ತಾಖಿಲ ಹೇಯಾಯ ಶ್ರೀ ನೃಸಿಂಹಾಯ ಮಂಗಳಂ।।6।। ಜ್ಞಾನಾನಂದ ಸ್ವರೂಪಾಯ ಜ್ಞಾನಶಕ್ತ್ಯಾದಿಸಿಂಧವೇ। ಬಂಧುವೇ ಸರ್ವಲೋಕಾನಾಂ ಶ್ರೀ ನೃಸಿಂಹಾಯ ಮಂಗಳಂ।।7।। ಕಾಯಾದವ ಪರಿತ್ರಾಣ ಭಾವಿತ ಸ್ತಂಭಜನ್ಮವೇ। ಬ್ರಹ್ಮೇಂದ್ರಾದಿ ಸ್ತುತಾಯಾಸ್ಯಾತ್ ಶ್ರೀ ನೃಸಿಂಹಾಯ ಮಂಗಳಂ।।8।। ಗುಣಲೇಶವಿಹೀನಸ್ಯ ಸರ್ವಹೇಯಾಸ್ಪದಸ್ಯ ಮೇ। ಮಂತೂನಾ ಕ್ಷಂತ್ರೇಷ್ಯನಂತಾನ್ ಸ್ಯಾತ್ ಶ್ರೀ ನೃಸಿಂಹಾಯ ಮಂಗಳಂ।।9।। ಶ್ರೀನಿವಾಸ ಯತೀಂದ್ರೋಕ್ತಂ ಲಕ್ಷ್ಮೀನೃಹರಿ ಮಂಗಳಂ। ಯೇ ಪಠಂತಿ ಮಹಾತ್ಮನಃ ತೇಷಾಂ ಭೂಯಾತ್ತು ಮಂಗಳಂ।।

**ಜಯ ಮಂಗಳಂ... ತುಂಗ ಲಕ್ಷ್ಮೀಪತಿ ನರಸಿಂಗಗೆ ರಾಗ: ಭೈರವಿ, ಝಂಪೆ ತಾಳ**

ಜಯ ಮಂಗಳಂ ನಿತ್ಯ ಶುಭ ಮಂಗಳ ಜಯ ತುಂಗ ಲಕ್ಷ್ಮೀಪತಿ ನರಸಿಂಗಗೆ ।।ಪ।। ಕಂದರ್ಪನಯ್ಯಗೆ ಕೋಟಿಲಾವಣ್ಯಗೆ। ಮಂದರೋದ್ಧಾರ ಮಧುಸೂದನನಿಗೆ। ಕಂದ ಪ್ರಹ್ಲಾದನನು ಕಾಯ್ದ ದೇವನಿಗೆ ಶ್ರೀ। ಇಂದಿರಾರಮಣ ಸರ್ವೋತ್ತಮನಿಗೆ।। 1 ।। ಕರಿರಾಜ ವರದನಿಗೆ ಕರುಣಾ ಸಮುದ್ರನಿಗೆ। ಸರಸಿಜೋದ್ಭವ ಭವವಂದ್ಯ ಹರಿಗೆ। ಗಿರಿಯರಸು ಕಾವೇರಿ ಪುರದ ರಂಗಯ್ಯಗೆ। ಗಿರಿರಾಜಪತಿ ವೃಂದ ಸುರರನಿಧಿಗೆ।। 2 ।। ಅಂಬರೀಷನ ಶಾಪ ಅಪಹರಿಸಿದವನಿಗೆ। ತುಂಬುರ ನಾರದ ಮುನಿವಂದ್ಯಗೆ। ಕಂಬುಕಂಧರ ಪುರಂದರವಿಠಲ ರಾಯಗೆ। ಅಂಬುಜನಾಭಗೆ ಅಜನಪಿತಗೆ।। 3 ।।

## 11. ಶ್ರೀನಿವಾಸಕಲ್ಯಾಣ

**ಏಳಯ್ಯ ಬೆಳಗಾಯಿತು ಬಿಸಿಲು ಮೈದೋರುತಿದೆ ರಾಗ: ಭೂಪಾಳಿ-ಝಂಪೇತಾಳ**

ಏಳಯ್ಯ ಬೆಳಗಾಯಿತು।।ಪ।। ಬೆಳಗಾಯಿತೇಳಯ್ಯ ಬಿಸಿಲು ಮೈದೋರುತಿದೆ। ಸುಳಿವುದೋರಯ್ಯ ನಿನ್ನ ಹಾರೈಸಿ ನಿಂದಿಹರು। ತಡವ ಮಾಡದಿರಯ್ಯ ಸ್ವಾಮಿ ತಿರುಮಲೆರಾಯ। ಸೆಳೆಮಂಚದಿಂದ ಏಳು।।1।। ವೇದವನು ತರಲೇಳು ಮಂದರವ ಪೊರಲೇಳು। ಛೇದಿಸುತ ಅಸುರರನು ಭೂಮಿಯ ತರಲೇಳು। ಕಾದಿ ಹಿರಣ್ಯನ ಕರುಳ ಕೊರಳೊಳಗೆ ಧರಿಸೇಳು। ಕಾದು ಬಲಿ ಬಾಗಿಲೊಳಗೇಳು।।2।। ಭೇದದಲಿ ಭೂಮಿಯ ತ್ರಿಪಾದದಿಂದಳೆಯೇಳು। ಛೇದಿಸುತ ಕ್ಷತ್ರಿಯರ ಕೊಡಲಿಯಿಂ ಕಡಿಯೇಳು। ಸಾಧಿಸುತ ಶರಧಿಯಲಿ ಸೇತುವೆಯ ಕಟ್ಟೇಳು। ನಂದಗೋಪನ ಉದರದೊಳೇಳು।।3।। ಪುರಮೂರ ಗೆಲಬೇಕು ಅರಿವೆಯನು ಕಳೆದೇಳು। ದುರುಳರನು ಕೊಲಬೇಕು ತುರಗ ವಾಹನನೇಳು। ಪರಿಪರಿಯ ಕೆಲಸಗಳ ಮಾಡಲುದ್ಯೋಗಿಸದೆ। ಮರೆದು ನಿದ್ರೆಯ ಗೈವರೆ।।4।। ಆಲದೆಲೆಯಿಂದೇಳು ಮಾಲಕುಮಿ ಬಂದಿಹಳು। ಹಾಲಗಡಲಿಂದೇಳು ಶ್ರೀದೇವಿ ನಿಂದಿಹಳು। ಕಾಲದೆಡೆಯಿಂದೇಳು ಭೂದೇವಿ ಬಂದಿಹಳು। ಸಾಲಮಂಚ ಗಳಿಂದಲಿ ಏಳು।।5।। ನಾಭಿಕಮಲದಿ ಜನಿಸಿದ ಬ್ರಹ್ಮ ಬಂದಿಹನು ಗಂಭೀರ ಗಾಯನದ ನಾರದನು ನಿಂದಿಹನು। ರಂಭೆ ಮೇನಕೆ ಮೊದಲು ನರ್ತನಕೆ ಐದಿಹರು। ಶಂಬಾರಾರಿಪಿತನೆ ಏಳು।।6।। ರಾಜಸೂಯವಕೊಳಲು

ವಾಯುಸುತ ಬಂದಿಹನು ತೇಜಿಯಾಟಕೆ ಅರ್ಜುನನು ಕರೆಯ ಬಂದಿಹನು। ಸಾಜ ಧರ್ಮಜ ಅಗ್ರಪೂಜೆ ಮಾಡುವೆನೆಂದು ಹೂಜಿಯನೆ ಪಿಡಿದುಕೊಂಡು॥7॥ ಉರಿಗೈಯ ನಟ್ಟಿದರೆ ಹರನೋಡಿ ಬಂದಿಹನು। ಗಿರಿಜೆ ವರವನು ಬೇಡೆ ಬಂದು ನಿಂದಿಹಳು ಸುರಪಾರಿಜಾತವನು ಕೊಂಡು ಸುರರಾಜ ಬಂದಿರುವನೇಳಯ್ಯ ಹರಿಯೆ॥8॥ ಕ್ಷಿತಿನಾಥ ನೀನೇಳು ಸತ್ಯಭಾಮೆ ಬಂದಿಹಳು ಮತಿವಂತ ನೀನೇಳು ಜಾಂಬವತಿ ಬಂದಿಹಳು। ಗತಿವಂತ ನೀನೇಳು ಶ್ರೀತುಳಸಿ ಬಂದಿಹಳು। ಏಕಾಂತ ಸೇವೆಯ ಮಾಡಲು॥9॥ ದೇವ ನಿನ್ನಂಘ್ರಿಯ ಪೂಜೆ ಮಾಡುವೆವೆಂದು ಕಾವೇರಿ ಕೃಷ್ಣೆ ಗೌತಮಿ ಗಂಗೆ ಮಲಾಪಹಾರಿ। ಸಾವಧಾನದಿ ಯಮುನೆ ತುಂಗೆ ಸರಸ್ವತಿ। ಭೀಮರಥಿ ನೇತ್ರಾವತಿಯ॥10॥ ದುರಿತ ಬಂಧನವನ್ನು ಪರಿಹರಿಸಿದೆಯಾ ಸ್ವಾಮಿ। ದುರಿತಾರಿ ಮೇಲುಗಿರಿ ಶಿಖರದಲಿ ನಿಂತಿಹೆಯೊ। ದುರಿತತಾಪಕೆ ಚಂದ್ರ ನೀನೆಸಿಕೊಂಡೆಯೊ। ಶ್ರೀ ಪುರಂದರವಿಠಲನೆ॥11॥

## ಉತ್ತಿಷ್ಠೋ ಉತ್ತಿಷ್ಠೋ ಗೋವಿಂದ (ಪ್ರಾತಃಶ್ಲೋಕ)

ಉತ್ತಿಷ್ಠೋ ಉತ್ತಿಷ್ಠೋ ಗೋವಿಂದ ಉತ್ತಿಷ್ಠ ಗರುಡಧ್ವಜ। ಉತ್ತಿಷ್ಠೋ ಕಮಲಾಕಾಂತ ತ್ರೈಲೋಕ್ಯಂ ಮಂಗಳಂ ಕುರು॥

## ಕೌಸಲ್ಯಾ ಸುಪ್ರಜಾ ರಾಮ (ವೆಂಕಟೇಶ್ವರ ಸುಪ್ರಭಾತಮ್)

ಕೌಸಲ್ಯಾ ಸುಪ್ರಜಾ ರಾಮ ಪೂರ್ವಾಸಂಧ್ಯಾ ಪ್ರವರ್ತತೇ। ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಮ್॥1॥ ಉತ್ತಿಷ್ಠೋತಿಷ್ಠ ಗೋವಿಂದ ಉತ್ತಿಷ್ಠ ಗರುಡಧ್ವಜ। ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಳಂ ಕುರು॥2॥ ಮಾತಸ್ಸಮಸ್ತ ಜಗತಾಂ ಮಧುಕೈಟಭಾರೇಃ। ವಕ್ಷೋವಿಹಾರಿಣಿ ಮನೋಹರದಿವ್ಯರೂಪೇ। ಶ್ರೀಸ್ವಾಮಿನಿ ಶ್ರೀತಜನಪ್ರಿಯದಾನಶೀಳೇ। ಶ್ರೀವೆಂಕಟೇಶದಯಿತೇ ತವ ಸುಪ್ರಭಾತಮ್॥3॥ ತವಸುಪ್ರಭಾತಮರವಿಂದಲೋಚನೇ। ಭವತು ಪ್ರಸನ್ನ ಮುಖಚಂದ್ರಮಂಡಲೇ। ವಿಧಿಶಂಕರೇಂದ್ರ ವನಿತಾಭಿವಂದಿತೇ। ವೃಷಶೈಲನಾಥದಯಿತೇ ದಯಾನಿಧೇ॥4॥ ಆತ್ರ್ಯಾದಿಸಪ್ತ ಋಷಯಸ್ಸಮುಪಾಸ್ಯ ಸಂಧ್ಯಾಂ ಆಕಾಶಸಿಂಧು ಕಮಲಾನಿ ಮನೋಹರಾಣಿ। ಆದಾಯ ಪಾದಯುಗಮರ್ಚಯಿತು ಪ್ರಪನ್ನಾಃ। ಶೇಷಾದ್ರಿ ಶೇಖರವಿಭೋ ತವಸುಪ್ರಭಾತಮ್॥5॥ ಪಂಚಾನನಾಬ್ಜ ಭವಷಣ್ಮುಖವಾಸವಾಧ್ಯಾಃ। ತ್ರೈವಿಕ್ರಮಾದಿಚರಿತಂ ವಿಬುಧಾಃ ಸ್ತುವಂತಿ। ಭಾಷಾಪತಿಃ ಪಠತಿ ವಾಸರಶುದ್ಧಿಮಾರಾತ್। ಶೇಷಾದ್ರಿಶೇಖರವಿಭೋ ತವ ಸುಪ್ರಭಾತಮ್॥6॥ ಈಷತ್ಪ್ರಫುಲ್ಲಸರಸೀರುಹನಾರಿಕೇಳ। ಪೂಗದ್ರು ಮಾದಿ ಸುಮನೋಹರಪಾಲಿಕಾನಾಮ್। ಆವಾತಿ ಮಂದಮನಿಲಸ್ಸಹ ದಿವ್ಯಗಂಧೈಃ। ಶೇಷಾದ್ರಿ ಶೇಖರವಿಭೋ ತವ ಸುಪ್ರಭಾತಮ್॥7॥ ಉನ್ಮೀಲ್ಯ ನೇತ್ರ ಯುಗಮುತ್ತಮಪಂಜರಸ್ಥಾಃ। ಪಾತ್ರಾವಶಿಷ್ಟಕದಲೀಫಲಪಾಯಸಾನಿ। ಭುಕ್ತ್ವಾ ಸಲೀಲಮಥ ಕೇಳಿಶುಕಾಃ ಪಠಂತಿ। ಶೇಷಾದ್ರಿ ಶೇಖರವಿಭೋ ತವಸುಪ್ರಭಾತಮ್॥8॥ ತಂತ್ರೀಪ್ರಕರ್ಷ ಮಧುರಸ್ವನಯಾ ವಿಪಂಚ್ಯಾ। ಗಾಯತ್ಯನಂತಚರಿತಂ ತವ ನಾರದೋಪಿ। ಭಾಷಾಸಮಗ್ರಮಸಕೃತ್ಕರಚಾರುರಮ್ಯಂ। ಶೇಷಾದ್ರಿಶೇಖರವಿಭೋ ತವಸುಪ್ರಭಾತಮ್॥9॥ ಭೃಂಗಾವಲೀ ಚ ಮಕರಂದರಸಾನುವಿದ್ಧ। ಝುಂಕಾರಗೀತನಿನದೈಸ್ಸಹ ಸೇವನಾಯ। ನಿರ್ಯಾತ್ಯುಪಾಂತಸರಸೀಕಮಲೋದರೇಭ್ಯಃ। ಶೇಷಾದ್ರಿಶೇಖರವಿಭೋ ತವಸುಪ್ರಭಾತಮ್॥10॥ ಯೋಷಾಗಣೇನ ವರದಧ್ನಿ ವಿಮಥ್ಯಮಾನೇ। ಘೋಷಾಲಯೇಷು ದಧಿಮಂಥನತೀವ್ರ ಘೋಷಾಃ। ರೋಷಾತ್ಕಲಿಂ ವಿದಧತೇ ಕಕುಭಶ್ಚ ಕುಂಭಾಃ। ಶೇಷಾದ್ರಿಶೇಖರವಿಭೋ ತವ ಸುಪ್ರಭಾತಮ್॥11॥ ಪದ್ಮೇಶಮಿತ್ರಶತಪತ್ರಗತಾಳಿ ವರ್ಗಾಃ। ಹರ್ತುಂ ಶ್ರೀಯಂ ಕುವಲಯಸ್ಯನಿಜಾಂಗಲಕ್ಷ್ಮ್ಯಾ। ಭೇರೀನಿನಾದಮಿವ ಬಿಭ್ರತಿ ತೀವ್ರನಾದಂ। ಶೇಷಾದ್ರಿ ಶೇಖರವಿಭೋ ತವಸುಪ್ರಭಾತಮ್॥12॥ ಶ್ರೀಮನ್ನಭೀಷ್ಟ ವರದಾಖಿಲಲೋಕಬಂಧೋ। ಶ್ರೀ ಶ್ರೀನಿವಾಸ ಜಗದೇಖದಯೈಕಸಿಂಧೋ। ಶ್ರೀದೇವತಾಗೃಹ ಭುಜಾಂತರದಿವ್ಯಮೂರ್ತೇ। ಶ್ರೀವೆಂಕಟಾಚಲಪತೇ ತವಸುಪ್ರಭಾತಂ ॥13॥ ಶ್ರೀಸ್ವಾಮಿ ಪುಷ್ಕರಿಣಿಕಾಪ್ಲುವನಿರ್ಮಲಾಂಗಾಃ। ಶ್ರೇಯೋರ್ಥಿನೋ ಹರವಿರಿಂಚಿ ಸನಂದನಾದ್ಯಾಃ। ದ್ವಾರೇ ವಸಂತಿ ಪರವೇತ್ರ ಹತೋತ್ತಮಾಂಗಾಃ। ಶ್ರೀವೇಂಕಟಾಚಲಪತೇ ತವಸುಪ್ರಭಾತಮ್॥14॥ ಶ್ರೀಶೇಷಶೈಲ ಗರುಡಾಚಲ ವೆಂಕಟಾದ್ರಿ। ನಾರಾಯಣಾದ್ರಿ ವೃಷಭಾದ್ರಿ ವೃಷಾದ್ರಿ ಮುಖ್ಯಾಮ್। ಆಖ್ಯಾಂತ ತ್ವದೀಯವಸತೇರನಿಶಂ ವದಂತಿ। ಶ್ರೀವೆಂಕಟಾಚಲಪತೇ ತವಸುಪ್ರಭಾತಮ್॥15॥ ಸೇವಾಪರಾಶ್ಶಿವಸುರೇಶ ಕೃಶಾನುಧರ್ಮ।

ರಕ್ಷೋಂಬು ನಾಥಪವಮಾನಧನಾಧಿನಾಥಾಃ। ಬದ್ಧಾಂಜಲಿ ಪ್ರವಿಲಸನ್ನಿಜಶೀರ್ಷದೇಶಾ ಶ್ರೀವೆಂಕಟಾ ಚಲಪತೇ ತವ ಸುಪ್ರಭಾತಮ್॥ ದಾಟೀಷು ತೇ ವಿಹಗರಾಜ ಮೃಗಾಧಿರಾಜ। ನಾಗಾಧಿರಾಜ ಗಜರಾಜ ಹಯಾಧಿರಾಜಾಃ। ಸ್ವಸ್ವಾಧಿಕಾರ ಮಹಿಮಾಧಿಕಮರ್ಥಯನ್ತೇ। ಶ್ರೀವೆಂಕಟಾಚಲಪತೇ ತವಸುಪ್ರಭಾತಮ್॥17॥ ಸೂರ್ಯೇಂದುಭೌಮ ಬುಧವಾಕ್ಪತಿ ಕಾವ್ಯಶೌರಿ। ಸ್ವರ್ಭಾನುಕೇತು ದಿವಿಷತ್ಪರಿಷತ್ಪ್ರಧಾನಾಃ। ತ್ವದ್ದಾಸದಾಸ ಚರಮಾವಧಿದಾಸ ದಾಸಾಃ। ಶ್ರೀವೆಂಕಟಾಚಲಪತೇ ತವಸುಪ್ರಭಾತಮ್॥18॥ ತ್ವತ್ಪಾದಧೂಳಿಭರಿತ ಸ್ಫುರಿತೋತ್ತಮಾಂಗಾಃ। ಸ್ವರ್ಗಾಪವರ್ಗ ನಿರಪೇಕ್ಷ ನಿಜಾಂತರಂಗಾಃ। ಕಲ್ಪಾಗಮಾಯಾಽಽಕುಲತಾಂ ಲಭನ್ತೇ। ಶ್ರೀವೆಂಕಟಾಚಲಪತೇ ತವ ಸುಪ್ರಭಾತಮ್॥19॥ ತ್ವದ್ಗೋಪುರಾಗ್ರಜಶಿಖರಾಣಿ ನಿರೀಕ್ಷಮಾಣಾಃ। ಸ್ವರ್ಗಾಪವರ್ಗ ಪದವೀಂ ಪರಮಾಂ ಶ್ರಯನ್ತಃ। ಮರ್ತ್ಯಾ ಮನುಷ್ಯಭುವನೇ ಮತಿಮಾಶ್ರಯನ್ತೇ। ಶ್ರೀವೆಂಕಟಾಚಲಪತೇ ತವಸುಪ್ರಭಾತಮ್॥20॥ ಶ್ರೀ ಭೂಮಿನಾಯಕ ದಯಾದಿಗುಣಾಮೃತಾಬ್ಧೇ। ದೇವಾಧಿದೇವ ಜಗದೇಕಶರಣ್ಯ ಮೂರ್ತೇ। ಶ್ರೀಮನ್ನನಂತಗರುಡಾದಿಭಿರರ್ಚಿತಾಂಘ್ರೇ। ಶ್ರೀವೆಂಕಟಾಚಲಪತೇ ತವಸುಪ್ರಭಾತಮ್॥21॥ ಶ್ರೀಪದ್ಮನಾಭ ಪುರುಷೋತ್ತಮ ವಾಸುದೇವ। ವೈಕುಂಠ ಮಾಧವ ಜನಾರ್ಧನ ಚಕ್ರಪಾಣೇ। ಶ್ರೀವತ್ಸಚಿಹ್ನ ಶರಣಾಗತ ಪಾರಿಜಾತ। ಶ್ರೀವೆಂಕಟಾಚಲಪತೇ ತವ ಸುಪ್ರಭಾತಮ್॥22॥ ಕಂದರ್ಪದರ್ಪಹರಸುಂದರದಿವ್ಯಮೂರ್ತೇ। ಕಾಂತಾಕುಚಾಂಬುರುಹ ಕುಟ್ಮಲಲೋಲದೃಷ್ಟೇ। ಕಲ್ಯಾಣನಿರ್ಮಲಗುಣಾಕರ ದಿವ್ಯಕೀರ್ತೇ। ಶ್ರೀವೆಂಕಟಾಚಲಪತೇ ತವ ಸುಪ್ರಭಾತಮ್॥23॥ ಮೀನಾಕೃತೇ ಕಮಠ ಕೋಲ ನೃಸಿಂಹ ವರ್ಣಿನ್। ಸ್ವಾಮಿನ್ ಪರಶ್ವತ ತಪೋಧನ ರಾಮಚಂದ್ರ। ಶೇಷಾಂಶರಾಮ ಯದುನಂದನ ಕಲ್ಕಿರೂಪ। ಶ್ರೀವೆಂಕಟಾಚಲಪತೇ ತವ ಸುಪ್ರಭಾತಮ್॥24॥ ಏಲವಂಗಘನಸಾರ ಸುಗಂಧತೀರ್ಥಂ। ದಿವ್ಯಂ ವಿಯತ್ಸರಸಿ ಹೇಮಘಟೇಷು ಪೂರ್ಣಮ್। ದೃತ್ವಾದ್ಯ ವೈದಿಕ ಶಿಖಾಮಣಯಃ ಪ್ರಹೃಷ್ಟಾ। ಸ್ತಿಷ್ಠನ್ತಿ ವೆಂಕಟಪತೇ ತವ ಸುಪ್ರಭಾತಮ್॥25॥ ಭಾಸ್ವಾನುದೇತಿ ವಿಕಚಾನಿ ಸರೋರುಹಾಣಿ। ಸಂಪೂರಯಂತಿ ನಿನದೈಃ ಕಕುಭೋ ವಿಹಂಗಾಃ। ಶ್ರೀವೈಷ್ಣವಾಸ್ಸತತ ಮರ್ಥಿತ ಮಂಗಳಾಸ್ತೇ। ದಾಮಾಶ್ರಯಂತಿ ತವ ವೇಂಕಟ ಸುಪ್ರಭಾತಮ್॥26॥ ಬ್ರಹ್ಮಾದಯಸ್ಸುರ ವರಾಸ್ಸ ಮಹರ್ಷಯಸ್ತೇ। ಸಂತಸ್ಸನಂದನ ಮುಖಾಸ್ತತ್ವ ಯೋಗಿವರ್ಯಾಃ। ಧಾಮಾಂತಿಕೇ ತವ ಹಿ ಮಂಗಳವಸ್ತುಹಸ್ತಾಃ। ಶ್ರೀವೆಂಕಟಾಚಲಪತೇ ತವಸುಪ್ರಭಾತಮ್॥27॥ ಶ್ರೀಲಕ್ಷ್ಮೀನಿವಾಸ ನಿರವದ್ಯ ಗುಣೈಕಸಿಂಧೂ। ಸಂಸಾರಸಾಗರ ಸಮುತ್ತರಣೈಕಸೇತೋ। ವೇದಾಂತವೇದ್ಯ ನಿಜ ವೈಭವಭಕ್ತಭೋಗ್ಯ। ಶ್ರೀ ವೆಂಕಟಾಚಲಪತೇ ತವ ಸುಪ್ರಭಾತಮ್॥28॥ ಇತ್ಥಂ ವೃಷಾಚಲಪತೇ ರಿಹ ಸುಪ್ರಭಾತಮ್। ಯೇ ಮಾನವಾಃ ಪ್ರತಿದಿನಂ ಪಠಿತುಂ ಪ್ರವೃತ್ತಾಃ। ಶೇಷಾಂ ಪ್ರಭಾತ ಸಮಯೇ ಸ್ಮೃತಿರಂಗಭಾಜಾಂ। ಪ್ರಜ್ಞಾಪರಾರ್ಥಸುಲಭಾಂ ಪರಮಾಂ ಪ್ರಸೂತೇ॥ ಇಂತಿ ಶ್ರೀ ವೆಂಕಟೇಶ ಸುಪ್ರಭಾತಂಸಮಾಪ್ತಮ್॥ ಕಮಲಾಕುಚಚೂಚುಕಕುಂಕುಮ ತೋ। ನಿಯತಾರುಣಿತಾತುಲ ನೀಲತನೋ। ಕಮಲಾಯತಲೋಚನ ಲೋಕಪತೇ। ವಿಜಯೀ ಭವ ವೆಂಕಟಶೈಲಪತೇ॥30॥ ಸಚತುರ್ಮುಖಷಣ್ಮುಖ ಪಂಚಮುಖ। ಪ್ರಮುಖಾಖಿಲ ದೈವತ ಮೌಳಿಮಣೇ। ಶರಣಾಗತವತ್ಸಲ ಶೌರ್ಯನಿಧೇ। ಪರಿಪಾಲಯ ಮಾಂ ವೃಷಶೈಲಪತೇ॥31॥ ಅತಿವೇಲತಿಯಾ ತವ ದುರ್ವಿಷಹೈ। ರನುವೇಲಕೃತೈರಪರಾಧಶತೈಃ। ಭರತಂ ತ್ವರಿತಂ ವೃಷಶೈಲಪತೇ। ಪರಯಾ ಕೃಪಯಾ ಪರಿಪಾಹಿ ಹರೇ॥32॥ ಅಧಿವೆಂಕಟಶೈಲ ಮುಹಾರಮತೇ। ರ್ಜತನಾಭಿಮತಾದಿ ಕದಾನರತಾತ್। ಪರದೇವತಯಾ ಗದಿತಾನ್ನಿಗಮೈ। ಕಮಲಾದಯಿತಾನ್ನ ಪರಂ ಕಲಯೇ॥33॥ ಕಲವೇಣುರವಾವಶಗೋಪವಧೂ। ಶತಕೋಟಿವೃತಾತ್ ಸ್ಮರಕೋಟಿಸಮಾತ್। ಪ್ರತಿವಲ್ಲವಿಕಾಭಿಮತಾತ್ ಸುಖದಾತ್। ವಸುದೇವಸುತಾನ್ನ ಪರಂ ಕಲಯೇ॥34॥ ಅಬಿರಾಮ ಗುಣಾಕರ ದಾಶರಥೇ। ಜಗದೇಕ ಧನುರ್ಧರ ಧೀರಮತೇ। ರಘುನಾಯಕ ರಾಮ ರಮೇಶ ವಿಭೋ। ವರದೋ ಭವ ದೇವ ದಯಾಜಲದೇ॥35॥ ಅವನೀತನಯಾ ಕಮನೀಯಕರಂ। ರಜನೀಕರಚಾರು ಮುಖಾಂಬುರುಹಮ್। ರಜನೀಚರ ರಾಜ ತಮೋ ಮಿಹಿರಂ। ಮಹನೀಯ ಮಹಂ ರಘುರಾಮಮಯೇ॥36॥ ಸುಮುಖಂ ಸುಹೃದಂ ಸುಲಭಂ ಸುಖದಂ। ಸ್ವನುಜಂ ಚ ಸುಕಾಯಮ ಮೋಘಶರಮ್। ಅಪಹಾಯ ರಘೂದ್ವಹಮನ್ಯಮಹಂ। ನಕಥಂಚನ ಕಂಚನ ಜಾತುಭಜೇ॥37॥ ವಿನಾ ವೇಂಕಟೇಶಂ ನನಾಥೋ ನ ನಾಥಃ। ಸದಾ ವೇಂಕಟೇಶಂ ಸ್ಮರಾಮಿ ಸ್ಮರಾಮಿ। ಹರೇ ವೆಂಕಟೇಶ ಪ್ರಸೀದ ಪ್ರಸೀದ। ಪ್ರಿಯಂ ವೆಂಕಟೇಶ ಪ್ರಯಚ್ಛ ಪ್ರಯಚ್ಛ॥ ಅಹಂ ದೂರತಸ್ತೇ ಪದಾಂಭೋಜಯುಗ್ಮ। ಪ್ರಣಾಮೇಚ್ಛಯಾಽಽಗತ್ಯ ಸೇವಾಂ ಕರೋಮಿ॥38॥ ಸಕೃತ್ಸೇವಯಾ ನಿತ್ಯ ಸೇವಾಫಲಂ ತ್ವಂ। ಪ್ರಯಚ್ಛ ಪ್ರಯಚ್ಛ ಪ್ರಭೋ ವೇಂಕಟೇಶ॥39॥ ಅಜ್ಞಾನಿನಾ ಮಯಾ ದೋಷಾ ನ ಶೇಷಾನ್ ವಿಹಿತಾನ್ ಹರೇ। ಕ್ಷಮಸ್ವ

ತ್ರಂ ಕ್ಷಮಸ್ವ ತ್ವಂ ಶೇಷಶೈಲ ಶಿಖಾಮಣೇ।। ಇಂತು ಶ್ರೀ ವೇಂಕಟೇಶ ಸ್ತೋತ್ರ ಸಮಾಪ್ತಮ್।।40।। ಈಶಾನಾಂ ಜಗತೋಽಸ್ಯ ವೆಂಕಟಪತೇ ವಿಷ್ಣೋ ಪರಾಂ ಪ್ರೇಯಸೀಂ। ತದ್ವಕ್ಷಸ್ಥಲನಿತ್ಯ ವಾಸರಸಿಕಾಂ ತತ್ ಕ್ಷಾಂತಿ ಸಂವರ್ಧಿನೀಮ್। ಪದ್ಮಾಲಂಕೃತ ಪಾಣಿಪಲ್ಲವಯುಗಾಂ ಪದ್ಮಾಸನಸ್ಥಾಂ ಶ್ರೀಯಂ। ವಾತ್ಸಲ್ಯಾದಿ ಗುಣೋಜ್ವಲಾಂ ಭಗವತೀಂ ವಂದೇ ಜಗನ್ಮಾತರಂ।।41।। ಶ್ರೀಮಾನ್ ಕೃಪಾಜಲನಿಧೇ ಕೃತಸರ್ವಲೋಕ ಸರ್ವಜ್ಞ ಶಕ್ತ ನತವತ್ಸಲ ಸರ್ವಶೇಷಿನ್। ಸ್ವಾಮಿನ್ ಸುಶೀಲ ಸುಲಭಾಶ್ರಿತ ಪಾರಿಜಾತ। ಶ್ರೀವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।42।। ಆನೂಪುರಾರ್ಪಿತ ಸುಜಾತ ಸುಗಂಧ ಪುಷ್ಪ। ಸೌರಭ್ಯಸೌರಭಕರೌ ಸಮಸನ್ನಿವೇಶೌ। ಸೌಮ್ಯೌ ಸದ್ರಾನುಭವನ್ತ್ರೇಪಿನ ವಾನುಭಾವ್ಯೌ ಶ್ರೀವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।43।। ಸದ್ಯೋವಿಕಾಸಿ ಸಮುದಿತ್ವರ ಸಾಂದ್ರರಾಗ। ಸೌರಭ್ಯನಿರ್ಭರ ಸರೋಹುಹ ಸಾಮ್ಯವಾರ್ತಾಮ್। ಸಮ್ಯಕ್ಷು ಸಾಹಸಪದೇಷು ವಿಲೇಖಯನ್ತೌ। ಶ್ರೀವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।44।। ರೇಖಾಮಯಧ್ವಜ ಸುಧಾಕಲಶಾತಪತ್ರ। ವಜ್ರಾಂಕುಶಾಂಬುರುಹ ಕಲ್ಪಕ ಶಂಖ ಚಕ್ರೈಃ। ಭವ್ಯೈರಲಂಕೃತತಲೌ ಪರತತ್ತ್ವ ಚಿಹ್ನೈಃ। ಶ್ರೀವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।45।। ತಾಮ್ರೋದರದ್ಯುತಿ ಪರಾಜಿತಪದ್ಮರಾಗೌ। ಬಾಹ್ಯೈರ್ಮಹೋಭಿರಭಿಭೂತಮಹೇಂದ್ರನಿಲೌ। ಉದ್ಯನ್ನಖಾಂಶುಭಿರುದಸ್ತ ಶಶಾಂಕಭಾಸೌ। ಶ್ರೀವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।46।। ಸಪ್ರೇಮಭೀತಿ ಕಮಲಾಕರಪಲ್ಲವಾಭ್ಯಾಂ। ಸಂವಾಹನೇಽಪಿ ಸಪದಿ ಕ್ಲಮಮಾದಧಾನೌ। ಕಾಂತಾವವಾಙ್ಮನಸಗೋಚರಸೌಕುಮಾರ್ಯೌ ಶ್ರೀ ವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।47।। ಲಕ್ಷ್ಮೀಮಹೀತದನುರೂಪ ನಿಜಾನುಭಾವ। ನೀಲಾದಿದಿವ್ಯ ಮಹಿಷೀ ಕರಪಲ್ಲವಾನಾಮ್। ಆರುಣ್ಯಸಂಕ್ರಮಣತಃ ಕಿಲ ಸಾಂದ್ರರಾಗೌ। ಶ್ರೀವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।48।। ನಿತ್ಯಾನಮದ್ವಿಧಿಶಿವಾದಿ ಕಿರೀಟಕೋಟಿ। ಪ್ರತ್ಯುಪ್ತದೀಪ್ತ ನವರತ್ನ ಮಹಃಪ್ರರೋಹೈಃ। ನೀರಾಜನಾವಿಧಿಮುದಾರ ಮುಪಾದಧಾನೌ। ಶ್ರೀವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।49।। ವಿಷ್ಣೋಃ ಪದೇ ಪರಮ ಇತ್ಯುದಿತ ಪ್ರಶಂಸೌ। ಯಾ "ಮಧ್ವಉತ್ಸ" ಇತಿ ಭೋಗತ್ಯಯಾಽಪ್ಯುಪಾತ್ತೌ। ಭೂಯಸ್ತಥೇತಿ ತವ ಪಾಣಿ ತಲಪ್ರದಿಷ್ಟೌ। ಶ್ರೀವೇಂಕಟೇಶ ಚರಣೌ ಶರಣಂ ಪ್ರಪದ್ಯೇ।।50।। ಪಾರ್ಥಾಯ ತತ್ಸದೃಶಸಾರಥಿನಾ ತ್ವಯೈವ। ಯಾ ದರ್ಶಿತೌ ಸ್ವಚರಣೌ ಶರಣಂ ವ್ರಜೇತಿ। ಭೂಯೋಽಪಿಮಹ್ಯಮಿಹ ತೌ ಕರದರ್ಶಿತೌ ತೇ। ಶ್ರೀವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।51।। ಮನ್ಮೂರ್ಧ್ನಿ ಕಾಳಿಯಫಣೇ ವಿಕಟಾಟವೀಷು। ಶ್ರೀವೇಂಕಟಾದ್ರಿಶಿಖರೇ ಶಿರಸಿ ಶ್ರುತೀನಾಮ್। ಚಿತ್ತೇಽಪ್ಯನನ್ಯ ಮನಸಾಂ ಸಮಮಾಹಿತೌ ತೇ। ಶ್ರೀವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।52।। ಆಮ್ಲಾನ ಹೃಷ್ಯದವನೀತಲ ಕೀರ್ಣಪುಷ್ಪೌ। ಶ್ರೀವೆಂಕಟಾದ್ರಿಶಿಖರಾಭರಣಾಯಮಾನೌ। ಆನಂದಿತಾಖಿಲಮನೋನಯ ನೌತವೈತೌ। ಶ್ರೀವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।53।। ಪ್ರಾಯಃ ಪ್ರಪನ್ನ ಜನತಾ ಪ್ರಥಮಾವಗಾಹ್ಯೌ। ಮಾತುಃ ಸ್ತನಾವಿವ ಶಿಶೋರಮೃತಾಯಮಾನೌ। ಪ್ರಾಪ್ತೌ ಪರಸ್ಪರ ತುಲಾಮತುಲಾಂತರೌ ತೇ। ಶ್ರೀವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।54।। ಸತ್ವೋತ್ತರೈ ಸ್ಸತತ ಸೇವ್ಯಪದಾಂಬುಜೇನ ಸಂಸಾರತಾರಕ ದಯಾರ್ದ್ರದೃಗಂಚಲೇನ। ಸೌಮ್ಯೋಪಯಂತೃಮುನಿನಾ ಮಮ ದರ್ಶಿತೌ ತೇ। ಶ್ರೀವೆಂಕಟೇಶ ಚರಣೌ ಶರಣಂ ಪ್ರಪದ್ಯೇ।।55।। ಶ್ರೀಶಶ್ರೀಯಾ ಘಟಕಯಾ ತ್ವದು ಪಾಯಭಾವೇ। ಪ್ರಾಪ್ಯೋ ತ್ವಯಿ ಸ್ವಯಮು ಪೇಯತಯಾ ಸ್ಫುರಂತ್ಯಾ। ನಿತ್ಯಾಶ್ರಿತಾಯ ನಿರವದ್ಯ ಗುಣಾಯ ತುಭ್ಯಂ। ಸ್ಯಾಂಕಿ ಕಿಂಕರೋ ವೃಷಗಿರೀಶ ನ ಜಾತು ಮಹ್ಯಮ್।।56।।

## ಭಕ್ತಜನ ಸಂರಕ್ಷಣ (ಉದಯರಾಗ)

ಭಕ್ತಜನ ಸಂರಕ್ಷಣ। ಭಕ್ತಜನ ಸಂರಕ್ಷ ಭವದುರಿತ ಸಂಹಾರಿ। ಭಕ್ತರಾ ಸುರಧೇನು - ತರುವೆ ಚಿಂತಾಮಣಿಯೆ। ಭಕ್ತರಾಧೀನನೆಂಬುವ ಬಿರುದು ಅನುಗಾಲ ಪೊತ್ತ ತಿಮ್ಮಪ್ಪ ಏಳೊ ।।ಅ।। ಅಂಬರವು ತಾಂಬ್ರಮಯವಾಗಿ ಗರುಡಾಗ್ರಜನು। ಇಂಬಿನಲಿ ತಲೆದೋರೆ ಕಿರಣಗಳು ಹರಹಿದುವು। ಅಂಬುಜ ವಿರೋಧಿ ಕಳೆಗುಂದಿ ತಾರಾನಿಕರವಂಬರದಿ ರೂಹು ಮಾಸೆ। ಕುಂಭಿಣಿಯ ಮುಸುಕಿರ್ದ ಕತ್ತಲೆ ಪರಿದುಪೋಗೆ। ಅಂಬುಜದಳಕ್ಕೆ ಮರಿದುಂಬಿಗಳು ಎರಗಿದವು। ತಾಂಬ್ರಚೂಡವು ಧ್ವನಿಮಾಡಿ ಕೂಗಿತು ಸರಸಿಜಾಂಬಕ ಮಂಚದಿಂದೇಳೊ।।1।। ಉದಯ ಪರ್ವತಕೆ ರಥ ನೂಕಿದನು ಮಾರ್ತಾಂಡ। ಉದಧಿತೆರೆ ತಗ್ಗಿದುವು ಉರಗ ಪೆಡೆಯೆತ್ತಿದನು। ಗದಗದನೆ ನಡುಗಿ ದಾನವರು ಭಯದಿಂದ ಅಡಗಿದರು ದಶದಿಕ್ಕಿನೊಳಗೆ। ತ್ರಿದಶರಬ್ಬರಿಸಿ ಆನಕದುಂದುಭೀ ಶಂಖ। ಧಂಧಂ ಧಣಾ ಸರಿಗಮಪಧನೀ ಯೆಂದೆನುತ। ವದರುತ್ತ ಸುಮವರ್ಷವನು ಸುರಿಸಿ ಸ್ತುತಿಸಿದರು ಸದಮಲಾನಂದ ತಿಮ್ಮಾ।।2।। ನಾರಿಯರು ಬಂದು ಅಂಗಳ ಬಳಿದು ಗಂಧದಾ। ಸಾರಣೆಯನೆಳೆದು ಮುತ್ತಿನ ರಂಗವಾಲೆ

ವಿಸ್ತಾರದಿಂದಲಿ ಪಂಚವರ್ಣಿಗೆಯನಿಟ್ಟು ಹೊಸತೋರಣ ಮಕರ ಕನ್ನಡಿ। ದ್ವಾರದಲಿ ಬಿಗಿದರ್ಥಿಯಲಿ ಗೊಲ್ಲ ಕಟ್ಟಿಗೇ। ಕಾರ ಪರಿವಾರದವರೆಲ್ಲ ವೊಪ್ಪುತಿದಾರೆ। ದ್ವಾರಕರು ಸಾರಿದರು ಭಟರು ಹೊಗಳಿದರು ಕಂಸಾರಿ ಕೋನೇರಿವಾಸ॥3॥ ನೃತ್ಯಗಾರರು ಬಂದು ತತ್ಥಿಗಿಣಿ ತತ್ಥೈಯ। ತಿತ್ತಿರಿ ಮೃದಂಗ ಜೊತೆ ತಪ್ಪದಂದದಿ ತಾಳ। ಬತ್ತೀಸರಾಗದಲಿ ಎತ್ತಿ ಧ್ವನಿತೋರುತ್ತ ನೃತ್ಯಪಾಡುತ್ತ ಕುಣಿಯೆ। ಮುತ್ತೈದೆಯರು ಬಂದು ಮುತ್ತಿನಾರತಿ ಪಿಡಿದು। ಮಿತ್ರಭಾವದಿ ನಿಮ್ಮ ಅಡಿಗಳಿಗೆ ಹರಿವಾಣ। ಎತ್ತುವೆವು ಎಂದೆನುತ ಕಾದು ನಿಂದೈದಿ ನೋಡುತ್ತಲಿದ್ದಾರೆ ಸರ್ವೇಶ॥4॥ ಕಾದೋದಕ ಸುವಿಮಲ ಕಮ್ಮೆಣ್ಣೆ ಕಸ್ತೂರಿ। ಸ್ವಾದು ಜವ್ವಾಜಿ ಚಂದನ ಗಂಧ ದ್ರವ್ಯಗಳ। ಆದರಿಸಿ ಪಿಡಿದ ದರ್ಪಣ ಹೇಮಗದ್ದುಗೆಯ ಪಾದುಕಾ- ಪಟ್ಟುವಸನ। ಈ ಧರೆಯ ಮೇಲಿರ್ದ ಉಡುಗೆ ತೊಡಿಗೆಯ ಕರ್ಪುರಾದಿತಾಂಬೂಲ ನಿರ್ಮಲ ದಾದಿಯರು ಪಿಡಿದು। ಕಾದು ನಿಂದೈದಾರೆ ಹೊನ್ನ ಬಾಗಿಲಮುಂದೆ ಆದಿಹರಿ ಪರಮ ಪುರುಷ॥5॥ ದಂಡಿಗೆ ಶಂಖತಾಳ ತಂಬೂರಿ ಜಾಂಗಟೆಯ। ಗೊಂಡು ನಿನ್ನಯ ಪರಮ ಪ್ರೀತ್ಯರ್ಥ ದಾಸರು। ಹಿಂಡು ಹಿಂಡಾಗಿ ಸಮ್ಮೊಗವಾಗಿ ನಿಂದು ಬೊಮ್ಮಾಂಡ ಕಟಿಹ ಬಿಚ್ಚು। ತಂಡ ತಂಡದಿ ಗೆಜ್ಜೆ ಕಟ್ಟಿ ಅಭಿನಯ ತಿರುಹಿ। ಕೊಂಡಾಡೆ ಶಬ್ದ ಪ್ರತಿಶಬ್ದವಾಗುತಿದೆ ಭೂ- ಮಂಡಲಾದೊಳಗೆ ಈ ಸೊಬಗು ಬಲ್ಲವರಾರು ಕುಂಡಲಗಿರಿವಾಸ ತಿಮ್ಮಾ ॥16॥ ಗೋತ್ರಾರಿ ಹರಿ ಧರ್ಮ ಪುಣ್ಯ ಜನಪನು ವರುಣ। ವೀತಿ ಹೋತ್ರನಸಖನು ಯಕ್ಷೇಶ ಕೈಲಾಸ। ಪತಿ ಸೂರ್ಯ ಅತ್ರಿನಂದನರು ವಾಹನವೇರಿ ಚಿತ್ತದಲಿ ಮುಖ್ಯರಾದ। ಮೈತ್ರಾವರುಣಿ ಜಾಮದಗ್ನಿ ಕಶ್ಯಪ ವಿಶ್ವಾಮಿತ್ರ ಸನಕಾದಿಗಳು ನಾರದರೆ ಮೊದಲಾಗಿ। ಸ್ತೋತ್ರವನು ಮಾಡುತ್ತಲಿದ್ದಾರೆ ಲಕ್ಷ್ಮೀಕಳತ್ರ ಜಗದ್ಬರ್ತ ತಿಮಾ:। ನಿಚ್ಚ ಏಳುವ ಸಮಯ ಮೀರಿತೋ ಇಂದೀಗ। ಎಚ್ಚರಿಕೆ ಪುಟ್ಟದೇ ಎಲೊ ದೇವ ಶ್ರೀದೇವಿ॥ ॥7॥ ಮೆಚ್ಚುಗೊಳಿಸುತ್ತ ಬಿಗಿದಪ್ಪಿ ರತಿಕ್ರೀಡೆಯಲಿ ಮೆಚ್ಚಿಸಿದ ಮಹಸರಸವೆ। ಮುಚ್ಚಟೆಯಿದೇಂ ನಿದ್ರೆ ತಿಳಿಯಲಾಗದೆ ಸ್ವಾಮಿ। ಕುಚ್ಛಿತನ ಸೊಲ್ಲು ಕರ್ಣಕೆ ಬೀಳದಾಯಿತೇ। ಹೆಚ್ಚಿನಾ ಪದವಿ ಮತ್ತೇನು ಬಂದಿತೊ ಕಾಣೆ ಸಚ್ಚಿದಾನಂದಾತ್ಮಕ॥8॥ ನಿದ್ರೆಗೆವೆ ಹಾಕದಿರೊ, ನೀರೊಳಗೆ ನೀನಿರೊ, ಉಪದ್ರ ಭೂಮಿಗೆ ಕಳೆಯೊ, ಕಶ್ಯಪನ ಸುತನಳಿ, ಸ-ಮುದ್ರ ರಾಣಿಯ ಪಡೆಯೊ, ರಾಯರಾಯರ ತಡೆಯೊ, ಮುದ್ರೆ ಭೂಮಿಜೆಗೆ ಕಳುಹೊ। ಅದ್ರಿಯುದ್ಧರಿಸೊ, ಮುಪ್ಪುರವ ಸಂಹರಿಸೊ, ಕಲಿ- ಕ್ಷುದ್ರಕಳೆ, ನಿದ್ರೆ ಸಾಕೆಂದು ಶ್ರುತಿ ಸಾರುತಿದೆ। ಭದ್ರಮೂರುತಿ ವಿಜಯ ವಿಠಲ ವೆಂಕಟಕಾದ್ರವೇಯ ಹಾಸಿಗೆಯಿಂದೇಳೊ॥9॥

**ತೆರೆತೀಯಗರಾದಾ** — **ರಾಗ: ಗೌಳಿಪಂತು–ಆದಿತಾಳ**

ತೆರೆತೀಯಗರಾದಾ ನಾ ಲೋನಿ। ತಿರುಪತಿ ವೆಂಕಟರಮಣ ಮತ್ಸರಮನು॥ಪ॥ ಪರಮ ಪುರುಷ ಧರ್ಮಾದಿ ಮೋಕ್ಷಮುಲ। ಬಾರದ್ರೋಲುಚುನ್ನದಿ ನಾಲೋನಿ॥ಅ.ಪ॥ ಮತ್ಸ್ಯಮಂಜಯಾ ಕಲಿಗೊನಿ ಗಾಲಮುಚೇ। ಮಗ್ನಮೈನರೀತಿನುನ್ನದಿ। ಅಚ್ಚಮೈನ ದೀಪ ಸನ್ನಿಧಿನಿ ಮರು। ಗಡ್ಡ ಬಡಿ ಚೆರಚೆನಟ್ಲುನ್ನದಿ॥1॥ ಇರವೊಂದಗ ಭುಜಿಯಿಂಚು ಸಮಯಮುನ । ನೀಗ ದಗುಲು ರೀತಿನುನ್ನದಿ ಹರಿಧ್ಯಾನಮು ಜೇಯು ವೇಳ ಚಿತ್ತಮು । ಯಂತ್ಯಜುವಾಡಕು ಬೋಯಿನಟ್ಟುನ್ನದಿ ॥2॥ ವಾಗುರಮನಿ ತೆಲಿಯಕ ಮೃಗಗಣಮುಲು। ವಚ್ಚಿತಗುಲು ರೀತಿನುನ್ನದಿ। ವೇಗಮೆ ನೀ ಮತಮು ನನುಸರಿಂಚಿನ। ತ್ಯಾಗರಾಜನುತ ಮದ ಮತ್ಸರಮನು॥ತೆ....॥3॥

**ಸುವರ್ಣಗಿರಿಯ ಭೂಪ** — **ರಾಗ: ಕುರಂಜಿ**

ಸುವರ್ಣಗಿರಿಯ ಭೂಪ। ಎನಗೆ ತೋರಿಸೊ ರೂಪ। ಹಚ್ಚುವೆ ನಿನಗೆ ದೀಪ। ಎನ್ನ ಮುಂದಕ್ಕುದ್ಧರಿಸೊ ಭೂಪಾ ಅಕ್ಕೋ ಅಲ್ಲಿದ್ದಾನೆ। ಇಕ್ಕೋ ಕಾಣಿಸುತಾನೆ॥ಪ॥ ಏಕಾವಳೀಸರ ಮೇಲೆ ಮುತ್ತಿನಹಾರ। ಪೀತಾಂಬರಧಾರ। ನಿನ್ನ ನೋಡಿದರೆ ಮನೋಹರ॥1॥ ವಜ್ರದ ಉಡಿದಾರ ವಿಟ್ಟ। ಮುತ್ತಿನ ತೊಡುಗೆಯ ತೊಟ್ಟ। ಕೆತ್ತಿದ ಕಿರೀಟ ವಿಟ್ಟ। ಸೃಷ್ಟಿಗೆ ವರಗಳ ಕೊಟ್ಟ॥2॥ ನಾಲ್ಕು ಬೀದಿಗಳಿಂದಾ। ಗರುಡನೇರಿಬಂದ। ಲಕ್ಷ್ಮೀದೇವಿಯರಿಂದ। ಬೀದಿ ಮೆರೆವೊದೇ ಚೆಂದ॥3॥ ಸ್ವಾಮಿ ಪುಷ್ಕರಣಿ ವಾಸ। ಎನಗೆ ತೋರಿಸೊ ಪೋಷ। ಸಜ್ಜನರಲ್ಲಿವಾಸ। ಶ್ರೀ ವೆಂಕಟಗಿರಿನಿವಾಸ॥4॥ ಸರ್ವರಲ್ಲಿದ್ದಾನೆ ಸಜ್ಜನರ ಪಾಲಿಸುತಾನೆ। ಅಕ್ಕೋ ಅಲ್ಲಿದ್ದಾನೆ. ಇಕ್ಕೋ ಕಾಣಿಸುತ್ತಾನೆ॥5॥

**ಕಂಡೆ ಕಂಡೆ ಸ್ವಾಮಿಯ ಬೇಡಿಕೊಂಡೆ** **ರಾಗ: ಸುರುಟಿ**

ಕಂಡೆ ಕಂಡೆ ಸ್ವಾಮಿಯ ಬೇಡಿಕೊಂಡೆ॥ಪ॥ ಕಂಡೆ ತಿರುಪತಿ ವೆಂಕಟೇಶನ। ಕಾರಣಾತ್ಮಕ ಸಾರ್ವಭೌಮನ। ಕಾಮಿತಾರ್ಥವ ನೀವದೇವನ। ಕರುಣಾನಿಧಿ ಎಂದೆನಿಸಿ ಮೆರೆವನ। ॥ಅ.ಪ.॥ ಕೋಟಿಸೂರ್ಯ ಪ್ರಕಾಶವೆನಿಪ ಕಿರೀಟವನ್ನು ಮಸ್ತಕದಿ ಕಂಡೆನು। ನೋಟಕಾಶ್ಚರ್ಯವಾದ ನಗೆಮುಖ ನೊಸಲೊಳಗೆ ತಿರುಮಣಿಯ ಕಂಡೆನು॥ ಸಾಟಿಯಿಲ್ಲದ ಶಂಖಚಕ್ರವ ಚತುರಹಸ್ತದಲಿರಲು ಕಂಡೆನು। ಬೂಟಕದ ಮಾತಲ್ಲ ಕೇಳಿರೋ ಭೂರಿದೈವದ ವೆಂಕಟರಮಣನಂಘ್ರಿಯ॥1॥ ಉರದಿ ಶ್ರೀದೇವಿ ಇರಲು ಕಂಡೆನು। ಉನ್ನತದ ಕೌಸ್ತುಭವ ಕಂಡೆನು। ಗರುಡ ಗಂಧರ್ವ ಕಿನ್ನರಾದಿಗಳಿರಲು। ಎಡಬಲದಲ್ಲಿ ಕಂಡೆನು। ತರತರದಿ ಭಕ್ತರಿಗೆ ವರಗಳ ಕರೆದು ಕೊಡುವುದ ನಾನು ಕಂಡೆನು। ಶರಧಿಶಯನ ಶೇಷಗಿರಿಯ ವರದ ವೇಂಕಟ ರಮಣನಂಘ್ರಿಯ॥2॥ ತಪ್ಪು ಕಾಣಿಕೆ ಕಪ್ಪಗಳ ಸಮಸ್ತ ದೇಶಗಳಿಂದ ತರಿಸುವ। ಉಪ್ಪು ಓಗರೆಗಳನೆ ಮಾರಿಸಿ ಉಚಿತದಿಂದಲಿ ಹಣವ ಗಳಿಸುವ। ಇಪ್ಪತ್ತು ದುಡ್ಡಿಗೆ ಸೇರು ತೀರ್ಥವ ಒಪ್ಪದಲಿ ಕ್ರಯಮಾಡಿ ಕೊಡಿಸುವ। ಸರ್ಪಶಯನನ ಶ್ರೀನಿವಾಸನ ನಮ್ಮಪ್ಪ ಪುರಂದರ ವಿಠಲನಂಘ್ರಿಯ॥3॥

**ಬಿಡೆನೋ ನಿನ್ನಂಘ್ರಿ ಶ್ರೀನಿವಾಸಾ** **ರಾಗ: ಯಮನ್‌ಕಲ್ಯಾಣಿ**

ಬಿಡೆನೋ ನಿನ್ನಂಘ್ರಿ ಶ್ರೀನಿವಾಸಾ। ಎನ್ನ ದುಡಿಸಿಕೊಳ್ಳೆಲೋ ಶ್ರೀನಿವಾಸಾ॥ಪ॥ ನಿನ್ನುಡಿಯೇ ಜಿತಲ್ಲೋ ಶ್ರೀನಿವಾಸಾ। ನನ್ನ ನಡೆತಪ್ಪು ಕಾಯೋ ಶ್ರೀನಿವಾಸಾ॥ಅ.ಪ॥ ಬಡಿಯೋ ಬೆನ್ನಲಿ ಶ್ರೀನಿವಾಸಾ। ನನ್ನೊಡಲು ಹೊಯ್ಯದಿರೋ ಶ್ರೀನಿವಾಸಾ। ನಾ ಬಡವ ಕಾಣೆಲೊ ಶ್ರೀನಿವಾಸಾ। ನಿನ್ನೊಡಲ ಹೊಕ್ಕೆನೊ ಶ್ರೀನಿವಾಸಾ॥1॥ ಪಂಜು ಪಿಡಿವೆನೊ ಶ್ರೀನಿವಾಸಾ। ನಿನ್ನೆಂಜಲ ಬಳಿದುಂಬೆ ಶ್ರೀನಿವಾಸಾ। ನಾ ಸಂಜೆ ಉದಯಕೆ ಶ್ರೀನಿವಾಸಾ। ಕಾಳಂಜೆ ಪಿಡಿವೇನೋ ಶ್ರೀನಿವಾಸಾ॥2॥ ಸತ್ತಿಗೆ ಚಾಮರ ಶ್ರೀನಿವಾಸಾ। ನಾನೆತ್ತಿಕುಣಿವೆನೋ ಶ್ರೀನಿವಾಸಾ। ನಿನ್ನ ರತ್ತನಹಾವಿಗೆ ಶ್ರೀನಿವಾಸಾ। ನಾಹೊತ್ತು ನಲಿವೆನೋ ಶ್ರೀನಿವಾಸಾ॥3॥ ಹೇಳಿದಂತಾಲಿಪೆ ಶ್ರೀನಿವಾಸಾ। ನಿನ್ನಾಳಿಗಾಳಾಗಿಹೆ ಶ್ರೀನಿವಾಸಾ। ಅವರೂಳಿಗವಾ ಮಾಳ್ಪೆ ಶ್ರೀನಿವಾಸಾ। ನನ್ನ ಪಾಲಿಸೋ ಬಿಡದೇ ಶ್ರೀನಿವಾಸಾ॥4॥ ನಿನ್ನ ನಾಮಾ ಹೋಳಿಗೆ ಶ್ರೀನಿವಾಸಾ। ಕಳ್ಳಕುನ್ನಿನಾನಾಗಿಹೆ ಶ್ರೀನಿವಾಸಾ। ಕಟ್ಟೆ ನಿನ್ನವರೊದ್ದರೆ ಶ್ರೀನಿವಾಸಾ। ನನಗಿನ್ನು ಲಜ್ಜೇತಕೆ ಶ್ರೀನಿವಾಸಾ॥5॥ ಬೀಸಿಕೊಲ್ಲಲವರೆ ಶ್ರೀನಿವಾಸಾ। ಮುದ್ರೆಕಾಸಿ ಚುಚ್ಚಲವರೆ ಶ್ರೀನಿವಾಸಾ।ಮಿಕ್ಕ ಘಾಸಿಗಂಜೆನಯ್ಯಾ ಶ್ರೀನಿವಾಸಾ। ಎಂಜಲಾಸೆಯ ಬಂಟನಾ ಶ್ರೀನಿವಾಸಾ॥6॥ ಹೇಸಿನಾನಾದರೆ ಶ್ರೀನಿವಾಸಾ। ಹರಿದಾಸರೊಳು ಪೊಕ್ಕೆ ಶ್ರೀನಿವಾಸಾ। ಅವರ ಭಾಷೆಯ ಕೇಳಿದೆ ಶ್ರೀನಿವಾಸಾ। ಆವಾಸಿಯ ಸೈರಿಸೋ ಶ್ರೀನಿವಾಸಾ॥7॥ ತಿಂಗಳವನಲ್ಲ ಶ್ರೀನಿವಾಸಾ। ವತ್ಸರಂಗಳವನಲ್ಲ ಶ್ರೀನಿವಾಸಾ। ರಾಜಂಗಳ ಸವಡಿಪೆ ಶ್ರೀನಿವಾಸಾ। ಭವಂಗಳ ದಾಟುವೆ ಶ್ರೀನಿವಾಸಾ॥8॥ ನಿನ್ನವ ನಿನ್ನವ ಶ್ರೀನಿವಾಸಾ। ನಾನನ್ಯವನರಿಯೆನು ಶ್ರೀನಿವಾಸಾ। ಅಯ್ಯಾ ಮನ್ನಿಸೋ ಶ್ರೀನಿವಾಸಾ। ಪ್ರಸನ್ನ ವೆಂಕಟಾದ್ರಿ ಶ್ರೀನಿವಾಸಾ॥9॥

**ಗೋವಿಂದಾ ಗೋವಿಂದಾ ಅತಿ ಆನಂದ** **ರಾಗ: ಕಲಾವತಿ-ಆದಿತಾಳ**

ಗೋವಿಂದಾ ಗೋವಿಂದಾ ಅತಿ ಆನಂದ ಸಕಲ ಸಾಧನವೋ ನಿನ್ನಾನಂದ॥ಪ॥ ಅಣುರೇಣು ತೃಣಕಾಷ್ಠ ಪರಿಪೂರ್ಣ ಗೋವಿಂದ। ನಿರ್ಮಲಾತ್ಮಕನಾಗಿ ಇರುವುದೆ ಆನಂದ॥1॥ ಸೃಷ್ಟಿ ಸ್ಥಿತಿ ಲಯ ಕಾರಣ ಗೋವಿಂದ। ಈ ಪರಿ ಮಹಿಮೆಯ ತಿಳಿಯೋದೆ ಆನಂದ॥2॥ ಮಂಗಳಮಹಿಮ ಪುರಂದರವಿಠಲ। ಹಿಂಗದೆ ದಾಸರ ಸಲಹೋದೆ ಆನಂದ॥3॥

**ನಿನ್ನ ನಂಬಿ ಬಂದೆ ಎನ್ನ ಕೈ ಬಿಡದಿರು** **ರಾಗ: ಆರಭಿ**

ನಿನ್ನ ನಂಬಿ ಬಂದೆ ಎನ್ನ ಕೈ ಬಿಡದಿರು। ಘನ್ನ ಮಹಿಮನೇ ಶ್ರೀನಿವಾಸಾ॥ ಪನ್ನಗ ಶಯನ ಆಪನ್ನ ರಕ್ಷಕ। ಪ್ರಸನ್ನನಾಗೋ ಬೇಗ ಶ್ರೀನಿವಾಸಾ॥ಪ॥ ಜನನೀ ಜನಕ ನೀನೆ ಶ್ರೀನಿವಾಸಾ। ಎನ್ನ ಅನುಬಂಧಿಯು ನೀನೆ ಶ್ರೀನಿವಾಸ॥ ಜನ್ಮ

ಜನ್ಮದೊಳಗೆ ಶ್ರೀನಿವಾಸ। ಎನ್ನ ಉದ್ಧರಿಸುವವ ನೀನೆ ಶ್ರೀನಿವಾಸಾ॥1॥ ದೇಶ ದೇಶವ ತಿರುಗಿ ನಾನು ಶ್ರೀನಿವಾಸಾ। ಬಹು ಕ್ಲೇಶ ಪಟ್ಟಿರುವೆನು ಶ್ರೀನಿವಾಸಾ॥ ಆಶಾಪಾಶವ ಬಿಡಿಸೋ ಶ್ರೀನಿವಾಸಾ। ನಿನ್ನ ದಾಸರ ಸಂಗವ ಕೊಡು ಶ್ರೀನಿವಾಸಾ॥2॥ ಬಂಧನವ ಕೊಡುವವ ಶ್ರೀನಿವಾಸಾ। ಭವ ಬಂಧನವ ಬಿಡಿಸುವವ ಶ್ರೀನಿವಾಸಾ॥ ಅಂದು ನೀನೆ ಇಂದು ನೀನೆ ಶ್ರೀನಿವಾಸಾ। ಎಂದೆಂದಿಗೂ ನೀನೆ ಶ್ರೀನಿವಾಸಾ॥3॥ ಹೃದಯದಲ್ಲಿ ನಿನ್ನ ರೂಪ ಶ್ರೀನಿವಾಸಾ। ಎನ್ನ ವದನದಲ್ಲಿ ನಿನ್ನ ನಾಮ ಶ್ರೀನಿವಾಸಾ। ಸದಯನಾಗಿ ಒದಗಿ ಎನಗೆ ಶ್ರೀನಿವಾಸಾ। ಒಲಿದು ಬಂದು ಪಾಲಿಸಯ್ಯ ಶ್ರೀನಿವಾಸಾ॥4॥ ಝಲ್ಲರಿಯ ನೆರಳಿನಂತೆ ಶ್ರೀನಿವಾಸಾ। ಬಹು ತಲ್ಲಣವಗೊಳಿಸುವನೆ ಶ್ರೀನಿವಾಸಾ। ಎಲ್ಲಾ ಕಾಲದಲು ಶ್ರೀನಿವಾಸಾ। ಸಿರಿ ವಲ್ಲಭನೇ ಎನ್ನ ತಂದೆ ವೆಂಕಟೇಶ॥5॥

**ತಿರುಪತಿ ವೇಂಕಟರಮಣ** **ರಾಗ: ಸಿಂಧುಭೈರವಿ-ಆದಿತಾಳ**

ತಿರುಪತಿ ವೇಂಕಟರಮಣ, ನಿನಗೇತಕೆ ಬಾರದು ಕರುಣ॥ಪ॥ ನಂಬಿದೆ ನಿನ್ನಯ ಚರಣ, ಪರಿಪಾಲಿಸಬೇಕೊ ಕರುಣ॥ಅ.ಪ॥ ಅಳಗಿರಿಯಿಂದಲಿ ಬಂದಾ ಸ್ವಾಮಿ। ಅಂಜನಗಿರಿಯಲಿ ನಿಂದ। ಕೊಳಲೂದೊ ಧ್ವನಿ ಚಂದಾ ನಮ್ಮ। ಕುಂಡಲರಾಯ ಮುಕುಂದ॥1॥ ಬೇಟೆಯಾಡುತ ಬಂದಾ। ಸ್ವಾಮಿ ಬೆಟ್ಟದ ಮೇಲೆ ನಿಂದಾ। ನೀಟುಗಾರ ಗೋವಿಂದಾ। ಅಲ್ಲಿ ಜೇನು ಸಕ್ಕರೆಯನು ತಿಂದ॥2॥ ಮೂಡಲಗಿರಿಯಲಿ ನಿಂತ ಮುದ್ದು। ವೆಂಕಟಪತಿ ಬಲವಂತ। ಈಡಿಲ್ಲ ನಿನಗೆ ಶ್ರೀಕಾಂತಾ। ಈರೇಳು ಲೋಕಕನಂತ॥3॥ ಆಡಿದರೆ ಸ್ಥಿರವಪ್ಪ। ಅಬದ್ಧಗಳಾಡಲು ಒಪ್ಪ। ಬೇಡಿದ ವರಗಳನಿಪ್ಪ। ನಮ್ಮ ಮೂಡಲಗಿರಿ ತಿಮ್ಮಪ್ಪ॥4॥ ಅಪ್ಪವು ಅತಿರಸ ಮೆದ್ದ। ಸ್ವಾಮಿ ಅಸುರರ ಕಾಲಲಿ ಒದ್ದ। ಸತಿಯರ ಕೂಡಾಡುತಲಿದ್ದ। ಸ್ವಾಮಿ ಸಕಲ ದುರ್ಜನರನು ಗೆದ್ದ॥5॥ ಬಗೆಬಗೆ ಭಕ್ಷ್ಯ ಪರಮಾನ್ನ। ನಾನಾಬಗೆಯ ಸಕಲ ಶಾಲ್ಯಾನ್ನ। ಬಗೆಬಗೆ ಸೊಬಗು ಮೋಹನ್ನ। ನಮ್ಮ ನಗೆಮುಖದ ಪ್ರಸನ್ನ॥6॥ ಕಾಶೀ ರಾಮೇಶ್ವರದಿಂದ। ಅಲ್ಲಿ ಕಾಣಿಕೆ ಬರುವುದೆ ಚಂದ। ದಾಸರ ಕೂಡೆ ಗೋವಿಂದ। ಅಲ್ಲಿ ದಾರಿ ನಡೆವುದೇ ಚಂದ॥7॥ ಎಲ್ಲ ದೇವರ ಗಂಡ। ಅವ ಚಿಲ್ಲರೆ ದೈವರ ಮಿಂಡ। ಬಲ್ಲಿದರಿಗೆ ಉದ್ದಂಡ। ಶಿವನ ಬಿಲ್ಲ ಮುರಿದ ಪ್ರಚಂಡ॥8॥ ಕಾಸು ತಪ್ಪಿದರೆ ಪಟ್ಟಿ। ಬಡ್ಡಿ ಕಾಸುಬಿಡದೆ ಗಂಟು ಕಟ್ಟಿ। ದಾಸನೆಂದರೆ ಬಿಡ ಗಟ್ಟಿ। ನಮ್ಮ ಕೇಸಕ್ಕಿ ತಿಮ್ಮಪ್ಪಸೆಟ್ಟಿ॥9॥ ದಾಸರ ಕಂಡರೆ ಪ್ರಾಣ। ತಾ ಧರೆಯೊಳಗಧಿಕ ಪ್ರವೀಣ। ದ್ವೇಷಿಯ ಗಂಟಲ ಗಾಣ ನಮ್ಮ ದೇವಗೆ ನಿತ್ಯಕಲ್ಯಾಣ॥10॥ ಮೋಸ ಹೋಗುವನಲ್ಲಯ್ಯ। ಒಂದು ಕಾಸಿಗೆ ಒಡ್ಡುವ ಕೈಯ್ಯ। ಏಸು ಮಹಿಮಗಾರನಯ್ಯ। ನಮ್ಮ ವಾಸುದೇವ ತಿಮ್ಮಯ್ಯ॥11॥ ಚಿತ್ತವಧಾನ ಪರಾಕು। ನಿನ್ನ ಚಿತ್ತದ ದಯವೊಂದೆ ಸಾಕು। ಸತ್ಯವಾಹಿನಿ ನಿನ್ನ ವಾಕು। ನೀನು ಸಕಲ ಜನರಿಗೆ ಬೇಕು॥12॥ ಅಲ್ಲಲ್ಲಿ ಪರಿಷೆಯ ಗುಂಪು। ಮತ್ತಲ್ಲಲ್ಲಿ ತೋಪಿನ ತಂಪು। ಅಲ್ಲಲ್ಲಿ ಸೊಗಸಿನ ಸೊಂಪು। ಮತ್ತಲ್ಲಲ್ಲಿ ಪರಿಮಳದಿಂಪು॥13॥ ಅಲ್ಲಲ್ಲಿ ಜನಗಳ ಕೂಟ। ಮತ್ತಲ್ಲಲ್ಲಿ ಬ್ರಾಹ್ಮಣರೂಟ। ಅಲ್ಲಲ್ಲಿ ಪಿಡಿದ ಕೋಲಾಟ। ಮತ್ತಲ್ಲಿಂದ ಊರಿಗೆ ಓಟ॥14॥ ಪಾಪವಿನಾಶಿನಿ ಸ್ನಾನ। ಹರಿಪಾದೋದಕವೇ ಪಾನ। ಕೋಪ ತಾಪಗಳ ನಿಧನ। ನಮ್ಮ ಪುರಂದರ ವಿಠ್ಠಲನ ಧ್ಯಾನ॥5॥

**ವೇಂಕಟಾಚಲಪತೇ ನಿನು ನಮ್ಮಿತಿ** **ರಾಗ: ಕಾಪಿ-ಆದಿತಾಳ**

ವೇಂಕಟಾಚಲಪತೇ ನಿನು ನಮ್ಮಿತಿ ವೇಗಮೇ ನನುರಕ್ಷಿಂಪುಮಯ್ಯಾ॥ಪ॥ ಪಂಕಜಾಸನ ಪ್ರಮುಖಾದಿವಿನುತ ಪದಮುನಾಶ್ರಯಿಂಚಿನ ವಾರಿಕೆಲ್ಲ। ಸಂಕಟಮುಲು ದೀರ್ಚಿ ಸಂಪದಲಿಚ್ಚಿ ಮಂಗಳಂ ಪೊರುಂದಿಯ ಪುಲಿವಲತ್ತಿಲ್ ವಿಳ್‌ಂಗುಮ್॥ಅ.ಪ॥ ಶ್ರೀನಿವಾಸ ಶೇಷಾಚಲಮುನಿಂಚಿ ಶೀಘ್ರಮಾಯೇವಂದು। ಅಂಧುನಿಕಭಿಷ್ಟದಾನಮೊಸಗಿ ಗೋಕರ್ಣ ಕ್ಷೇತ್ರಮುಲೊ। ನೆಲಕೋನಿ ಮೃಕಂಡು ಮುನಿಗಳ್ ಮುದಲನ ಭಕ್ತಾನಾಂ। ಅಭಯ ವರಪ್ರದಾನ ಚತುರತರ ರಮಾಪತೇ। ದಯಾನಿಧೇ ಪ್ರತ್ಯಕ್ಷಮುಗಾನಿಂದ ಮಾನಿಲತ್ತಿಲ್ ನಿನ್ ಮಹಿಮೈ ಅನೇಕಂ। ವಾನವರ್ ವಣಂಗುವಾಸುದೇವನೇ ವಾಂಛಿತಾರ್ಥ ಫಲಮಿತ್ತ ವರದನೇ। ದೀನರಕ್ಷಕ ಪೀತಾಂಬರಧರ। ದೇವದೇವ ಗುರುಗುಹನ್ ಮಾಮನಾನ॥ಚ॥

**ಶ್ರೀನಿವಾಸನೇ ವೆಂಕಟೇಶನೇ**

ಶ್ರೀನಿವಾಸನೇ ವೆಂಕಟೇಶನೇ ಪದ್ಮನಾಭನೇ ಜಯಜಯ। ಹೇ ಮುಕುಂದನೇ ನಾರಸಿಂಹನೇ ತಿರುಮಲೇಶನೇ ಜಯಜಯ। ವಾಸುದೇವನೇ ರಾಮಚಂದ್ರನೇ ಲಕ್ಷ್ಮೀನಾಥನೇ ಜಯ ಜಯ॥1॥ ನಿನ್ನ ನಾಮವ ಜಪಿಸುತಿದ್ದರೆ ನಮಗೆ ಸರ್ವದಾ ನಿರ್ಭಯ। ನೀನೇ ಬ್ರಹ್ಮನು ನೀನೆ ವಿಷ್ಣುವು ನೀನೆ ಗಣಪತಿ ನೀನೆ ರುದ್ರನು॥ ಕೋರಿ ಕೋರಿದ ವಿಶ್ವಗಳಿಗೆ ನೀನೆ ಆಗಿಹೆ ನಾಥನು। ಸಪ್ತಗಿರಿಯಲಿ ಭಕ್ತಮಂದಿಗೆ ಮೂರ್ತಿ ರೂಪದಿ ನೆಲಸಿಹೆ॥2॥ ಸುಪ್ತರೂಪದಿ ಶಕ್ತಿಯೊಂದಿಗೆ ಗುಪ್ತವಾಗಿಹೆ ಅಲ್ಲಿಯೆ। ದೂರದೂರದ ಭಕ್ತರನ್ನು ಸಪ್ತಗಿರಿಗೆ ಸೆಳೆಯುತ। ಭಕ್ತಮಂದಿಗೆ ಹರುಷನೀಡಿ ಕಷ್ಟವೆಲ್ಲವ ಕಳೆಯುವೆ। ಕೋಟಿ ಸೂರ್ಯರ ತೇಜ ಪಡೆದಿಹೆ ದೇವ ನಿನಗೆ ಜಯಜಯ॥3॥ ನಿನ್ನಲಮಿತ ಭಕ್ತಿಯಿದ್ದರೆ ನಮ್ಮ ಕೆಲಸದಿ ಜಯಜಯ। ಹೇ ಅನಂತನೆ ಜಾನಕೀಶನೆ। ಗೋವಿಂದನೆ ಜಯಜಯ। ಅಪ್ರಮೇಯನೆ ಚಕ್ರಪಾಣಿಯೆ ಕಮಲನಾಥನೆ ಜಯಜಯ॥4॥ ಪದವಿ ಬಯಸೆನು ಕೀರ್ತಿಬಯಸೆನು ಭಕ್ತಿಯೊಂದನೆ ಬಯಸುವೆ। ನಿನ್ನ ಮೇಲಿನ ನನ್ನ ಭಕ್ತಿಯ ಇನ್ನ ಹೆಚ್ಚಿಸೆ ಬೇಡುವೆ। ಆದಿ ಅಂತ್ಯವು ಇಲ್ಲದಾತನೆ ನಿನಗೆ ಸರ್ವದ ಜಯಜಯ॥5॥ ನಿನಗೆ ಜಯವು ಎಂಬ ನನ್ನ ನುಡಿಯ ಕೇಳಿ ನಗುವೆಯ। ಭಕ್ತಿದೀಪವು ಸೂರ್ಯದೇವನೆ ಜಯವ ಬಯಸುವ ಪರಿಯೊಳು। ಭಕ್ತ ಮಂದಿಯು ನಿನಗೆ ಜಯವ ಜಪಿಸಿ ಸ್ತುತಿಪರು ಧರೆಯೊಳು॥6॥ ನಿನ್ನ ಸೃಷ್ಟಿಲಿ ಅಲ್ಪಸ್ವಲ್ಪವ ಲೋಪ। ಮನುಜರು ಕಂಡರೂ। ನಿನ್ನ ಅದ್ಭುತ ವಿಶ್ವಯಂತ್ರವ। ಕಂಡು ಬೆರಗನು ಪಡೆದರು। ಆಹಾ ಧರೆಯ ನಿತ್ಯ ಸುಖಿಗಳು। ನಿನ್ನ ಪರಮ ಭಕ್ತರು ಚಿಂತೆ ಮಾಡದೆ। ಧೈರ್ಯದಿಂದಿರುವರು ಏನೇ ಕಷ್ಟವು ಬಂದರು॥7॥

**ಅಮ್ಮಮ್ಮಾ ಎಮ್ಮಮ್ಮ** **ರಾಗ: ಹಂಸಾನಂದಿ**

ಅಮ್ಮಮ್ಮಾ ಎಮ್ಮಮ್ಮ ಅಲಮೇಲ್ಮಂಗ ನಾಂಚಾರಮ್ಮ॥ ತಮ್ಮಿಯಿಂಟ ನಲರುಕೊಮ್ಮ ಓಯಮ್ಮ॥ಪ॥ ನೀರಿಲೋನ ತಲ್ಲಡಿಂಚಿ ನೀಕೇ ತಲವಂಚಿ। ನೀರಿಕಿಂದ ಪುಲಕಿಂಚಿ ನೀ ರಮಣುಡು। ಗೋರಿಕೋನ ಚೆಮರಿಂಚಿ ಕೋಪಮೇ ಪಚರಿಂಚಿ। ಸಾರೆಕು ನೀ ಅಲುಕ ಇಟ್ಟಿ ಚಾಲಿಂಚಮ್ಮ॥1॥ ನೀಕುಗಾನ ಚೆಯ್ಯಿಚಾಚಿ ನಿಂಡಾ ಕೋಪಮುರೇಚಿ। ಮೇಕೋನಿ ನೀ ವಿರಹಾನ ಮೇನು ವೆಂಚಿನಿ। ಈಕಡಾಕಡಿ ಸತುಲ ಹೃದಯಮೇ ಪೆರರೇಚಿ। ಆಕು ಮಡಚಿಯ್ಯನ್ನೈನ ಆನತಿಯ್ಯವಮ್ಮ।2॥ ಚಕ್ಕದನಮುಲ ಪೆಂಚಿ ಸಕಲಮು ಕಾಲದಂಚಿ। ನಿಕ್ಕಪು ವೇಂಕಟೇಶುಡು ನೀಕೆ ಪೊಂಚಿನಿ। ಮಕ್ಕುವತೋ ಅಲಮೇಲ್ಮಂಗ ನಾಂಚಾರಮ್ಮ। ಅಕ್ಕುನ ನಾತನಿ ನಿಟ್ಟಿ ಅಲರಿಂಭಚಮ್ಮ॥3॥

**ಮಂಗಾಪುರದ ಅಲಮೇಲು** **ರಾಗ: ರಂಜನಿ**

ಮಂಗಾಪುರದ ಅಲಮೇಲು ಮಂಗಮ್ಮ ಭಕ್ತರ ಪೊರೆಯೆ ನೆಲೆಸಿರುವೆಯಮ್ಮ॥ಪ॥ ವಜ್ರಖಚಿತಮಯ ಮುಕುಟಧಾರಿಣಿಯಮ್ಮ। ತ್ರಿಭುವನಸುಂದರಿ ಜಗದೇಕಮಾತೆಯಮ್ಮ। ಸಕಲ ಭೂಮಂಡಲಕ್ಕೆ ಅಧಿದೇವತೆಯಮ್ಮ ಆದಿಮಧ್ಯಾಂತರಹಿತೆ ಅಲುಮೇಲು ಮಂಗಮ್ಮ॥1॥ ನಿತ್ಯಮಂಗಳದಾತೆ ನಿರವಧಿಸುಖದಾತೆ ಅಭೀಷ್ಟಸಿದ್ಧಿಯ ದಯಪಾಲಿಸುವ ಮಾತೆ। ಪತಿತಪಾಮರರನು ರಕ್ಷಿಸುವ ಮಾತೆ ಅಖಿಲಾಂಡೇಶ್ವರಿ ಹೇ ಜಗನ್ಮಾತೆ॥2॥ ತಿರುಮಲೇಶನ ಸತಿ ಸಾಧ್ವಿಶಿರೋಮಣಿ। ನಿನ್ನ ದರ್ಶನಕಾಗಿ ಬಂದೆವು ನಾವಮ್ಮ। ಸಕಲಭಾಗ್ಯವನು ಕರುಣಿಸಿ ಸಲಹಮ್ಮ। ಎನುತ ಪ್ರಾರ್ಥಿಪೆನಮ್ಮ ಚೈತನ್ಯದಾಸ॥3॥

**ಎಂಭತ್ನಾಲ್ಕು ಲಕ್ಷ ಜೀವರಾಶಿಗಳಿಗೊಡೆಯನೆ** (ಸಪ್ತಗಿರಿ ಪುರಾಣ-ತಿರುಪತಿ ಬೆಟ್ಟ) **ರಾಗ: ಮಧ್ಯಮಾವತಿ**

ಎಂಭತ್ನಾಲ್ಕು ಲಕ್ಷ ಜೀವರಾಶಿಗಳಿಗೊಡೆಯನೆ ಕಲಿಯುಗ ಪ್ರತ್ಯಕ್ಷ ದೇವನೇ। ಶ್ರೀ ಹರಿಯೇ ವೆಂಕಟಾದ್ರಿ ತಿರುಪತಿ ವೆಂಕಟನೇ। ನಿನ್ನ ಹೊರತು ಭುವಿಗೆ ಬೇರೊಬ್ಬನಿಲ್ಲ ಅಧಿಪತಿ ನೀನೆ ವೆಂಕಟೇಶನೆ, ಕೃಪೆ ತೋರೋ ಶ್ರೀನಿವಾಸ ರಕ್ಷಿಸೋ॥ ವೈಕುಂಠಕ್ಕೆ ಬಂದು ನಾರದರು, ವೀಣಾಗಾನ ಮಾಡಿ ಭಕ್ತಿಯಿಂದ, ದೇವರನ್ನು ದರ್ಶಿಸಲು ದೇವನು ನಾರದರನ್ನು ಭೂಲೋಕದಲ್ಲಿ ನೆಲಸುವಂತಾ ಜಾಗವಿದ್ದರೆ ಹೇಳು ಎನಲು ದಕ್ಷಿಣ ಭಾರತದ ಸ್ವರ್ಣಮುಖಿ ನದಿಯ, ಅಕ್ಕಪಕ್ಕ ವಾಸಿಸುವ

ಸತ್ಯವಂತರ ಆ ಸ್ಥಳವು ತಮಗೆ ನೆಲಸಲು ತಕ್ಕ ಸ್ಥಳ ಎಂದರು (ನಾರದರು) ಆದಿಶೇಷನು, ದೇವನ ಆಜ್ಞೆಯಂತೆ ನಾರದರು ಹೇಳಿದಂತ ಸ್ಥಳದಲ್ಲಿ ಬೆಟ್ಟದಂತೆ ಹರಡಿ ನಿಂತ ಅವನ ತಲೆಯೇ ತಿರುಪತಿ ಬೆಟ್ಟವಾಯಿತು। ದೇಹವು ನರಸಿಯ ನೆಲಸಿರುವ ಅಹೋಬಲವಾಗಿ। ಬಾಲವು ಶ್ರೀಶೈಲವಾಯಿತು। ಎಂದು ಬ್ರಹ್ಮಾಂಡ ಪುರಾಣ (ಹೇಳುತ್ತದೆ) ತ್ರೇತೆಯಲ್ಲಿ ಕಿರೀಟಾದ್ರಿ ಎಂದು ಕರೆಸಿಕೊಂಡಿತು॥ ಪ್ರಳಯದಲ್ಲಿ ಭೂಲೋಕವೆಲ್ಲಾ ನೀರಿನಲ್ಲಿ ಮುಳುಗಿ (4 ಯುಗಗಳು ಭಗವಂತನಿಂದ ನಿರ್ಮಾಣಗೊಂಡವು.) ನಶಿಸಿಹೋಗಲು ಭಯಂಕರವಾದಿ ಹಿರಣ್ಯಾಕ್ಷ, ಭೂಲೋಕವನ್ನು ಕಾಣದಂತೆ ತಡೆಮಾಡಿದನು, ಮಹಾವಿಷ್ಣುವು ಶ್ವೇತವರ್ಣದ ವರಾಹರೂಪ ಧರಿಸಿ, ಸಮುದ್ರ ತಳಕೆ ಹೋಗಿ ಯುದ್ಧ ಮಾಡಿ, ಭೂದೇವಿಯನು ಬಿಡಿಸಿ ತಂದನು, ತನ್ನ ಪತ್ನಿ ಭೂದೇವಿಯನು ಭೂಲೋಕದಲ್ಲೇ ರಕ್ಷಿಸಲು ನೆನೆದು ಗರುಡಗೆ ವೈಕುಂಠಕೆ ಹೋಗಿ ಪುಣ್ಯತೀರ್ಥದ ಬೆಟ್ಟ ತರಲು ಹೇಳಿದ. ಗರುಡನು ಬೆಟ್ಟತಂದು ಸ್ವಾಮಿ ಮುಂದೆ ಇಡಲು ಬೆಟ್ಟ ಹತ್ತಿ ಸ್ವಾಮಿ ಪುಷ್ಕರಣಿ ದಡದಿ ಭೂದೇವಿಯೊಂದಿಗೆ ನೆಲೆಸಿದನು. 4 ಯುಗಗಳು ಭಗವಂತನಿಂದ ನಿರ್ಮಾಣಗೊಂಡವು. ಗರುಡ ತಂದ ಬೆಟ್ಟವು ಗರುಡಾದ್ರಿ ಎಂದು ಕರೆಸಿಕೊಂಡಿತು॥ ವೃಷಭಾಸುರನು ಘೋರವಾದ ತಪದಿಂದ ತಲೆಯನ್ನೇ ಕತ್ತರಿಸಿ ಒಂದು ಪುಷ್ಪವಾಗಿ ಅರ್ಪಿಸಲು, ಪ್ರತ್ಯಕ್ಷವಾದ ದೇವನು ವರವೇನು ಬೇಕೆನಲು ನನ್ನೊಡನೆ ಯುದ್ಧ ಮಾಡುವ ಬಲಶಾಲಿಯು ಯಾರು ಇಲ್ಲ ತಾವೇ ಯುದ್ಧ ಮಾಡಿ ಎನಲು ಭಗವಂತನು ಚಕ್ರಾಯುಧ ಬಿಡಲು ಅಂತ್ಯಕಾಲ ನೆನೆದು ಬೆಟ್ಟಕ್ಕೆ ತನ್ನ ಹೆಸರಿಡುವಂತೆ ಅನುಗ್ರಹಿಸೆನಲು ಭಕ್ತರ ಬಂಧುವು ವರನೀಡಲು ವೃಷಭಾದ್ರಿ ಎಂದು ಹೆಸರಾಯಿತು॥ ದ್ವಾಪರದಿ ಕೇಸರಿಯು ಈಶ್ವರನನ್ನು ಒಲಿಸಿಕೊಂಡು ಮರಣವಿಲ್ಲದ ಪುತ್ರನನ್ನು ಕೊಡು ಎಂದು ಬೇಡಿಕೊಳಲು ದೇವನು ನಿನ್ನ ಮಗಳಿಂದ ಆಸೆಯು ಪೂರೈಸುವುದು, ದೋಹಿತ್ರನು ಚಿರಂಜೀವಿಯು ಎಂದು ಹೇಳಿ ಮಾಯವಾದನು, ಜನಿಸಿದ ಮಗಳಿಗೆ ಅಂಜನೆ ಎಂದು ಹೆಸರಿಟ್ಟ ವಾನರ ರಾಜನು ಮೋಹಗೊಂಡು ಆಕೆಯನ್ನು ಮದುವೆಯಾದನು॥ ಆಕೆಗೆ ಕನ್ಯತ್ವ ಹರಿಯದ ಕಾರಣ ಕೊರವಂಜಿ ವೇಷಧರಿಸಿ ಧರ್ಮದೇವತೆಯು ತಿರುಪತಿ ಬೆಟ್ಟಕೆ ಹೋಗಿ ಪರಶಿವನ ಧ್ಯಾನಿಸಲು ಆಸೆಯು ಕೈಗೂಡುವುದೆನಲು ಆಕೆಯು ಆಕಾಶಗಂಗೆ ಎಂಬ ಪುಣ್ಯತೀರ್ಥದಲಿ ಘೋರತಪವನು ಮಾಡಲು, ವಾಯುದೇವ ನಿತ್ಯ ಬಂದು ಹಣ್ಣನ್ನು ಕೊಡಲು ಗರ್ಭಧರಿಸಿ ಗಂಡುಮಗುವನ್ನು ಪಡೆದಳು, ಆಂಜನೇಯ ತಪ ಮಾಡಿದ ಈ ಬೆಟ್ಟಕ್ಕೆ ಅಂಜನಾದ್ರಿ ಎಂಬ ಹೆಸರು ಬಂದಿತು॥ ಪುರಂದರ ಪುತ್ರ ಮಾಧವನು ಸಕಲಕಲಾವಲ್ಲಭನಾಗಿ ಚಂದ್ರರೇಖೆಯ ಕೈಹಿಡಿದ. ಕರ್ಮಶೇಷದಿ ಚಂಡಾಲಳೊಡನೆ ಕೂಡಿ ಪಂಚಮಹಾಪಾತಕದಲ್ಲಿ ಮುಳುಗಿ ಕುಷ್ಠರೋಗಿಯಾಗಿ ಅಲೆದನು. ಪೂರ್ವಜನ್ಮದ ಸಂಸ್ಕಾರದಿ ತಿರುಪತಿಗೆ ಹೋಗುವ ಭಕ್ತರೊಡಗೂಡಿ ಗೋವಿಂದಾ ಎಂದುಚ್ಚರಿಸುತ್ತಾ ಕಪಿಲತೀರ್ಥದಿ ಸ್ನಾನಮಾಡಿ ಬೆಟ್ಟಹತ್ತಲು ದೇಹ ಉರಿದು ಪಾಪ ಭಸ್ಮ ವಾಯಿತು. ಕಾಂತಿಯುಕ್ತವಾಗಿ ದೇಹ ಹೊಳೆಯಿತು. ಪಾಪ ದಹಿಸಿದ ಈ ಬೆಟ್ಟಕ್ಕೆ ವೆಂಕಟಾದ್ರಿ ಎಂದು ಹೆಸರು ಬಂದಿತು॥ ನಾರಾಯಣ ಮಹರ್ಷಿಯು ಬ್ರಹ್ಮನನ್ನು ತಪೋಬಲದಿ ವರಿಸಿ ತಿರುಪತಿಸ್ವಾಮಿಯನ್ನು ದರ್ಶನ ಮಾಡುವಂತ ಭಾಗ್ಯ ಕರುಣಿಸೆನಲು, ಬ್ರಹ್ಮನ ಆಣತಿಯಂತೆ ತಿರುಪತಿ ಬೆಟ್ಟದಲ್ಲಿ ನಾರಾಯಣ ಮಹರ್ಷಿ ತಪಮಾಡಲು ಭಗವಂತನು ಪ್ರತ್ಯಕ್ಷನಾಗಿ ಮುಕ್ತಿಕೊಟ್ಟನು, ಆಗಲಿಂದ ನಾರಾಯಣಾದ್ರಿ ಎನಿಸಿಕೊಂಡಿತು॥ ಆದಿಶೇಷನು ಭಗವಂತನಿಗೆ ನಾನೇ ಹಾಸಿಗೆಯು, ಕೊಡೆಯು ಆಗಿರುವುದರಿಂದ ನನಗಿಂತ ಶ್ರೇಷ್ಠರಿಲ್ಲವೆಂದು ಗರ್ವಪಡಲು ಸಮಯ ನೋಡಿ ಗರ್ವ ಅಡಗಿಸಲು ವಾಯುದೇವನಿಗೂ ಆದಿಶೇಷನಿಗೂ ಚರ್ಚೆಯಾಗಿ ಬಲಪ್ರದರ್ಶನದ ಸ್ಪರ್ಧೆಯಾಯಿತು. ಮೇರು ಪರ್ವತವನ್ನು ಸುತ್ತಿಕೊಂಡ ಶಿಖರದಿಂದ ಆದಿಶೇಷನನ್ನು ಬಿಡಿಸಿಬಿಟ್ಟರೆ ವಾಯುದೇವನೆ ಬಲಶಾಲಿ ಎಂದು ಬಿಡಿಸದಿದ್ದರೆ ಆದಿಶೇಷನೆ ಬಲಶಾಲಿ ಎನಲು ಸ್ವಾಮಿಯು ತಂತ್ರದಿಂದ ಆದಿಶೇಷನ ತಲೆ ಹೊರಕಾಣಿಸುವಂತೆ ಮಾಡಿದನು। ವಾಯುವು ಒಡನೆ ಅಲ್ಲಿಗೆ ನುಗ್ಗಿ ಆದಿಶೇಷನ ಸಮೇತ ಬೆಟ್ಟದ ಶಿಖರವನು ಬಿಸಾಡಲು ಶೇಷಾಚಲ ಎಂದು ಹೆಸರಾಯಿತು॥ ಕಲಿಯುಗ ಮುಗಿಯುವವರೆಗೆ 33 ಕೋಟಿ ದೇವತೆಗಳು ಈ ಬೆಟ್ಟದಲ್ಲಿ ನಿರಂತರವಾಗಿ ವಾಸವಿದ್ದಾರೆ। ವೈಕುಂಠವಾಸಿ ಶ್ರೀನಿವಾಸನು ಲೀಲಾ ವಿನೋದಗಳನ್ನು ತೋರಿಸುತ್ತಾ ಭಕ್ತರ ಕೋರಿಕೆ ಈಡೇರಿಸಲು ನಿಂತಿದ್ದಾನೆ॥



# ಶ್ರೀನಿವಾಸ ಕಲ್ಯಾಣ ವ್ರತಕಥೆಗಳು

## ಬ್ಯಾಡ ವೇಷವ ತಾಳಿ

ಬ್ಯಾಡ ವೇಷವ ತಾಳಿ ಓಡಿಸುತ ತುರಗವನು। ಪ್ರೌಢೆ ಪದ್ಮಾವತಿಯ ನೋಡಿ ನಸುನಗುತ । ಜೋಡಾಗು ತನಗೆಂದು ಗಾಡಿಗಾರನ ಮಾತು। ಆಡಿ ಕ್ರೋಡಾಲಯಕೆ ಓಡಿ ಪೋದವಗೆ।। ಜಯಜಯಾ।। ತಾಯಿ ಬಕುಳೆಯ ಕಳುಹಿ ಕಾಯದಿಂದಾಕಾಶ। ರಾಯನರಮನೆಗೆ ಜೋಯೆಂದು ಪೋಗಿಸಲು। ಉಪಾಯಗಳ ನಡೆಸಿ ತನ್ನಾಲಯನ ಕೈಕೊಂಡ। ಕಮನೀಯ ಮೂರುತಿಗೆ ।।ಜಯಜಯಾ।। ಶುಕಮುನಿಯ ಮುಖದಿಂದ ಶುಭವಾರ್ತೆಯ ಕೇಳಿ। ಅಕಳಂಕ ಲಗ್ನದಲಿ ಇನಿತು ಪೋಗಿ। ಉರಗಗಿರಿಯಲಿ ನೆಲೆಯಾಗಿ ನೆಲೆಸಿದಕಾಗಿ। ನೆಲೆಯಾದಿ ಕೇಶವಗೆ ।।ಜಯಜಯಾ।।

## ಪರಮ ದಯಾಳು ಹರಿ — ರಾಗ: ಸುರುಟಿ

ಪರಮ ದಯಾಳು ಹರಿ। ಭೃಗು ಮುನಿ ಭರದಿಂದೊದೆಯುತಿರೆ। ತಿರುಗಿ ಕಾಲ್ ಪಿಡಿದು ಕೊಂಡು ಪರಿಪರಿ ಸ್ತುತಿಸಲು। ಶರಣು ಶರಣು ಹರಿಯೇ।।1।। ಪರಮ ಚಂಚಲ ಲಕ್ಷ್ಮೀ ಶ್ರೀ ಹರಿ ನಡತೆಯ ತಾ ಕಂಡು। ಸಹಿಸದೆ ಕೊಲ್ಲಾಪುರಕೆ ತಾ ನಡೆದಳು।। ಶರಣು ಶರಣು ಹರಿಯೇ।।2।। ಸಿರಿ ಇಲ್ಲದೆ ತಾನೂ ಒಬ್ಬನೆ ಇರಲಾರೆನು ಎಂದು ಹರಿ ವೈಕುಂಠ ಬಿಟ್ಟು ಧರೆಗೆ ಇಳಿದನು।। ಶರಣು ಶರಣು ಹರಿಯೇ।।3।। ಉತ್ತಮ ವೈಕುಂಠ ಇರಲು ಮತ್ತೆ ಉರಗಾದ್ರಿಯೇಳು। ಉತ್ತಮ ಮನೆಕಟ್ಟಿ ಗುಪ್ತದಿಂದಿರುತಿರೆ।। ಶರಣು ಶರಣು ಹರಿಯೇ।।4।। ನಿತ್ಯ ನಿರ್ವಿಕಾರಿ ಶ್ರೀ ಹರಿಭಕ್ತರಿಗಭಿಮಾನಿ। ನೆತ್ತಿಯ ನೊಡಕೊಂಡು ಭಕ್ತರ ಸಲಹಿದ।। ಶರಣು ಶರಣು ಹರಿಯೇ।।5।। ಭವರೋಗ ವೈದ್ಯ ಎಂದೆನಿಸಿದ ಗುರುಗಳ ತಾ ಕರೆಸಿ। ಅವರಿಂದಲೆ ತನ್ನ ಗಾಯವ ಕಳೆದನು। ಶರಣು ಶರಣು ಹರಿಯೇ।।6।। ನೋಟದಲಿ ಚೆಲುವ ತಾ ಬಲು ಮಾಟ ಕುದುರೆನೇರಿ। ತಾಟಕ ತನದಿಂದ ಮೃಗ ಭೇಟೆಗೆ ಹೊರಟನು। ಶರಣು ಶರಣು ಹರಿಯೇ।।7।। ವನದೊಳು ಸಂಚರಿಸಿ ಅಲ್ಲೊಬ್ಬ ವನಿತೆಯ ತಾಕಂಡು। ಮನಸಿಟ್ಟನೆ ಆ ವನಿತೆಯ ಮೇಲೆ।। ಶರಣು ಶರಣು ಹರಿಯೇ।।8।। ನಾಡೊಳಗಿನ ರೀತಿ ಶ್ರೀಹರಿ ಆಡಿಕೊಂಡರು ಮಾತ। ಆಡಿದಕ್ಕಲ್ಲಿ ಈಡಾಡಿದರಾಗಲೆ। ಶರಣು ಶರಣು ಹರಿಯೇ।।9।। ಪೆಟ್ಟು ತಾಕೆ ಕುದುರೆ ಪ್ರಾಣವ ಬಿಟ್ಟಿತು ಆಗಲ್ಲೇ। ಬಿಟ್ಟಾ ಕುದುರೆಯ ಬೆಟ್ಟವನೇರಿದ।। ಶರಣು ಶರಣು ಹರಿಯೇ।।10।। ಆ ಮಾನಿನಿಯವಗೇ ತಾಬಲು ಮೋಹಿಸಿ ಮಾತಾಡಿದೊಡೆ। ಕಾಮಜ್ವರದಿಂದ ಮಲಗಿದಳಾಕೆ।। ಶರಣು ಶರಣು ಹರಿಯೇ।।11।। ಭ್ರಾಂತಕನೆನುತಾದ್ರಿ ತಾ ಬಲು ಶಾಂತ ಕುದುರೆನೇರೆ। ಅಂತರಂಗದ ಜ್ವರ ಶಾಂತವಾಯಿತು। ಶರಣು ಶರಣು ಹರಿಯೇ।।12।। ಅಂದು ಆಕಾಶರಾಯ ಶ್ರೀನಿವಾಸನ ಚಂದದಿ ತಾ ಕರೆಸಿ। ರಂಭೆ ಪದ್ಮಾವತಿಗೆ ಕಲ್ಯಾಣವ ಮಾಡಿದರು। ಶರಣು ಶರಣು ಹರಿಯೇ।।13।। ಮಂಗಳ ಜಯವೇನ್ನೀ ಶ್ರೀನಿವಾಸಗೆ ಮಂಗಳ ಶುಭವೇನ್ನೀ। ಮಂಗಳಾಂಗಿಯರು ಪಾಡಿ ತೂಗಿದರು ಶ್ರೀನಿವಾಸ ವಿಠಲನ್ನ ಬೇಗ ಶರಣು ಶರಣು ಹರಿಯೇ।।14।।

## ಭೃಗುಮುನಿಯು ತಾನಾಗ ವೈಕುಂಠಕೇ

ಭೃಗುಮುನಿಯು ತಾನಾಗ ವೈಕುಂಠಕೇ ಬರಲು ಕಲಹವನು ಮಾಡಿ ಕರವೀರ ಪುರಕೆ ಸತಿಯು ಪೋಗೇ ಪತಿಯು ಹುತ್ತದೊಳಡಗಿರೆ ಉತ್ತುಮಾ ಕ್ಷೀರವನು ಕರೆಯೆ ಗೋವು ಗೋಪಾಲಕನು ಬಂದು ಏಟು ಹೊಡೆಯೆ ತಲೆಯು ಒಡೆದು ರಕ್ತ ಸುರಿಯೇ ಚೋಳರಾಯನಿಗೆ ಶಾಪವನು ಕೊಡಲು ಕ್ರೋಢರೂಪನ ಕಂಡು ಮಾತಾಡಿದಾ।।1।। ಭಾನುಕೋಟಿ ತೇಜನು ಬೇಟೆಯಾಡಲು ಹೊರಟ ಮಂಡೆಗೆಳ ಬಾಚಿದಾ ದಂಡೆ ಮುಡಿದ ಕರ್ಣಕುಂಡಲ ಹೊಳೆಯೆ ಕಸ್ತೂರಿ ತಿಲಕಿಟ್ಟ ಹಾರವನು ಹಾಕಿದ ಕಿರೀಟ ಧರಿಸಿದ ಬೆರಳಿಗುಂಗುರವಿಟ್ಟು ರಂಗ ಶೃಂಗರವಾದ ಕರದಿ ವೀಳ್ಯವ ಕೊಂಡು ಕನ್ನಡಿಯ ನೋಡಿ ಕಮಲನಾಭನು ಕುದುರೆಯಾನೇರಿ ಬೇಟೆಮಾರ್ಗದಿ ಬಂದ ಶ್ರೀ ವೆಂಕಟೇಶ।।2।।ಮರುಗ ಮಲ್ಲಿಗೆ ಜಾಜಿ ಮುಡಿವಾಳ ಸಂಪಿಗೆ ಮಲ್ಲಿಗೇ ಕೇತಕೀ ಮಾಲೆಗಳನು ಒಳ್ಳೆ ಶಾಂವಂತಿಗೇ ಮೊಲ್ಲೆ ಇರುವಂತಿಗೆ ಒಳ್ಳೆ ಸಂಪಿಗೆ ಹೂವು ವನದೊಳಗೆ

ಮುದ್ದು ಪದ್ಮಾವತಿಯು ಸಖಿಯರೊಡನೆ ಕೂಡಿಕೊಂಡು ಪುಷ್ಪಗಳನೇ ಆಗ ಕೊಯ್ಯುತಿರಲು ಬೇಟೆಮಾರ್ಗದಿ ಬಂದ ಶ್ರೀವೆಂಕಟೇಶ ಬರುತ ಕಾಂತೆಯರ ಕಂಡನಾಗ॥3॥ ಎಲೆ ಚೋರ ನೀನೀಗ ವನದೊಳಗೆ ಬರುವರೇ ನಾರಿಯರು ಇರುವಲ್ಲಿ ಏನು ಕಾರ್ಯ ವೆಂಕಟೇಶನು ತಾನು ಮುಗುಳುನಗೆಯಿಂದಲಿ ಗಗನರಾಯನ ಮಗಳಲ್ಲಿ ಕಾರ್ಯವುಂಟು ಮುದ್ದು ಪದ್ಮಾವತಿಯು ಸಖಿಯರೊಡನೆ ಕೂಡಿಕೊಂಡು ಕಲ್ಲುಗಳನೇ ಆಗ ಬೀಸುತಿರಲು ಶಿರವು ಒಡೆದು ರಕ್ತ ಸುರಿಯೇ ಕೇಶವನೇ ಬಿಚ್ಚಿ ಶೇಷಪರ್ವತಕೆ ಬಂದ॥4॥ತಾಯಿ ಬಕುಳಾದೇವಿ ಬಂದು ಎಬ್ಬಿಸಿದಳು ಪರಮಾನ್ನವಾಗಿದೆ ಏಳು ಹರಿಯೇ ಯಾವ ವನಕೆ ಪೋದೆ ಯಾವ ನಾರಿಯ ಕಂಡೆ ಅವಳ ವೃತ್ತಾಂತವನು ಪೇಳು ನನಗೆ ಆಕಾಶರಾಯನ ಮಗಳು ಪದ್ಮಾವತಿಯು ಅವಳ ನೋಡಿ ಮೋಹಿಸಿ ಬಂದೆ ನಾನು ನಿಮ್ಮ ಮನಸಿನ ಅಪೇಕ್ಷೆಯನು ತೀರಿಸುವೆನು ಕಪಟನಾಟಕ ಸ್ವಾಮಿ ಇದು ಏನು ಮಾತು॥5॥ ಕೊರವಂಜಿ ತಾನಾಗಿ ಗುಂಜುಮಣಿ ಧರಿಸಿದನು ಕೂಸನ್ನೆ ಕಂಕುಳಲಿ ಎತ್ತಿಕೊಂಡು ಕರದಿ ವೀಳ್ಯವ ಕೊಂಡು ಕನ್ನಡಿಯ ನೋಡಿದ ಹರುಷದಿಂ ಕುದುರೆಯನೆ ಏರಿಕೊಂಡು ಧರಣಿ ದೇವಿಗೆ ಬಂದು ಕಣಿಗಳಾ ಪೇಳೆ ಬಂದ ಬಕುಳೇ ಆದರಿಸಿ ಧರಿಣೀದೇವೀ ಅವನ ಕುಲಗೋತ್ರಗಳನ್ನೆಲ್ಲಾ ಅರಿತು ಬರಲು ಲಗ್ನಪತ್ರಿಕೆ ಬರೆಸಿ ಶ್ರೀ ಹರಿಯ ಕೈಗೆ ಕೊಡಲು॥6॥ ಕೊಟ್ಟ ಪತ್ರಿಕೆ ತಾನು ಓದಿಕೊಂಡನೆ ಸ್ವಾಮಿ ಮನದಲ್ಲಿ ಸಂತೋಷ ಪಡುತಲಾಗ ಗರುಡ ಶೇಷರ ಕರೆಸಿ ಮದುವೆ ಓಲೆಯ ಬರೆಸಿ ಕಪಟದಿಂ ಲಕ್ಷ್ಮಿಯನೆ ಕರಸಿಕೊಂಡು। ಅಷ್ಟವರ್ಗವ ಮಾಡಿ ಲಕ್ಷ್ಮಿ ತಾನು ಇಷ್ಟದೇವರನೆಲ್ಲ ಪ್ರಾರ್ಥಿಸುತಲಿ ಅವರಿಷ್ಟ ಬಾಂಧವರಿಗೆಲ್ಲ ಭೋಜನವ ಮಾಡಿಸಿ ಶ್ರೀಲಕ್ಷ್ಮೀ ಸಹಿತ ಪಟ್ಟಣಕೆ ಬರಲು॥7॥ ಆಕಾಶರಾಯನು ಅನೇಕ ಸಂಭ್ರಮದಿಂದ ಮಗಳು ಅಳಿಯನ ನೋಡಿ ಹರುಷಪಟ್ಟು ವರನ ಪೂಜೇ ಮಾಡಿ ಮನೆಗೆ ಕರೆತಂದರು ಪಾದಗಳ ತೊಳೆದ ಆಕಾಶರಾಯ ವಜ್ರದ ಕಿರೀಟವನು ಕೊಟ್ಟನಾಗ। ಕಂಕಣವ ಕಟ್ಟಿದನು ಹರುಷದಿಂದ ಮಾಂಗಲ್ಯ ಕಟ್ಟಿಸಿದನು ಸಂತೋಷದಿಂದ ವೆಂಕಟೇಶಗು ಪದ್ಮಾವತಿಗೂ ಮದುವೆ ಮಾಡಿದರು॥8॥ ವರಮತ್ಸ್ಯ ಕೂರ್ಮನೇ ವರಹ ನರಸಿಂಹನೇ। ವಾಮನನೆ ಭೃಗುರಾಮ ರಕ್ಷಿಸೆನ್ನ। ಅಸುರ ಜನರಾ ಕೊಂದು ಧರಣೀದೇವಿಯ ತಂದೆ ಕೃಷ್ಣ ಬೌದ್ಧ ಕಲ್ಕ್ಯ ಕೃಪೆಯ ಮಾಡು ಪಾದಕಾಣಿಕೆಗಳಾ ತಂದು ಸಲಿಸುವೋರು ಬಂದ ಭಕ್ತರಿಗೆಲ್ಲ ವರಗಳನೆ ನೀಡುತಲಿ ಏರಿ ವೆಂಕಟ ವಿಠಲ ಶ್ರೀನಿವಾಸ ಕೃಪೆಯಿಂದ ವರವಿತ್ತು ಪಾಲಿಸೆಮ್ಮ॥9॥

## ಸ್ತ್ರೀಯರೆಲ್ಲರು ಬನ್ನಿರೆ

ಸ್ತ್ರೀಯರೆಲ್ಲರು ಬನ್ನಿರೆ ಶ್ರೀನಿವಾಸನ ಪಾಡಿರೆ। ಜ್ಞಾನಗುರುಗಳಿಗೊಂದಿಸಿ ಮುಂದಿನ ಕಥೆಯ ಪೇಳುವೆನು। ಗಂಗಾತೀರದಿ ಋಷಿಗಳು ಬಂದು ಯಾಗವ ಮಾಡಿದರು। ಬಂದುನಾರದರಲ್ಲೆ ನಿಂದು ಯಾರಿಗೆನುತ ಕೇಳಿದರು। ಅರಿತು ಬರಬೇಕೆನುತ ಭೃಗುಮುನಿಯು ತೆರಳಿದ। ನಂದಗೋಪನ ಸುತನ ಕಂದನ ಮಂದಿರಕಾಗೆ ಬಂದನು। ವೇದಗಳನೋದುತಾ ಹರಿಯನೆಕೊಂಡಾಡುತ। ಅಲ್ಲಿ ಇರುವ ಬ್ರಹ್ಮನ ನೋಡಿದ ಕೈಲಾಸಕ್ಕೆ ಓಡಿದ। ಕಂಬುಕಂಠನು ಕಾಂತೆ ಪಾರ್ವತಿ ಕಲೆತಿರುವುದ ನೋಡಿದ। ಸೃಷ್ಟಿಯೊಳಗೆ ನಿನ್ನ ಲಿಂಗ ಶ್ರೇಷ್ಠವಾಗಲೆಂದನು। ವೈಕುಂಠಕ್ಕೆ ಬಂದನು ವಾಸುದೇವನ ಕಂಡನು। ಕೆಟ್ಟಕೋಪದಿಂದ ಒದ್ದರೆ ಎಷ್ಟು ನೊಂದಿತೆಂದನು। ಥಟ್ಟನೆ ಬಿಸಿನೀರತಂದು ನೆಟ್ಟಗೆ ಪಾದವ ತೊಳೆದನು। ಬಂದಕಾರ್ಯವಾಯಿತೆಂದು ಆ ಮುನಿಯು ತೆರಳಿದ। ಭೃಗುಮುನಿಯು ತೆರಳಿದ। ಬಂದು ನಿಂದು ಸಭೆಯ ಒಳಗೆ ಇಂದಿರೇಶನ ಪೊಗಳಿದ। ಹರಿಯ ಕೂಡೆ ಕಲಹಮಾಡಿ ಕರವೀರಕ್ಕೆ ಹೊರಟಳು। ಸತಿಯು ಪೋಗೆ ಪತಿಯು ಹೊರಟು ಗಿರಿಗೆ ಬಂದು ಸೇರಿದ। ಹುತ್ತದೊಳಗೆ ಹತ್ತುಸಾವಿರವರ್ಷ ಗುಪ್ತದಿಂದಲಿದ್ದನು। ಬ್ರಹ್ಮ ಧೇನುವಾದನು ರುದ್ರವತ್ಸನಾದನು। ಗೋವು ಕಾಯ್ವ ಗೊಲ್ಲತಿಯಂತೆ ಗೋಪ ಸತಿಯು ಹೊರಟಳು। ಕೋಟಿಹೊನ್ನು ಬಾಳ್ವುದು ಕೊಡದ ಹಾಲು ಕರೆವುದು। ಪ್ರೀತಿಯಿಂದಲಿ ತಂದುಕೊಂಡನೆ ತನ್ನ ಮನೆಗೆ ಚೋಳನು। ಒಂದುದಿವಸ ಕಂದಗ್ವಾಲು ಚೆಂದದಿಂದಲಿ ಕೊಡಲಿಲ್ಲ। ಬಂದು ನಿಂದು ರಾಜನ ಮಡದಿ ಗೋಪಾಲನ್ನ ಬಡಿದಳು। ಮುಂದೇನು ಮಾಡಿಕೊಂಡು ಹಿಂದೆ ಗೋಪ ಹೊರಟನು। ಕಾಮಧೇನು ಕರೆದ ಪಾಲು ಹರಿಯ ಶಿರದಿ ಬಿಟ್ಟಿತು। ಕಷ್ಟ ನಮಗೆ ಬಂದಿತೆಂದು ಪೆಟ್ಟು ಬಡಿಯೆ ಪೋದನು। ಕೃಷ್ಣ ಮನದಲ್ಯೋಚಿಸಿ ಕೊಟ್ಟ ತನ್ನ ಶಿರವನು। ರಕ್ತವೇಳುತಲೆ ಉದ್ದ ಏಕವಾಗಿ ಹೊರಟಿತು। ರಕ್ತವನ್ನೆ ನೋಡಿ ಗೋಪ ಮತ್ತೆ

ಸ್ವರ್ಗಕೈದಿದ। ಕಷ್ಟವೆಲ್ಲ ನೋಡಿ ಗೋವು ಅಷ್ಟು ಬಂದು ಹೇಳಿತು। ಥಟ್ಟನೇ ರಾಜ ಪೊರಟು ಗಿರಿಯನಲ್ಲಿ ಸೇರಿದ। ಏನು ಕಷ್ಟ ಇಲ್ಲಿ ಹೀಗೇ ಯಾವ ಪಾಪಿ ಮಾಡಿದ। ತಂದೆ ತಾಯಿ ಬಂಧುಬಳಗ ಕಂದ ನಿಮಗೆ ಇಲ್ಲವೆಂದ। ಇಷ್ಟುಕಷ್ಟ ಕೊಟ್ಟವಗೆ ಭ್ರಷ್ಟ ಪಿಶಾಚನಾಗೆಂದ। ಪೆಟ್ಟುವೇದನೆ ತಾಳದೆ ಬೃಹಸ್ಪತ್ಯಚಾರ್ಯರ ಕರೆಸಿದ। ಅರುಣನುದಯದಲ್ಲಿ ಎದ್ದು ಔಷಧಕ್ಕೆ ಪೊರಟನು। ಕ್ರೋಢರೂಪಿಯ ಕಂಡನು ಕೂಡಿ ಮಾತನಾಡಿದನು। ಇರುವುದಕ್ಕೆ ಸ್ಥಳವು ಎನಗೆ ಏರ್ಪಾಡಾಗಬೇಕೆಂದ। ನೂರು ಹೆಜ್ಜೆ ಭೂಮಿಕೊಟ್ಟರೆ ಮೊದಲ ಪೂಜೆ ನಿಮಗೆಂದ। ಪಾಕಪಕ್ವ ಮಾಡ್ವದಕ್ಕೆ ಆಕೆ ಬಕುಳೆ ಬಂದಳು। ಇತ್ತಲಾಕಾಶರಾಯಗೆ ಪುತ್ರರು ಇಲ್ಲದೆ ಚಿಂತಿಸಿದ। ಪುತ್ರಕಾಮೇಷ್ಠಿ ಮಾಡಿ ಪದ್ಮಿನಿಯ ಪಡೆದನು। ನಾರಿಯೇರೆಲ್ಲಾರು ಕೂಡಿ ವನದ ಪುಷ್ಪಕೆ ಬಂದರು। ದೀನ ನಾರದರು ಬಂದು ಶ್ರೀನಿವಾಸಗೆ ಸ್ತ್ರೀಯಳೆಂದರು। ಭಾನುಕೋಟಿತೇಜನು ಬೇಟೆಯಾಡಲಿ ಪೊರಟನು। ಮಂಡೆಬಾಚಿ ಗೊಂಡ್ಯಕಟ್ಟಿ ದುಂಡುಮಲ್ಲಿಗೆ ಮುಡಿದನು। ಕರ್ಣಕುಂಡಲ ಕದಪಿನಲ್ಲಿ ಕಸ್ತೂರಿ ತಿಲಕವಿಟ್ಟನು। ಹಾರಪದಕ ಕೊರಳಿಗ್ಹಾಕಿ ಕೀಲು ಕಂಕಣವಿಟ್ಟನು। ಪಟ್ಟೆನುಟ್ಟು ದಟ್ಟಿಕಟ್ಟಿ ಪೀತಾಂಬರವನ್ಹೊದ್ದನು। ಢಾಳುಕತ್ತಿ ಉಡಿಯಸಿಕ್ಕಿ ಜೋಡುಕಾಲಿಗೆ ಮೆಟ್ಟಿದ। ಅಂಗುಲೀಗೆ ಉಂಗುರಿಟ್ಟು ರಂಗಸಿಂಗರವಾದನು। ಕೈಲಿ ವೀಳ್ಯವನ್ನು ಹಿಡಿದು ಕನ್ನಡಿಯನೆ ನೋಡಿದ। ಕನಕ ಭೂಷಣವಾದ ಕುದುರೆಕಮಲನಾಭ ಏರಿದ। ಕರಿಯಕಂಡು ಹರಿಯು ಬರಲು ಕಾಂತೆರೆಲ್ಲ ಕಂಡರು। ಯಾರು ಇಲ್ಲಿಗೆ ಬರುವನೆಂದು ದೂರಪೋಗೆಂದರು। ಪೋರಿಯೇರು ಇರುವ ಸ್ಥಳದಿ ಏನು ಕಾರ್ಯವೆಂದರು। ಎಷ್ಟು ಹೇಳಿದರು ಕೇಳ ಕೃಷ್ಣ ಕುದುರೆಬಿಟ್ಟನು। ಅಷ್ಟು ಮಂದಿಯೇರು ಸೇರಿ ಪೆಟ್ಟುಗಳನೆ ಬಡಿದರು। ಕಲ್ಲುಮಳೆಯ ಕರೆದರು ಕುದುರೆ ಕೆಳಗೆ ಬಿದ್ದಿತು। ಕೇಶ ಬಿಚ್ಚಿ ವಾಸುದೇವ ಶೇಷಗಿರಿಯ ಸೇರಿದ। ಪರಮಾನ್ನ ಮಾಡಿದ್ದೇನೆ ಉಣ್ಣಏಳೆಂದಳು। ಅಮ್ಮ ಎನಗೆ ಅನ್ನಬೇಡ ಎನ್ನ ಮಗನೆ ವೈರಿಯು। ಕಣ್ಣಿಲ್ಲದ ದೈವ ಆಕೇನ ನಿರ್ಮಾಣವನೆ ಮಾಡಿದ। ಯಾವದೇಶ ಯಾವೊಳಾಕೆ ಎನಗೆ ಪೇಳೆಂದಳು। ನಾರಾಯಣನ ಪುರಕೆ ಹೋಗು ರಾಮಕೃಷ್ಣರ ಪೂಜೆಮಾಡು। ಗುಂಜಮಣಿಯ ಕೊರಳಿಗ್ಹಾಕಿ ಕೂಸಿನಕಂಕುಳಲೆತ್ತಿಕೊಂಡು। ಧರಣೆದೇವಿಗೆ ಕಣೆಯನ್ಹೇಳಿ ಗಿರಿಗೆ ಬಂದು ಸೇರಿದ। ನಾರಿಯರೆಲ್ಲಾರು ಕೂಡಿ ಆಗ ಬಕುಳೆ ಬಂದಳು। ಬನ್ನಿರಮ್ಮ ಎನುತ ಕರೆದು ಬಹಳ ಮಾತನಾಡಿದರು। ತಂದೆ ತಾಯಿ ಬಂಧು ಬಳಗ ಹೊನ್ನು ಹಣವುಂಟೆಂದಳು। ಹೊನ್ನು ಹಣ ಉಂಟೆಂಬೀರಿ ಕನ್ನಿಕೆಯಾತಕೆ ದೊರಕಿಲ್ಲ। ದೊಡ್ಡವಳಿಗೆ ಮಕ್ಕಳಿಲ್ಲದೆ ಮತ್ತೆ ಮದುವೆ ಮಾಡಬೇಕು। ಗುರುಗಳನ್ನೆ ಕರೆಸಿದ ಲಗ್ನಪತ್ರಿಕೆ ಬರೆಸಿದ। ಬೃಹಸ್ಪತ್ಯಾಚಾರ್ಯರ ಕರೆಸಿದಾ ಮದುವೆ ಓಲೆ ಬರೆಸಿದ। ವಲ್ಲಭೇನ ಕರೆಯುವುದಕೆ ಕೊಲ್ಲಾಪುರಕೆ ಕಳುಹಿದ। ಬ್ರಹ್ಮ ಮೊದಲು ಮಾಡಿಕೊಂಡು ಆಗ ಪೊರಟು ಬಂದರು। ಅಷ್ಟವರ್ಗವನ್ನೆ ಮಾಡಿ ಇಷ್ಟದೇವರ ನಮಿಸಿದ। ಅಷ್ಟುಮಂದಿ ಭೋಜನ ಮಾಡಿ ಲಕ್ಷ್ಮಿ ಸಹಿತ ಹೊರಟರು। ಪಕ್ಷಿ ಹೆಗಲ ನೇರಿಕೊಂಡು ಆಗ ಪೊರಟು ಬಂದನು। ಗರುಡ ನೇರಿಕೊಂಡು ಹರಿಯು ಬೇಗ ಹೊರಟು ಬಂದನು। ಲಕ್ಷ್ಮೀಸಹಿತ ಆಕಾಶರಾಜನ ಪಟ್ಟಣಕ್ಕೆ ಬಂದರು। ಕನಕಭೂಷಣ ವಾದ ಮಂಟಪಕಮಲನಾಭಏರಿದ। ಕನಕಭೂಷಣ ಕನ್ಯಾಮಣಿ ಕನ್ಯಾದಾನವ ಮಾಡಿದ। ಕಮಲನಾಭ ಕಾಂತೆಕೈಗೆ ಕಂಕಣವನ್ನು ಕಟ್ಟಿದ। ಪದ್ಮನಾಭ ಪದ್ಮಾವತಿಗೆ ಮಾಂಗಲ್ಯವನೆ ಕಟ್ಟಿದ। ಲೆಕ್ಕವಿಲ್ಲದೆ ಹಣವ ಸುರಿದು ವೆಂಕಟೇಶನ ಕಳುಹಿದ। ಶ್ರೀನಿವಾಸನ ಮದುವೆ ನೋಡೆ ಸ್ತ್ರೀಯರೆಲ್ಲರು ಬನ್ನಿರೇ। ಪದ್ಮಾವತಿಯ ಮದುವೆ ನೋಡೆ ಮುದ್ದುಬಾಲೇರು ಬನ್ನಿರೆ। ಕೋಟಿ ತಪ್ಪು ಎನ್ನಲ್ಲುಂಟು ಕಮಲನಾಭ ಸಲಹೆನನ್ನು ಲಕ್ಷ ತಪ್ಪು ಎನ್ನಲುಂಟು ಪಕ್ಷಿವಾಹನ ಸಲಹೆನ್ನ। ಶಂಕೆ ಇಲ್ಲದೆ ವರವ ಕೊಡುವ ವೆಂಕಟೇಶ ಸಲಹೆನ್ನ। ಭಕ್ತಿಯಿಂದ ಹೇಳಿದವರಿಗೆ ಮುಕ್ತಿ ಕೊಡುವ ಹಯವದನ॥

### ವೈಕುಂಠಪತಿ ತಾನು — ರಾಗ: ಬಿಲಹರಿ-ಛಾಪುತಾಳ

ವೈಕುಂಠಪತಿ ತಾನು ವೈಕುಂಠವನೆ ಬಿಟ್ಟು। ವೇಂಕಟಾದ್ರಿಗೆ ಪೋಗಿ ಶ್ರೀಕಾಂತ ನಿಂತಾ॥ ನಾಲ್ಕೂ ಕಡೆಯಲಿ ನೋಡಿ ವಲ್ಮೀಕವನೆ ಕಂಡು। ಏಕಾಂತ ಸ್ಥಳವೆಂದು ಬಹುಕಾಲವಲ್ಲಿದ್ದ ॥1॥ ಚೋಳ ಭೃತ್ಯನು ಶಿರವ ನೊಡೆದ ಗಾಯವನೋಡಿ। ತಾಳಲಾರದೆ ಸ್ವಾಮಿ ಗುರುಗಳಾ ಕರೆಸಿ। ಹೇಳಿದೌಷಧ ಮಾಡಿ ಕ್ರೋಡ ರೂಪಿಯ ಕಂಡು। ಕೇಳಿ ಸ್ಥಳವನೆ ಕೊಂಡು ಲೀಲೆ ತೋರುತಲಿ॥2॥ ಇರುತಿರಲು ಒಂದು ದಿನ ತುರಗವನೆ ಸ್ಮರಿಸುತಲಿ। ತುರಗ ಬರಲು ಕಂಡು ಮುದದಿತಾನೇರಿ। ಪರಿ ಪರಿ ಮೃಗಗಳ ಅಡವಿಯಲಿ ಕೊಂದು। ಕರುಣಾ ಸಾಗರ ಒಂದು ವನವ ಕಂಡ ॥3॥ ವನದಲ್ಲಿ ಜಲಜಾಕ್ಷಿ ರಾಜಪುತ್ರಿಯ ಕಂಡು। ಮನಕೆ ಬಂದಂತಾಡಿ

ಕಲಹ ಮಾಡಿದನು। ಮನಸಿಜ ಪಿತ ತಾನು ಅಶ್ವವ ಕಳಕೊಂಡು। ಘನವಾದ ಗಿರಿ ಏರಿ ಮಲಗಿದ ಹರಿಯು॥4॥ ನಗಧರ ಮಲಗಲು ಬಕುಳಾವತಿಯು ಆಗ। ಬಗೆ ಬಗೆ ಕೇಳಲು ಶೋಕದಿಂ ನುಡಿದ..। ಗಗನ ರಾಜನ ಪುತ್ರಿ ಪದ್ಮಾವತಿಯ ಕಂಡು। ಹಗಲಿರುಳು ಆಕೆ ಯ ಮುಖವನೇ ಸ್ಮರಿಸುವೆನು॥5॥ ಅವಳಿಗೋಸುಗವಾಗಿ ಇದ್ದಲ್ಲಿಗೆ ಹೋದೆ। ಅವಳಿಂದ ಎನ್ನಶ್ವ ಹತವಾಯಿತಮ್ಮ। ಅವಳ ಹೊರತು ಎನ್ನ ಪ್ರಾಣವೇ ನಿಲ್ಲದು। ಅವಳ ಘಟನೆಯ ನೀನು ಮಾಡಬೇಕಮ್ಮ॥6॥ ಅಂದ ಮಾತನುಕೇಳಿ ಬಕುಳಾವತಿಯು ಆಗ। ಆನಂದದಿಂ ರಾಜಪುರಕೆ ತೆರಳಿದಳು। ಸುಂದರಿಯರ ಕಾರ್ಯ ಸ್ಥಿರವಾಗದೆಂದು। ಚೆಂದುಳ್ಳ ಸ್ತ್ರೀ ರೂಪ ಧರಿಸಿದನು ಶ್ರೀ ಹರಿಯು॥7॥ ಕೊರವಂಜಿ ತಾನಾಗಿ ನೃಪನ ಪುರಕೇಪೋಗೀ। ಧರಣಿದೇವಿಯ ಮುಂದೆ ಶಕುನ ಪೇಳಿದನು। ತಿರುಗಿಬರಲಾತಗೆ ಮಗಳ ಕೊಡುವೇನೆಂದು। ಹರಿಗೆ ನಿಶ್ಚಯಮಾಡಿ ಶುಕರಾ ಕಳುಹಿದನು॥8॥ ತಾಪಸೋತ್ತಮ ಬಂದು ಪತ್ರವನೆ ಕೊಡಲು। ಶ್ರೀಪತಿಯು ತಾನೋದಿ ಬೆನ್ನಿಂದೆಯೆ ಬರೆದ। ಆ ಪರಮವಂದ್ಯ ತಾ ಸುರಸ್ತೋಮವನೆ ಕರೆಸಿ। ಈ ಪರಿ ವೈಭೋಗಮಾಡಿದನು ಹರಿಯು॥9॥ ಅಷ್ಟ ವರ್ಗದ ಕಾರ್ಯ ಮಾಡಬೇಕೆಂದೂ ಸೃಷ್ಟೀಶನೆದುರಿಗೆ ಹೇಳಿದನು ಬ್ರಹ್ಮ। ಅಷ್ಟರೊಳಗೆ ಸ್ವಾಮಿ ಲಕ್ಷ್ಮಿಯನೆಸ್ಮರಿಸಿ। ನಿಟ್ಟುಸಿರು ಬಿಡುತಲಿ ಶೋಕದಿ ನುಡಿದ॥10॥ ಆ ಕ್ಷಣದಲಿ ತಾನು ತರಣಿಯನೆ ಕರೆಸಿ। ಇಕ್ಷುಚಾಪನ ಮಾತೆ ಬಳಿಗೆ ಹೋಗೆಂದ। ತಕ್ಷಣದಲ್ಲಿ ಸೂರ್ಯ ಹೋಗಿ ನಿಲ್ಲಲು। ಹರಿಯ ಕ್ಷೇಮವನೇ ಕೇಳಿ ತೆರಳಿದಳು ಬೇಗ॥11॥ ಬಂದ ಸತಿಯಳ ಕೂಡಿ ಮಂದಿರಕೆ ಪೋಗಿ। ಹಿಂದೆ ಹೇಳಿದ ವಾಕ್ಯ ನಡೆಸೆಂದ ಹರಿಯೂ। ಸಂದೇಹವಿಲ್ಲದೆ ಸ್ವಾಮಿ ನಡೆಸೆಂದು। ಇಂದಿರಾ ದೇವಿಯು ನುಡಿದಳು ಹರಿಗೆ॥12॥ ಸ್ವಸ್ತಿವಾಚನಮಾಡಿ ಕುಲದೇವರನ್ನಿಟ್ಟು। ಪ್ರಸಾದವಮಾಡಿದ ದ್ವಿಜರಸ್ತೋಮಕ್ಕೆ। ಅಸ್ತಾದ್ರಿಗೆ ಸೂರ್ಯನು ಪೋಗಿ ನಿಲ್ಲಲು। ಸ್ವಸ್ಥ ಚಿತ್ತ ದಿ ಲಕ್ಷ್ಮೀ ಹೋಗಿ ಮಲಗಿದಳು॥13॥ ಮರು ದಿನ ಲಕ್ಷ್ಮೀಶ ರಾಜನ ಆ ಪುರಕೆ। ಸುರಸ್ತೋಮವನೆ ಕೂಡಿ ತೆರಳಿ ಬಂದ। ಬರುವ ಕೃಷ್ಣನ ಕಂಡು ಶುಕಮುನಿಯು ಸ್ತುತಿಸಿ। ಹರಿಗೆ ಭೋಜನವನ್ನು ಮುದದಿ ಮಾಡಿಸಿದ॥14॥ ಅಕಳಂಕ ಮಹಿಮನು ಬಂದ ವಾರ್ತೆಯ ಕೇಳಿ। ಸಕಲ ಜನರ ಕೂಡಿ ಕರೆತಂದ ರಾಜ ನಿಖಿಲ ಪರಿವಾರವನು। ತಾ ವ್ಯೋಮರಾಜನಿಗೆ ಶ್ರೀಕರನು ಹರುಷದಲಿ ಪರಿಚಯವ ಮಾಡಿಸಿದ॥15॥ ಮುದದಿಂದ ಎದುರ್ಗೊಂಡು ಗಂಧ ಪರಿಮಳ ಪೂಸಿ। ಸದಮಲಹೃದಯನ್ನ ಕರೆ ತಂದ ಅರಮನೆಗೆ। ಪದ್ಮನಾಭನ ಪೀಠದಲ್ಲಿ ಕುಳ್ಳಿರಿಸಿ। ಮಧುರ ಮಾತಲಿ ತನ್ನ ತರುಣಿಯೊಡಗೂಡಿ॥16॥ ಹೇಮಕುಂಭಗಳಿಂದ ದ್ವಿಜರಕೈಯೊಳು ಸ್ವಾಮಿ ಪುಷ್ಕರಣೀಯ ತೋಯವನೆ ತರಿಸಿ। ಹೇಮತಟ್ಟೆಯಲಿ ಸ್ವಾಮಿ ಪಾದವಾ ನಿಟ್ಟು ಪ್ರೇಮದಿಂದಭಿಷೇಕ ಮಾಡಿದನು ರಾಜ॥17॥ ಚಿನ್ನದಕಿರೀಟ ಆಭರಣವನಿಟ್ಟು। ಕನ್ಯಾದಾನವಮಾಡಿ ಧನ್ಯನಾದ। ತನ್ನಮಗಳನೆ ಶ್ರೀನಿವಾಸಗೆ ಒಪ್ಪಿಸಿ। ಉನ್ನತ ಪದವಿಯಂ ಚೆನ್ನಾಗಿ ಪಡೆದ॥18॥ ಮಾವನಪ್ಪಣೆಗೊಂಡು ಮೈದನಿಗೊಸ್ತ್ರವ ಕೊಟ್ಟು। ಭಾವಶುದ್ಧಿ ತನ್ನ ಮಾವನಿಗೊಂದಿಸಿದ। ಯಾವಾಗ ಕರೆದರೂ ಬರುವೆನು ನಾನೆಂದು। ಪಾವನ್ನಮಾಡೆಂದು ಧರಣಿಗೊಂದಿಸಿದ॥19॥ ಸೃಷ್ಟೀಶ ಸತಿಯಳಾಕೂಡಿ ಗರುಡನ ಹೆಗಲೇರಿ। ಪಟ್ಟಣದ ಜನರೆಲ್ಲ ನಿಂತುನೋಡುತಲಿರಲು॥20॥ ಅಷ್ಟಗೋಪುರವೇರಿ ಕಣ್ಣಿಟ್ಟು ನೋಡುತಲಿ। ಎಷ್ಟು ಹೇಳಲಿ ಈಕೆ ಸುಕೃತವೆಂದರು॥ ಅಜರುದ್ರ ಮೊದಲಾದ ಸುರರು ದ್ವಿಜರುಗಳೆಲ್ಲ। ಸುಜನರಂದಣವೇರಿ ಪುರಕೆ ಸಾಗಿದರು। ಸ್ವಜನ ಬಾಂಧವರನ್ನು ಕಳುಪಿ ಸ್ವಸ್ಥಳಕೆ। ಅಜನಪಿತ ತಾ ಹೊರಟ ಪದುಮೆಯೊಡಗೂಡಿ॥21॥ ಆರು ತಿಂಗಳು ಮೀರಿಗಿರಿಗೆ ಪೋಗುವೆನೆಂದು। ಧೀರನಿಂತನು ಕುಂಭಜರಾಶ್ರಮದಿ॥ ವಾರಿಜ ಮುಖಿ ತಾನು ನಾರಾಯಣಗ್ಹೇಳಿ। ಚಾರುವದನೆ ಕೊಲ್ಲಾಪುರಕೆ ಸಾಗಿದಳು। ನಾರಿಯನು ನಗರದಲಿ ಬಿಟ್ಟು ಗಿರಿಯೊಳಗೆ। ತಾನಿಂತ ಭೂವೈಕುಂಠಮಾಡಿ। ಸುರಪತಿ ಪ್ರಿಯನಾದ ಸುಗುಣಸಾಂದ್ರನು ತಾನು। ಸಿರಿವೆಂಕಟರನ್ನ ಪುರಂದರ ವಿಠಲ॥22॥

### ಶ್ರೀಹರಿಯು ಶ್ರೀರಾಮ ತಾನಾಗಿ

ಶ್ರೀಹರಿಯು ಶ್ರೀರಾಮ ತಾನಾಗಿ। ಛಾಯಸೀತೆಗೆ। ಕೊಟ್ಟ ಮಾತಿನ ತೆರದಿ। ನೆಲಸಿದನು ಶ್ರೀಹರಿಯು। ಸಪ್ತಗಿರಿಯಲ್ಲಿ। ಸಂಕಟಹರಣ ವೆಂಕಟೇಶನುತಾನು। ನಿಜ ಭಕ್ತರನುಕಾಯೆ। ಅನವರತ ಕಲಿಯುಗದಿ ದಿಟದಿ॥1॥ ಬೃಗುಮುನಿಯ ನೇಮಿಸಲು। ಋಷಿಗಳೆಲ್ಲರು। ನಾರದರೊಡಗೂಡಿ। ಯಜ್ಞಫಲವನು ಪಡೆವ। ಸರ್ವೋತ್ತಮನಕಾಣೆ। ಒಪ್ಪಿರಲು ಬೃಗುಮುನಿಯು। ನಸುನಗುತ ನಾರದರು। ಹೊರಟರಾಕ್ಷಣದಲ್ಲೆ ವೈಕುಂಠಕೆ॥2॥ ಸಡಗರದಿ ಸತ್ಯಲೋಕವ ಸೇರಿರಲು।

ಬೃಗುಮುನಿಯುಕಂಡನು। ಚತುರ್ಮುಖನು। ಕಣ್ ಮುಚ್ಚಿ ಕುಳಿತಿಹುದನು। ತಾಬಂದುದನರಿಯಲಿಲ್ಲ ವೆಂದೆನುತ। ಶಾಪವಿತ್ತನು ಬ್ರಹ್ಮಗೆ। ಮೂರ್ತಿಪೂಜೆ ಇಲ್ಲದಿರಲೆಂದು ಧರೆಯಲ್ಲಿ ಕಲಿಯುಗದಿ॥3॥ ಹೊರಟ ನಾಕ್ಷಣದಲ್ಲಿ। ಕೈಲಾಸಗಿರಿಯತ್ತ। ಮುನಿಯುಕಂಡನುಶಿವ-ಶಿವೆಯೊಡನೆ। ನರ್ತಿಸುತಲಿಹುದ। ತಾಬಂದುದ ನರಿಯಲಿಲ್ಲ। ಹರನೆಂದೆನುತ। ಶಾಪವಿತ್ತನು ಶಿವಗೆ। ಲಿಂಗರೂಪದೆಪೂಜೆ ಇರಲೆಂದು। ಕಲಿಯುಗದಿ ಧರೆಯಲ್ಲಿ। ಮುಕ್ಕಣ್ಣನಸುನಗಲಾಗ। ಶ್ರೀಹರಿಯನಾಟಕಕೆ॥4॥ ವೇಗದಿಂದಲಿ ಬೃಗುವು। ಹೊರಟನಾಕ್ಷಣದಲ್ಲೆ ವೈಕುಂಠಕೆ। ಕಂಡನಾಗಲೆ। ಶ್ರೀಹರಿಯುಆದಿಶೇಷನ ಮೇಲೆಪವಡಿಸಿರೆ। ಸಿರಿಲಕುಮಿ ಸೇವೆಯಲಿ। ಶ್ರೀಹರಿಯುತಾ ಬಂದುದನರಿಯನೆಂದೆನುತ। ಕೋಪದಲಿ ಘಾತಿಸಿದನಾಗ ಮುನಿಯು। ತನ್ನ ಪಾದದಿಂದಲಿ। ಶ್ರೀಹರಿಯ ವಕ್ಷಸ್ಥಳಕ್ಕೆ॥5॥ ಕಪಟನಾಟಕ ಸೂತ್ರಧಾರಿ ಶ್ರೀಹರಿಯು। ಆಗೆಚ್ಚರವಗೊಂಡೆದ್ದನೆವಮಾಡಿ। ಸಂಭ್ರಮದಿ ಸಂತೈಸುತಲಿ ಮುನಿಯ। ಪಾದಪೂಜೆಯಮಾಡೆ। ಬೃಗುಮುನಿಯು ಶ್ರೀಹರಿಗೆ ವಂದಿಸುತೆ। ಹರೆಯೆ ಸರ್ವೋತ್ತಮನೆಂದು ಸಾರುತಲಿಜಗಕೆ। ಆನಂದದಿಂದೆ॥6॥ ಇದಕಂಡ ಸಿರಿಲಕುಮಿ। ಹೊರಟಳಾಕ್ಷಣದಲ್ಲೆ। ವೈಕುಂಠವನು ಬಿಟ್ಟು ತಾನು। ಶ್ರೀಹರಿಯ ನಾಟಕಕೆ ಸಹಕರಿಸೆ ಸಿರಿಲಕುಮಿ ಭಜಿಸುತಲಿ। ಶ್ರೀಹರಿಯ। ಬಂದಿಳಿದಳೀಧರೆಯಲ್ಲಿ। ನೆಲೆಸೆ ಕೊಲ್ಹಾಪುರವೆಂಬ। ಪುಣ್ಯಸ್ಥಳದಿ ಕಲಿಯುಗದಲಿ॥7॥ ಸಿರಿಲಕುಮಿ ಇಲ್ಲದಿರೆ। ನೊಂದ ಶ್ರೀಹರಿತಾನು ಧರೆಗಿಳಿದು ಬಂದು। ವೆಂಕಟಗಿರಿಯ ವಲ್ಮೀಕ ಒಂದರಲಿ। ಬ್ರಹ್ಮ-ರುದ್ರರಾಕ್ಷಣದೆ ಬಂದು ಪೇಳಲು। ಸಿರಿಲಕುಮಿ ಹೊರಟಳಾಕ್ಷಣದಲ್ಲೆ। ಶ್ರೀಹರಿಯ ದಿವ್ಯ ಕಲ್ಯಾಣನಾಟಕಕೆ ಸಹಕರಿಸಿ ಹರುಷದಲಿ॥8॥ ಸಿರಿಲಕುಮಿ ತಾಗೊಲ್ಲತಿಯಾಗಿ। ಬ್ರಹ್ಮನನೆ ಹಸುವಾಗಿ। ಹರನನ್ನೆ ಕರುವಾಗಿ ಹಾಡುತಲಿ। ಧೇನು-ಕರುವಿನ ಶುಭಲಕ್ಷಣಗಳನು। ರಾಜಬೀದಿಯಲಿ ಚೋಳರಾಜದಂಪತಿಗಳು ಕೇಳೆ ಅದನಾಗ। ವಿಕ್ರಯಿಸಿದಳು ಆಕ್ಷಣದೆಲೆ। ರಾಣಿನೇಮಿಸಿ ಗೋಪಾಲನೋರ್ವನನು ಸೇವೆಗೆಂದೆನುತ॥9॥ ಆ ಗೋಪಾಲನೊಂದು ದಿನ ಕಂಡನಾ। ಗೋವು ಕರೆಯುತಿರೆ ಕ್ಷೀರವನು ವಲ್ಮೀಕದಲ್ಲಿ। ಭರದಿಂದೆ ಕೊಡಲಿಯನೆ ತಾ ಪಿಡಿದು। ಘಾತಿಸಲು ಧೇನುವನು। ಆ ಕ್ಷಣದೆ ಆ ಘಾತವನು ಪಡೆದ ಶ್ರೀಹರಿತಾನು। ತನ್ನ ಶಿರದೆ ಭಕ್ತರಾಕರುಣೆ। ಆ ಗೋವು ಕರೆತರಲಾಗರಾಜನನು। ಶ್ರೀಹರಿಯಿತ್ತ ಶಾಪವನು ರಾಜನಿಗೆ। ಬ್ರಹ್ಮರಾಕ್ಷಸ ನಾಗೆಂದೆನುತ॥10॥ ರಾಜಬೇಡಲು ಹರಿಯ ಚರಣವಪಿಡಿದು। ಆಕಾಶರಾಜ ರತ್ನ ಕಿರೀಟವನು ವಿವಾಹದಲಿತ್ತಾಗ। ಅದತಾ ಧರಿಸಿದಾಕ್ಷಣದೆ ವಿಶಾಪವೆಂದು। ಹೊರಟನಾಗಲೆ ಶ್ರೀಹರಿಯು ಶಿರದಿ ಗಾಯದಂದೆ। ಕಾಯುತಿರೆ ಮಾತೆ ಯಶೋದೆ ಕಾದಿರಲು ಬಕುಲಾ ಮಾತೆಯಾಗಿ ಜಪಿಸುತಲಿ ಶ್ರೀಹರಿಯ॥11॥ ವೇದಾದಿವಂದ್ಯನಿಗೇ। ವೈದ್ಯವನು ಮಾಡಿದಳು। ಮಮತೆಯಿಂದಲಿ ತಾಯಿ ಬಕುಳೆ। ಬೇಡಿದರು ಶ್ರೀಭೂವರಾಹ ಮೂರ್ತಿಯನು। ನೆಲೆಸಿ ಶ್ರೀನಿವಾಸನು ಸಪ್ತಗಿರಿಯಲ್ಲಿ। ಬಂದ ಭಕ್ತರು ಪ್ರಥಮದಲಿ ಶ್ರೀ ವರಾಹ ಮೂರ್ತಿಗೆ ನಮಿಸಿ। ನಂತರದೆಬಂದ ಭಕ್ತರಿಗೆ। ವಲಿವೆ ವೆಂಕಟರಮಣನಾಗಿ ಭಕ್ತರಿಗೆ ಎಂದೆನುತ॥12॥ ದಿನದಂತೆ ಹೊರಹೊಂಟ ಶ್ರೀಹರಿಯು ದಿವ್ಯಾಶ್ವವನೇರಿತಾನು। ಪಟ್ಟು ಪೀತಾಂಬರಉಟ್ಟು, ಗಂಧ ಕಸ್ತೂರಿ ತಿಲಕವನಿಟ್ಟು। ಖಡ್ಗ-ಬಿಲ್ಲು-ಬಾಣಗ ಳಿಂದೊಪ್ಪುತಲಿ। ದಾರಿತಪ್ಪಿರಲಾಗ ಕಾನನದಿ ಬಂದನರಮನೆಯ ಉದ್ಯಾನವನಕೆ ಕಂಡನಾಗಲೆ ಆಕಾಶರಾಜನ ಮಗಳು। ಪದ್ಮಾವತಿಯ ಸಂತಸದಲಿ॥13॥ ಈರೆರಡು ಅಕ್ಷಿಗಳು ಒಂದಾಗಿ ಆ ಕ್ಷಣದೆ। ಸಖಿಯರು ಘಾತಿಸಲು ಶ್ರೀಹರಿಯ ಪುಟ್ಟ ಶಿಲೆಗಳಿಂದೆ ನೊಂದ ಶ್ರೀ ಹರಿತಾನು ಹೊರಟನಾ ಮೌನದಲಿ। ಬಂದು ಮಲಗಿದನು ತಾಯ ಮಡಿಲಲಿ ಮಾತೆ ಬೇಡಲು ಮಗನ। ಪೇಳಿದನು ಶ್ರೀ ಹರಿಯು ತಾ ಕಂಡು ಕುವರಿಯ ವೃತ್ತಾಂತವನ್ನು॥14॥ ತಾಯಿ ಬಕುಲಾದೇವಿ। ಹೊರಟಳಾಕ್ಷಣದಲ್ಲೆ ಆಕಾಶರಾಜನರಮನೆಗೆ ಶುಭಶಕುನಗಳಾಗುತಿರೆ ಹಾದಿಯಲಿ। ಯಶೋದೆ ತಾನಾಗಿ ಕಾಣದ ಶ್ರೀಕೃಷ್ಣನ ಕಲ್ಯಾಣಗಳನು ಪಡೆದಿರಲು ವರವನ್ನು ಹರಿಯಿಂದೆ। ತಾನೆ ಕಲ್ಯಾಣವನು ಮಾಡಿ ನೋಡುವ ವರಪೊತ್ತ ತಾಯಿ ಬಕುಲೆ ಹರಿಯ ನೆನೆದು ಮನದಿ॥15॥ ಇತ್ತಲಾಗಲೇ ಶ್ರೀ ಹರಿಯು ಹೊರಟನಾಗಲೆ ಬ್ರಹ್ಮನನೆ ಶಿಶುವಾಗಿ, ಹರನನೆ ಕೋಲಾಗಿ, ಬ್ರಹ್ಮಾಂಡವನೆ ಬುಟ್ಟಿಯಾಗಿಸಿ ಕೊರವಂಜಿ ವೇಷದಲಿ ಪೇಳಿದಳು ಕಣಿಯ ಬರುವಳೋರ್ವಳುಮಾತೆ ಕೇಳುವಳು ಕನ್ಯೆ ದಾನವನು ಕೊಡುಮುದದಿ ನೀನು ನಿನಮಗೆ ಮಂಗಳವು ಎಂದು ಪದ್ಮಾವತಿಯ ಕರಪಿಡಿದು ನೋಡಿ॥16॥

ಮರುದಿನದೆ ಮಾತೆ ಬಕುಲಾದೇವಿ ಬಂದಿರಲು ಅರಮನೆಗೆ ಮನದಿ ಶ್ರೀಹರಿಯ ನೆನೆಯುತ್ತಾ ಕೇಳಿದಳು ಕನ್ಯಾದಾನವನು। ರಾಜದಂಪತಿಗಳಾಗಲೇ ಕರೆಸೆ ವಶಿಷ್ಠ ಶುಕಮುನಿಗಳ ತಿಳಿದಲಾಗಲೆ ತನ್ನಳಿಯ ಶ್ರೀಹರಿಯು ತನಕುವರಿ ಸಿರಿಲಕುಮಿ ಎಂಬ ಶುಭವಾರ್ತೆಯನ್ನು ಒಪ್ಪಿದನು ಸಂತಸದೆ ಯಿಂದ॥17॥ ತಾಯಿ ಬಕುಲಾದೇವಿ ಶ್ರೀಹರಿಗೆ ಪೋದ ಕಾರ್ಯಫಲವೆನಲು। ಆ ಕ್ಷಣ ಕರೆದಿರಲು ಬ್ರಹ್ಮ, ಕುಬೇರನನು ಬ್ರಹ್ಮರುದ್ರರು ಸಾಕ್ಷಿಗೆ ಸಹಿ ಹಾಕೆ। ಶ್ರೀಹರಿಯು ಪಡೆದನು ಕುಬೇರನಿಂದ ಧನರಾಶಿ ಸಾಲವಾಗಿ ಬಂದ ಭಕ್ತರೀವ ಕಾಣಿಕೆಯ ಬಡ್ಡಿ ಎಂದೆನು ತಕೊಟ್ಟು ಅವರಸಲುವೆನೆಂದ ಕಲಿಯುಗದಿ ಭಕ್ತರ। ಶ್ರೀಹರಿಯು॥18॥ ಆಕಾಶರಾಜತಾ ಕೇಳಿ ವಶಿಷ್ಠ ಶುಕರನ್ನು ವಶಿಷ್ಠ ಗೋತ್ರ ಶ್ರವಣ ನಕ್ಷತ್ರದ ವರನು। ಅತ್ರಿಗೋತ್ರ ಮೃಗಶಿರ ನಕ್ಷತ್ರದಾವಧುವು ಎಂದು ಬರೆಸೆ ಶುಭಲಗ್ನಪತ್ರಿಕೆಯ। ವೈಶಾಖ ಶುದ್ಧ ದಶಮಿ ಶುಕ್ರವಾರ ಶುಭದಿನದಿ ಕಲ್ಯಾಣವೆಂದು ಕೃಪೆ ಮಾಡಿ ಪರಿವಾರದಿಂದೆ ಬಾರೆಂದು। ಬೇಡಿದರು ಹರಿಯ॥19॥ ಪಕ್ಷಿವಾಹನನಾಗಿ ಶ್ರೀ ಹರಿಯು। ಹಂಸ ವಾಹನನಾಗಿ ಬ್ರಹ್ಮ ಶಾರದೆಯು ನಂದಿವಾಹನನಾಗಿ ಶಿವಗಂಗೆಯು। ಸರ್ವರೂತಂತಂಮ್ಮ ವಾಹನವೇರಿ ಬರಲು ವಾಯು ವರುಣ ಧರ್ಮರು ಪಾಕಶಾಲೆಯ ನೋಡುತಿರೆ। ಬೋಜನದ ಪಂಕ್ತಿಯದು ಸಪ್ತಗಿರಿಯಿಂದ ಶ್ರೀ ಶೈಲದವರೆಗಿರಲು। ಸಂಭ್ರಮದೆ॥20॥ ರಾಜದಂಪತಿಗಳು ಮಂಗಳ ವಾದ್ಯದಿಂದೆ। ಸ್ವಾಗತಿಸೆವರನನ್ನು। ವಶಿಷ್ಠ ಶುಕರುಮಾಡೆ ಮಂತ್ರಘೋಷವನು। ಸುಮಂಗಳೆಯರು ಹಾಡೆ ಶೋಭಾನೆ। ಮಂಗಳ ವಾದ್ಯಗಳು ಮೊಳಗುತಿರಲು। ಪುಷ್ಪವೃಷ್ಟಿ ಯಾಗುತಿರೆ। ಶ್ರೀನಿವಾಸನು-ಪದುಮಾವತಿಗೆ ಕಟ್ಟೆ ಮಾಂಗಲ್ಯವ। ಧರಿಸಿರತ್ನ ಕಿರೀಟವ ಹರಿಯು। ವಿಶಾಪವಾಯ್ತು ಚೋಳರಾಜನಿಗೆ ॥21॥ ಪಾಪ ಪರಿಹಾರ ನಾರಾಯಣಾದ್ರಿ ಎನೆ। ಅಂಜಿಕೆಯು ದೂರ ಅಂಜನಾದ್ರಿ ಎನಲು ಸಂಕಟಹರಣ ವೆಂಕಟಾದ್ರಿ ಎನಲೊಮ್ಮೆ। ಶಾಪನಿವೃತ್ತಿ ಶೇಷಾದ್ರಿ ಎನಲು। ವೈರಾಗ್ಯ ಮೂಡುವುದು ವೃಷಭಾದ್ರಿ ಎನಲು। ಜ್ಞಾನ ಪ್ರಾಪ್ತಿಯು ಗರುಡಾದ್ರಿ ಎನಲು। ಸಿರಿಸಂಪದವು ಶ್ರೀಶೈಲವೆನಲೊಮ್ಮೆ। ಭಕ್ತರಿಗೆ ಅನುದಿನವೂ॥22॥ ಕಪಿಲ, ಪುಷ್ಕರಣಿ, ಆಕಾಶಗಂಗೆ, ಕುಮಾರಧಾರಾ, ಪಾಪನಾಶಿನಿ, ಪದ್ಮ ಸರೋವರ। ಪಾಂಡು ತೀರ್ಥಗಳಲ್ಲಿ। ತುಂಬುರು ಚಕ್ರತೀರ್ಥಗಳಾದಿಯಾಗಿ। ಮಿಂದಪುಣ್ಯ ಫಲವಪುದೀ ಭೂವೈಕುಂಠವನೆನೆಯೆ। ಬಕುಲೆಗೆ ಸಂತಸವಿತ್ತ ಈ ಪುಣ್ಯ ಸ್ಥಳವ। ಭಜಿಸೆ ಭಕ್ತರಿಗಾಕ್ಷಣದೆ। ಯುಗಯುಗದಿ॥23॥ ಮಂಗಳವು ಸಪ್ತಗಿರಿಯನು ನೆನೆಯೆ। ಮಂಗಳವು ಗೋವಿಂದನೆನಲೊಮ್ಮೆ। ಮಂಗಳವು ಶ್ರೀನಿವಾಸ ಕಲ್ಯಾಣಕಥ, ಪಠನ ಶ್ರವಣವು। ಮಂಗಳವು ಶ್ರೀಪಾದವರದವಿಠಲನ ಭಜಿಸೆ। ಸರ್ವಮಂಗಳವು। ನಿಜಭಕ್ತರಿಗೆ ನಿತ್ಯದಲಿ ದಿಟವು॥24॥

## ಅಪ್ಪ ವೆಂಕೋಬನ್ನ ನೇತ್ರದಲಿ ನೋಡೀ

ಅಪ್ಪ ವೆಂಕೋಬನ್ನ ನೇತ್ರದಲಿ ನೋಡೀ। ಪವಿತ್ರಳಾದೇನಿಂದಿಗೇ॥ಪ॥ ವಸಿಷ್ಠ ಕಶ್ಯಪ ಮೊದಲಾದ ಮುನಿವರರೆಲ್ಲಾ। ವಿಷ್ಣು ಗಂಗೇ ತೀರದೀ ಸುಜ್ಞಾರಾದ ಮುನೀವರರೆ ಪೇಳುವೆ ಕೇಳಿನ್। ಯಜ್ಞಕ್ಕೆ ಯಾರಿಹರೆಂದೂ ಬ್ರಹ್ಮ ವಿಷ್ಣು ರುದ್ರ ಹಾಂಗೆಂದು ಯೋಚಿಸೇ। ಭೃಗೋತ್ತಮರ ಕರೆಸಿದರು ಬಂದನೇ ಭೃಗು ಋಷಿಯೂ ದೇವಾ॥1॥ ಬ್ರಹ್ಮ ಲೋಕದಿ ತಮ್ಮ ಕಂಡು ಆದರಿಸದಿರಲೂ। ನೊಂದು ಮನದಲಿ ಮೂಢನೆಂದು ಯೋಚನೆಮಾಡೀ। ಬಂದರೇ ಹರನ ಬಳಿಗೇ ಅಂದು ನಿನ್ನ ಲಿಂಗಕ್ಕೆ ಪೂಜೆಯಾಗಲಿ ಎಂದೂ। ಹಾಗೆಂದು ಶಾಪವನೆ ಕೊಟ್ಟೂ ಅಂದು ಲಕ್ಷ್ಮೀ ನಾರಾಯಣರು ಮಲಗಿರಲೂ। ಬಂದು ನಿನಗೊದ್ದರಲ್ಲೋ ದೇವಾ॥2॥ ಹೆದರದಲೆ ಭೃಗುಮುನಿಯ ಒದೆಯೆ ಪಾದಗಳಿಂದಾ। ಹೃದಯ ಮೇಲಿದ್ದ ಲಕ್ಷ್ಮೀ। ಕದನವಾಡುತಲೆ ಕೊಲ್ಲಾಪುರಕೆ ಪೋಗಲೂ। ಸದನ ವೈಕುಂಠ ಬಿಟ್ಟೂ। ಯದುನಾಥಗ್ಯಾರಿಲ್ಲ ಎನುತ ಗುಡ್ಡವಾಸೇರೆ। ಇದು ನಿನಗೆ ಸರಿಯೇ ದೇವಾ॥3॥ ಗುಪ್ತದೊಳಗೇ ಬಂದು ಹುತ್ತದೊಳಗಡಗಿದೆಯೋ। ಉತ್ತುಮಾ ಗೋವುಬಂದು। ನಿತ್ಯದಲಿ ಕ್ಷೀರವನ್ನು ಎರೆವ ಗೋವು ಗೋಪಾಲಕರಿಂದಾ ನೆತ್ತಿಯನೆ ಒಡೆಸಿಕೊಂಡೇ। ಸಿಟ್ಟಿನಿಂದಲೆ ಚೋಳರಾಯನಿಗೆ ಶಾಪವನು ಕೊಟ್ಟು ಕಿರೀಟವನು ಇಟ್ಟು ಮೆರೆದೆಯಲೊ ದೇವಾ॥4॥ ಮಾಯರಮಣನು ತನ್ನ ಗಾಯದೌಷಧಿಗಾಗೀ। ಭೂರಮಣ ವರಹನಲ್ಲೀ। ಮೂರು ಪಾದ ಭೂಮಿ ದಾನವನೆ ಕೊಡು ಎಂದೂ ಉಪಾಯದಿಂದದನ್ನಾ ವ್ಯಾಪಿಸೀ। ತಾಯಿ ಬಕುಳಾ ದೇವಿಯಿಂದ ಸೇವಿತನಾದೇ। ಶ್ರೀರಮಣ ನಿನಗೆ ಸರಿಯೇ ದೇವಾ॥5॥ ನಾಟಕಾಧಾರಿ ಕಿರಾತ ರೂಪವ ಧರಿಸೀ।

ಬೇಟೆಗೆನುತಲಿ ಪೋಗಲೂ। ತೋಟದೊಳಗೆ ಚೆಲ್ವ ಪದ್ಮಾವತಿಯು ಕಡೆಗಣ್ಣಿಂದಾ। ನೋಟದಿಂ ಮನ ಸೋಲಿಸೀ। ಬೂಟಕಾತನದಿಂದ ಜಗಳಾಟವನ್ನೇ ಮಾಡೀ। ಪೆಟ್ಟು ಬಿದ್ದು ಕಲ್ಲಲೇಟು ತಿಂದ್ಯಲೋ ದೇವಾ।।6।। ಗಡಗಡನೆ ನಡುಗುತ್ತ ಕುದುರೆಯನ್ನೇ ಕಳಗೊಂಡೆ। ಪದ್ಮಾವತಿ ವಾರ್ತೆಗಾಗಿ। ಬದಿಯಲಿದ್ದ ಬಕುಳಮಾಲಿಕೆಗೆ ಭೋದಿಸೀ। ಕಳುಹಿದಾಕಾಶನಲ್ಲೀ। ಚದುರೆಮಾತಿನ ಚಪಲೆ ಕೊರವಂಜಿ ನೀನಾದೆ। ಕಣಿಯ ಹೇಳುವದೆಲ್ಲಿ ಕಲಿತ್ಯೋ ದೇವಾ।।7।। ಬಂಧು ಬಳಗವ ಕರೆಸಿ ಬಹಳ ಸಾಲವ ಮಾಡೀ। ಕರಕೊಂಡು ಕರವೀರ ಪುರಕೇ। ಅಂಗನೇ ಲಕ್ಷ್ಮಿಯನು ಕರೆತಂದು ಕುಳ್ಳಿರಿಸೀ। ಚಂದದಿಂದಲೇ ಬೇಗನೇ। ಮಂದ ಗಮನೆಯೆ ನಿನ್ನ ಮಾತಲಾಲಿಸಿ ಮುನ್ನ। ಮಾಡಿಕೊಂಬೆ ಪದ್ಮಾವತಿಯನೂ ಎಂದೆಲ್ಯೋ ದೇವಾ।।8।। ಪತ್ರಿಕೇನೇ ರಾಜ ಅರ್ತಿಯಿಂದಲೆ ಬರೆಸಿದಾ। ಮತ್ತೆ ಪುರೋಹಿತನ್ನಾ। ನಿತ್ಯತೃಪ್ತನಿಗೆ ಪುತ್ರಿಯನೆ ಕೊಡುವೆನೆಂದೂ। ಲಗ್ನಪ್ರಯತ್ನವನೆ ಮಾಡಿಸಿದನೂ। ಸತ್ಯ ಸಂಕಲ್ಪವನೆ ಮತ್ತೆ ಋಷಿಗಳಿಗಿತ್ತೂ ಆಲಿಂಗನೆಯನೂ ದೇವಾ।।9।। ಅಷ್ಟದಿಕ್ಪಾಲಕರ ಅರ್ತಿಯಿಂದಲೆ ಕರೆಸಿದಾ। ಮತ್ತೆ ಕರವೀರಪುರಕೇ। ಅಂದಣವನೆ ಕಳುಹಿ ಲಕ್ಷ್ಮಿಯನೆ ಕರೆದಪ್ಪಿಕೊಂಡೂ। ಇನ್ನೆಲ್ಲು ಕಾಣೆ ಜಗದೀ। ಮಂದಗಾಮಿನಿ ಎನ್ನ ಮಾತಲಾಲಿಸುಮತ್ತೆ। ರಂಭೆ ಪದ್ಮಾವತಿಯನಂದನೇ ದೇವಾ।।10।। ಮಾಯರಮಣನೆ ತಾನು ಮಜ್ಜನವನೆ ಮಾಡಿದನೂ। ಸಿರಿದೇವಿ ಸಹಿತಾ। ಬೇಗದಿಂದಲಿ ವರಹ ದೇವರಲ್ಲಿಗೆ ಪೋಗೀ ಮನೆ ದೇವರಿಗೆ ಪೂಜೆ ಮಾಡೀದೇವಾ।।11।। ಬಂಧುಬಳಗವ ಕೂಡಿ ಭಾರೀ ಸಾಲವ ಮಾಡೀ। ಅಂದು ಕುಬೇರನಲ್ಲೀ। ಅರ್ಥವಾಗಿತ್ತ. ಕುಬೇರನೂ ಮದುವೆಗೇ। ಲಗ್ನ ಪ್ರಯತ್ನವನೆ ಮಾಡಿಸಿದನೂ।ಸತ್ಯ ಸಂಕಲ್ಪವನು ಪುತ್ರ ಯಜಮಾನನಿಗೇ। ಮದುವೆಯನೆ ಮಾಡಿಸೆಂದಾದೇವಾ।।12।। ಆಕಾಶರಾಯನೇಕ ಸಂಭ್ರಮದಿಂದಾ। ತಾ ಕನ್ಯಾದಾನಮಾಡೇ। ಬೇಕಾದಾಭರಣ ಕಿರೀಟ ಭೂಷಣಂಗಳನ್ನೂ। ಆಕಾಲದಲ್ಲಿಕೊಡಲೂ। ಸಾಕಾಗದಲ್ಲೋ ದೇವಾ ಬಡವರ ಕಾಡಿಬೇಡುವುದೂ। ಶ್ರೀಕಾಂತ ನಿನಗೆ ಸರಿಯೇ ದೇವಾ।।13।। ಮಂಗಳ ಸೂತ್ರವ ಕಟ್ಟಿ ಮಾಂಗಲ್ಯವನೆಧರಿಸಿ। ರಂಗ ಪದ್ಮಿನಿಯಕೂಡಿಸೀ। ಅಂಗನೇ ಲಕ್ಷ್ಮಿಯನು ಕರೆತಂದು ಕುಳ್ಳಿರಿಸೀ। ಚಂದ ದಿಂದಲೇ ಗಂಧರ್ವರು ಗಾನವ ಪಾಡೇ। ತುಂಬುರೂ ನಾಟ್ಯವಾಡೇ ಪಾಡೇ।।14।। ಶ್ರೀರಮಣ ಗಾದಿತ್ಯಶುಕರು ಕಂದ ಮೊದಲಾದ। ಫಲಗಳಿಂದ ಪಾದಗಳನೆ ಪೂಜಿಸಿ। ಧೀರರಿಂದಲೆ ಪೂಜೆ ಮಾಡಿಸಿ ಕೊಂಡನು ಶ್ರೀಕೃಷ್ಣನೂ। ವಾಸವನು ಮಾಡಿದನೂ। ಆ ರಾತ್ರಿಯಲ್ಲಿ ಆ ದಿವಸ ಅಲ್ಲಿದ್ದು। ನಾರಾಯಣ ಪುರವ ಸೇರಿದನು ಸಿರಿಸಹಿತಾದೇವಾ ।।15।। ಪನ್ನಗಾರಿವಾಹನ ರಥಶೃಂಗಾರ। ಇನ್ನುಂಟೆ ಮೂರು ಜಗದೀ। ಕಣ್ಣಲ್ಲಿ ಕಂಡೆ ಗರುಡೋತ್ಸವದ ಲಂಕಾರ। ಇನ್ನು ವರ್ಣಿಸಲಳವೇ। ಅನ್ನಪೂರ್ಣೆನೋಡು ಅಧಿಕ ಘಂಟಾನಾದ। ಎನ್ನ ಕಿವಿಗಾನಂದವೋ ದೇವಾ।।16।। ಗಾಳಿಗೋಪುರದ ವಿಮಾನ ಶ್ರೀನಿವಾಸ। ದೇವರನೆ ನಾನೋಡಿದೆ ಕಾಮಿಸಿಕಂಡೆ ಹೊನ್ನ ಹೊಸ್ತಿಲು ಗರುಡಕಂಭದ ಸುತ್ತ ಪ್ರದಕ್ಷಿಣೆಯನು ಮಾಡಿದೇ। ಸ್ವಾಮಿ ಪುಷ್ಕರಣಿಯಲಿ ಸ್ನಾನಪಾನವ ಮಾಡೀ। ನೋಡಿದೆನೋ ನಿನ್ನ ಭಕ್ತರಾದೇವಾ।।17।। ಪಾದದೊಳಗೊಪ್ಪುವೊ ಪಾಡುಗಾರುಳಿಗೆಜ್ಜೆ। ಮೇಲಾದ ಪೀತಾಂಬರಾ ಮೇಲಾದ ಸರಿಗೆ ಸರಾಪದಕದೋಳ್। ಕಮಲದಳಾಯತಾಕ್ಷನ ನೋಡಿದೇ ದೇವಾ।।18।। ಕರದಲ್ಲಿ ಒಪ್ಪುವೊ ಕಂಕಣ ಕಿರಿಗೆಜ್ಜೆ। ಶಿರದಿ ಕಿರೀಟ ಹೊಳೆಯೇ। ಬಿಳಿಯ ಮೂಗಿನ ನಾಮ ಭೀಮೇಶ ಕೃಷ್ಣನ ಮುಖವೂ। ಚೆಲುವಮೂರ್ತಿಯ ನೋಡಿದೆದೇವಾ।।19।। ಶ್ರೀನಿವಾಸನ ಚರಿತ್ರೆ ಹೇಳಿ ಕೇಳಿದವರಿಗೆ। ಸಾರಿ ಮುಕ್ತಿ ಕೊಡುವನೂ। ಏಳು ಬೆಟ್ಟದ ಒಡೆಯ ವೆಂಕಟಾದ್ರಿನಿಲಯಾ। ಶ್ರೀವೆಂಕಟೇಶ ಈಶಾ ದೇವಾ।।20।। ಮಂಗಳಂ ಶ್ರೀನಿವಾಸ ದೇವಗೇ। ಮಂಗಳಂ ಗೋವಿಂದಗೇ। ಮಂಗಳಂ ಲಕ್ಷ್ಮೀಪದ್ಮಾವತಿಗೇ। ಮಂಗಳಂ ವೆಂಕೋಬಗೇ ದೇವಾ।।21।।

## ಎನ್ನ ಬಿಟ್ಟಗಲದಿರು ಗೋವಿಂದ — ರಾಗ: ಸುನಾದವಿನೋದಿನಿ

ಎನ್ನ ಬಿಟ್ಟಗಲದಿರು ಗೋವಿಂದ। ಗೋವಿಂದ।।ಪ।। ನಿನ್ನ ಬಿಟ್ಟರೆ ಎನಗೆ। ಗತಿಯಾರು ಗೋವಿಂದ। ಚರಣಸೇವೆಯ ಎನಗೆ ಕರುಣಿಸು ಗೋವಿಂದ। ನಾಮ ಸುಧೆಯೊಳೆನ್ನ। ಮುಳುಗಿಸು ಗೋವಿಂದ।।ಎನ್ನ।। ವರಗಣಪನಾ ಸ್ಮರಿಸಿ। ಪಾಡುವೆನು ಗೋವಿಂದ। ವರಶಾರದೆಯ ನಮಿಸಿ। ಬೇಡುವೆನು ಗೋವಿಂದ।।ಎನ್ನ।। ಅರುಣಾಚಲೇಶನನು। ಸ್ತುತಿಸುತಲಿ ಗೋವಿಂದ। ನಿನ್ನ ಕಲ್ಯಾಣವನು। ಪಾಡುವೆನು ಗೋವಿಂದ।।ಎನ್ನ।। ಗೋವಿಂದ ಗೋವಿಂದ। ಶ್ರೀಹರಿ ಗೋವಿಂದ। ಗೋವಿಂದ

ಗೋವಿಂದ। ಶ್ರೀ ನಿಧಿ ಗೋವಿಂದ।।ಎನ್ನ।। ಭೃಗುಮುನಿಯ ದರ್ಪವನು। ಅಡಗಿಸಿದೆ ಗೋವಿಂದ। ಆಪಾದದಿಂ ನಿನ್ನ ಒದೆದನವ ಗೋವಿಂದ। ಪಾದದ ನೇತ್ರವನು ಕಳಚಿದೆ ನೀ ಗೋವಿಂದ। ಮಹಾಲಕ್ಷ್ಮಿ ನಿನ್ನ ಬಿಟ್ಟು ಸರಿಯಲು ಗೋವಿಂದ।। ಮಹಾಲಕ್ಷ್ಮಿ ವಿರಹದಲ್ಲಿ ಬಳಲಿದೆ ನೀ ಗೋವಿಂದ। ವೇದವತಿ ಬೇಡಿಕೆಯಾ ಸಲಿಸಲು ನೀ ಗೋವಿಂದ। ಧರೆಗಿಳಿದು ಬರಲು ನೀ ಹವಣಿಸಿದೆ ಗೋವಿಂದ। ಗರುಡನ ಪಾದುಕೆಯಾಗಿಸಿದೆ ಗೋವಿಂದ।। ಕೌಸ್ತುಭವ ತುಳಸಿ ಮಣಿಯಾಗಿಸಿದೆ ಗೋವಿಂದ। ಚೋಳ ರಾಜ್ಯದೊಳು ತಾನಿಳಿದ ಗೋವಿಂದ। ಹುತ್ತದೊಳು ಅಡಗುತಲಿ ನೀನಿಂದೆ ಗೋವಿಂದ। ಮತ್ತೆ ಬಹುದಿನಗಳು ಉರುಳಿದವು ಗೋವಿಂದ।। ಮತ್ತೆ ಪತಿ ಸ್ಥಿತಿ ಅರಿತು ಲಕ್ಷ್ಮಿಯು ಗೋವಿಂದ। ಬ್ರಹ್ಮನನ್ನು ಶಿವನನು ಗೋವಿಂದ ಗೋವಿಂದ। ಗೋವು ಕರುವಾಗಿಸಿ ಗೋವಿಂದ ಗೋವಿಂದ। ಚೋಳರಾಜನಿಗೆ ವಿಕ್ರಯಿಸಿ ಗೋವಿಂದ।। ಗೋವಿಂದ ಗೋವಿಂದ ಶ್ರೀ ಹರಿ ಗೋವಿಂದ। ಗೋವಿಂದ ಗೋವಿಂದ ಶ್ರೀ ನಿಧಿ ಗೋವಿಂದ।। ಲಕ್ಷ್ಮಿ ಕರವೀರಪುರ ಸೇರಿದಳು ಗೋವಿಂದ। ಗೋವು ಕರುವನು ತಾ ಸರಪಣಿಯೊಳ್ ಗೋವಿಂದ। ಕಟ್ಟಿ ಗೋಪಾಲಕನು ಹೊರಟನು ಗೋವಿಂದ। ಅಲ್ಲಿ ಅತ್ಯಾಶ್ಚರ್ಯ ನಡೆಯಿತು ಗೋವಿಂದ।। ಗೋವು ಕರುಗಳು ಅತ್ತಹುತ್ತದೆಡೆ ಗೋವಿಂದ। ಸಾಗಿ ತಾ ಹಾಲನು ಹಿಂಡುತಿರೆ ಗೋವಿಂದ। ಬಾಲನು ಅದಕಂಡು ಬೆರಗಾಗಿ ಗೋವಿಂದ। ಅರಸನೆಡೆ ಬಂದು ತಾ ಅರುಹಲು ಗೋವಿಂದ।। ಅದಕೆ ಶಿಕ್ಷೆಯ ನೀಡು ಎಂದರಸ ಗೋವಿಂದ। ಮರುದಿನವು ಕೋಲೊಂದ ಪಿಡಿಯುತಲಿ ಗೋವಿಂದ। ಅಡವಿಗೆ ನಡೆದನವ ಗೋಪಾಲ ಗೋವಿಂದ। ಅಲ್ಲಿದ್ದ ಹರಿ ನೀನು ಗೋವಿಂದ ಗೋವಿಂದ।। ಎಲ್ಲವನು ಅರಿಯುತಲಿ ಗೋವಿಂದ ಗೋವಿಂದ। ಗೋವು ಹಾಲನು ಜಿಹ್ವೆಗೆ ಹಿಂಡುತಿರೆ ಗೋವಿಂದ। ಗೋಪಾಲ ಕೋಲಿಂದ ಹೊಡೆಯಲು ಗೋವಿಂದ। ನಿನ್ನ ಶಿರದಿಂ ರುಧಿರ ಸುರಿಯುತಿರೆ ಗೋವಿಂದ।। ಗೋವಿಂದ ಗೋವಿಂದ ಶ್ರೀಹರಿ ಗೋವಿಂದ। ಗೋವಿಂದ ಗೋವಿಂದ ಶ್ರೀನಿಧಿ ಗೋವಿಂದ।। ನೀ ತಾ ಮೂರ್ಛೆಯನು ಹೊಂದಿರಲು ಗೋವಿಂದ। ಅದಕಂಡು ಬಾಲನು ಓಡಿದನು ಗೋವಿಂದ। ಅರಸನಿಗೆ ಪರಿಸ್ಥಿತಿಯ ಪೇಳಿದನು ಗೋವಿಂದ। ಧಾವಿಸಿ ಬಂದನು ಅರಸನು ಗೋವಿಂದ।। ಅರಸನನು ಶಪಿಸಿದೆ ನೀ ಗೋವಿಂದ ಗೋವಿಂದ। ಅರಿಯದೆನೀ ಆಜ್ಞೆಯನು ಇತ್ತುದಕೆ ಗೋವಿಂದ। ಪಿಶಾಚ ಜನ್ಮವದು ಬರಲೆಂದು ಗೋವಿಂದ। ಪರಿಪರಿಯೊಳ್ ಅರಸ ತಾ ಬೇಡಲು ಗೋವಿಂದ।। ಪರಿಹಾರ ಸೂಚಿಸಿದೆ ಅರಸನಿಗೆ ಗೋವಿಂದ। ಆಕಾಶರಾಜನ ಪುತ್ರಿಯೊಳುಗೋವಿಂದ। ಕಲ್ಯಾಣ ಸಮಯದೊಳು ಗೋವಿಂದ ಗೋವಿಂದ। ವಜ್ರದಂಗಿಯ ಎನಗೆ ತೊಡಿಸುವನು ಗೋವಿಂದ।। ಆ ಸಮಯದೊಳೆನ್ನ ನೇತ್ರದಲಿ ಗೋವಿಂದ। ಆನಂದ ಭಾಷ್ಪವದು ಸುರಿಯುವುದು ಗೋವಿಂದ। ಅದ ಕಾಣಲು ಶಾಪ ಹರಿಯುವುದು ಗೋವಿಂದ। ಎಂದೆನುತ ಪೇಳಿದೆ ನೀ ಗೋವಿಂದ। ಗೋವಿಂದ।। ಗೋವಿಂದ ಗೋವಿಂದ ಶ್ರೀಹರಿ ಗೋವಿಂದ। ಗೋವಿಂದ ಗೋವಿಂದ ಶ್ರೀ ನಿಧಿ ಗೋವಿಂದ।। ಮತ್ತೆ ತಾ ಲಕ್ಷ್ಮಿಗೆ ಪೇಳಿದೆ ನೀ ಗೋವಿಂದ। ಈ ಗೋವು ಕರುವನು ಸಾಗಿಸೆಂದೆ ಗೋವಿಂದ। ಬೇರೆಡೆಗೆ ಪೋಗುವೆನು ಎಂದೆ ನೀ ಗೋವಿಂದ। ಏಳು ಬೆಟ್ಟವನೇರಿ ತಲುಪಿದೆ ನೀ ಗೋವಿಂದ।। ವರಾಹ ರೂಪನ ದೇಗುಲದಿ ಗೋವಿಂದ। ಬಕುಳಾ ದೇವಿಯನು ನೀ ಕಂಡೆ ಗೋವಿಂದ। ಕಂಡು ನೀ ಬಕುಳೆಗೆಶರಣಾದೆ ಗೋವಿಂದ। ಹಿಂದಿನ ಲೀಲೆಯನು ತೋರಿಸಿದೆ ಗೋವಿಂದ।। ಬಕುಳೆಯು ಬೆರಗಾಗಿ ನೋಡುತಿರೆ ಗೋವಿಂದ। ಕಲ್ಯಾಣವಾಗಿಸೆಂದು ನೀ ಕೇಳ್ದೆ ಗೋವಿಂದ। ಬಕುಳೆಯು ನುಡಿದಳು ಹರಿ ಇಚ್ಛೆ ಗೋವಿಂದ। ವಧುವನು ಹುಡುಕಲು ನೀ ಹೊರಟೆ ಗೋವಿಂದ।। ರಾಜನು ಯಾಗಕೆ ಭೂಮಿಯನು ಗೋವಿಂದ। ಉಳಿಸಲು ಪೆಟ್ಟಿಗೆಯು ಸಿಲುಕಲು ಗೋವಿಂದ। ಅದರೊಳು ಪದ್ಮ ಪುಷ್ಪವಿರೆ ಗೋವಿಂದ। ಪುಷ್ಪದೊಳು ಶಿಶುವೊಂದು ಹೊಳೆಯುತಿರೆ ಗೋವಿಂದ।। ಗೋವಿಂದ ಗೋವಿಂದ ಶ್ರೀಹರಿ ಗೋವಿಂದ। ಗೋವಿಂದ ಗೋವಿಂದ ಶ್ರೀನಿಧಿ ಗೋವಿಂದ।। ಶಿಶುವನು ಕರೆತಂದು ಸಾಕಿದನು ಗೋವಿಂದ। ಬೆಳೆಯುತಲಿ ಸಕಲ ಕಲೆ ಅರಿತಳು ಗೋವಿಂದ। ಪದ್ಮ ಜೆಯು ಸದ್ಗುಣ ಸಂಪನ್ನೆ ಗೋವಿಂದ। ಒಂದು ದಿನ ಪದ್ಮ ಜೆಯು ವಿಹರಿಸಲು ಗೋವಿಂದ।। ಸಖಿಯರ ಕೂಡಿ ತಾ ನಡೆದಿರಲು ಗೋವಿಂದ। ಗಜವದು ಹೂಂಕಾರ ಗೈಯಲು ಗೋವಿಂದ। ಆ ಗಜಕೆ ಬಾಣವನು ಹೂಡಲು ಗೋವಿಂದ। ಅಷ್ಟರೊಳುಬಾಣವು ನಾಟಿತು ಗೋವಿಂದ।। ಸಖಿಯರು ನಿನ್ನೆಡೆಗೆ ಬಂದು ತಾ ಗೋವಿಂದ। ಪರಿಪರಿಯ ಪ್ರಶ್ನೆಯನು ಸುರಿಸಲು ಗೋವಿಂದ। ನಗುನಗುತ ನಿನ್ನ ಪರಿ ಪೇಳ್ದೆ ನೀ ಗೋವಿಂದ। ಪದ್ಮ ಜೆಯು ನಿನ್ನನು ಕಾಣುತಲಿ ಗೋವಿಂದ।। ತನ್ನಯ ಮನವನು ಅರ್ಪಿಸಿದಳ್

ಗೋವಿಂದ। ಆಕಾಶರಾಜನ ಪುತ್ರಿಯೊಳು ಗೋವಿಂದ ಗೋವಿಂದ। ನಿನ್ನಯ ಮನವನು ಅರ್ಪಿಸಿದೆ ಗೋವಿಂದ। ಪದ್ಮಜೆಯು ವಿರಹದೊಳು ಮುಳುಗಿದಳು ಗೋವಿಂದ।। ಗೋವಿಂದ ಗೋವಿಂದ ಶ್ರೀ ಹರಿ ಗೋವಿಂದ। ಗೋವಿಂದ ಗೋವಿಂದ ಶ್ರೀನಿಧಿ ಗೋವಿಂದ।। ಕೊರವಂಜಿ ರೂಪದೊಳು ನೀ ಪೋದೆ ಗೋವಿಂದ। ಕರವನೋಡುತ ಕಣಿಯ ನೀ ಪೇಳ್ದೆ ಗೋವಿಂದ। ಓಮಾಯಿ ಮಾಹಾಮಾಯಿಕರು ಮಾಯಿಗೋವಿಂದ। ಓ ದುರ್ಗಿ ಓಂಕಾಳಿ ಮಹಾಂಕಾಳಿ ಗೋವಿಂದ।। ಓ ದುರ್ಗಿ ಎನ್ನುತಲಿ ಕಣ್ಣುಮುಚ್ಚಿ ಗೋವಿಂದ। ಮುಂದಿನದ ನುಡಿದೆ ನೀ ಗೋವಿಂದ। ನುಡಿನುಡಿದು ಹಿಂದಿರುಗಿ ಬಂದೆ ನೀ ಗೋವಿಂದ। ಬಕುಳೆಗೆ ಸಕಲವ ನೀ ಪೇಳ್ದೆ ಗೋವಿಂದ।। ಬಕುಳೆಯು ವಧುವನು ಕಂಡು ತಾ ಗೋವಿಂದ ಬಲು ಹಿಗ್ಗಿ ಮನದೊಳು ಒಲಿದಳು ಗೋವಿಂದ। ಶುಭಮುಹೂರ್ತವನು ಇಡಿಸಿದಳು ಗೋವಿಂದ। ಮುವ್ವತ್ತು ಮುಕ್ಕೋಟಿ ದೇವರ್ಗಳು ಗೋವಿಂದ।। ಮುದದಿಂದ ಬಂದು ತಾ ನೆಲಸಿದರು ಗೋವಿಂದ। ವರ ಕುಬೇರನ ಸಾಲ ಕೇಳಿದೆ ನೀ ಗೋವಿಂದ। ವಿಜ್ರಂಭಣೆಯೊಳು ಶೃಂಗರಿಸೆ ಗೋವಿಂದ। ಥಳಥಳನೆ ಝುಗಝುಗಿಸಿ ಹೊಳೆಯುತಿರೆ ಗೋವಿಂದ।। ಗೋವಿಂದ ಗೋವಿಂದ ಶ್ರೀಹರಿ ಗೋವಿಂದ। ಗೋವಿಂದ ಗೋವಿಂದ ಶ್ರೀನಿಧಿ ಗೋವಿಂದ।। ವರ ನಾರದ ಮುನಿಯು ಲಕ್ಷ್ಮಿಯನು ಗೋವಿಂದ। ಸ್ತುತಿಸುತಲಿ ನಿನ್ನಡೆಗೆ ಕರೆತಂದೆ ಗೋವಿಂದ। ಸ್ತುತಿಸುತಲಿ ನಿನ್ನೆಡೆಗೆ ಕರೆತಂದ ಗೋವಿಂದ। ಹರಿ ನೀ ನಾಟಕವಾಡಿ ಮಲಗಿರಲು ಗೋವಿಂದ। ಪತಿಯ ಸಂತೈಸುತಲಿ ಗೋವಿಂದ ಗೋವಿಂದ।। ಕಲ್ಯಾಣ ಸಿದ್ಧತೆಯ ನಡೆಸಿದಳು ಗೋವಿಂದ। ಪದ್ಮಾವತಿಯನು ನೋಡಲು ಗೋವಿಂದ। ಕಣ್ಗಳೆರಡು ತಾ ಸಾಲದು ಗೋವಿಂದ। ವಿಧವಿಧದ ಪೂಮಾಲೆ ಬದಲಿಸಲು ಗೋವಿಂದ।। ಬಕುಳೆಯು ಕಂಡಳು ಹರುಷದಲಿ ಗೋವಿಂದ। ಆಕಾಶರಾಜನು ಧಾರೆಯೆರೆ ಗೋವಿಂದ। ಪುಷ್ಪವೃಷ್ಟಿಯ ದೇವರ್ ಸುರಿದರು ಗೋವಿಂದ। ಎಲ್ಲೆಲ್ಲು ಝೇಂಕಾರವಾಗುತಿರೆ ಗೋವಿಂದ।। ಮತ್ತೆ ಶ್ರೀನಿವಾಸ ನೀ ಗೋವಿಂದ। ಮಾಂಗಲ್ಯ ಕಟ್ಟಿದೆ ನೀ ಗೋವಿಂದ ಗೋವಿಂದ। ಕಲ್ಯಾಣ ವೈಖರಿಯ ವರ್ಣಿಸಲು ಗೋವಿಂದ। ಏಳು ಹೆಡೆ ಫಣಿಗೂ ತರವಲ್ಲ ಗೋವಿಂದ।। ಗೋವಿಂದ ಗೋವಿಂದ ಶ್ರೀ ಹರಿ ಗೋವಿಂದ। ಗೋವಿಂದ ಗೋವಿಂದ ಶ್ರೀನಿಧಿ ಗೋವಿಂದ।। ವೈರ ಮುಡಿ ಶ್ರೀನಿಧಿಗೆ ಅಲಂಕರಿಸೆ ಗೋವಿಂದ। ಆನಂದಬಾಷ್ಪವು ತಾ ಸುರಿಯಲು ಗೋವಿಂದ। ರಾಜನು ಅದಕಂಡು ಭ್ರಮಿಸುತಿರೆ ಗೋವಿಂದ। ಚೋಳರಾಜನು ಶಾಪ ನೀಗಿದನು ಗೋವಿಂದ।। ಎಲ್ಲರೊಳು ಒಂದಾಗಿ ನಲಿದನು ಗೋವಿಂದ। ಪದ್ಮಜೆಗೂ ಲಕ್ಷ್ಮಿಗೂ ವಿರಸವಿರೆ ಗೋವಿಂದ। ಏಕಾಂಗಿಯಾಗಿ ತಾ ನಿಂದೆ ನೀ ಗೋವಿಂದ। ತಿರುಪತಿ ತಿಮ್ಮಪ್ಪ ನೀನಾದೆ ಗೋವಿಂದ। ಕಲಿಯುಗದಿ ಭಕ್ತರಿಗೆ ಕರುಣಿಸಲು ಗೋವಿಂದ। ಏಳುಗಿರಿ ಮೇಲೆ ತಾ ಹೊಳೆಯುತಿಹೆ ಗೋವಿಂದ। ಏಳೇಳು ಜನ್ಮದ ಬಂಧವು ನೀ ಗೋವಿಂದ। ಅವರವರಭೀಷ್ಟವನು ಸಲಿಸುವೇ ನೀ ಗೋವಿಂದ।। ಶಾರದ ದಾಸಿ ವಂದಿತ ಗೋವಿಂದ। ಸಾಮಗಾನಪ್ರಿಯ ಗೋವಿಂದ ಗೋವಿಂದ। ಸನ್ಮಂಗಳಾಂಗನೆ ಗೋವಿಂದ ಗೋವಿಂದ। ಮಂಗಳವ ಪಾಡುವೆನು ಗೋವಿಂದ ಗೋವಿಂದ।।

### ಶ್ರೀನಿವಾಸನೆ ನಿಮ್ಮ ನಾಮವನು

ಶ್ರೀನಿವಾಸನೆ ನಿಮ್ಮ ನಾಮವನು ಕೇಳಿ। ನೇಮದಿಂದ ನಿನ್ನ ಸ್ಮರಿಸುತ್ತಿದ್ದೆ।। ಎನ್ನ ಮನಸ್ಸಿನ ಭಾವವನ್ನು ತಿಳಿಯಲು ನೀನು। ಮುನ್ನ ಅಶ್ವವನೇರಿ ವನಕೆ ಬಂದೆ। ವನಜಾಕ್ಷಿಯರು ನಾವು ವನಕೆ ಬರುತಿರಲಾಗ। ಘನಮಹಿಮ ನೀನಲ್ಲಿ ಆಗಮಿಸಿದೆಯೇ।। ಫುಲ್ಲನಾಭನೆ ನೀನು ನಲ್ಲೆಯರ ನೋಡುತ್ತಾ। ಸಲ್ಲದಾ ಮಾತುಗಳ ನೀ ನಾಡಿದೆಯೋ। ವಲ್ಲಭೇಯರು ನಾವು ಕಲ್ಲಿನಿಂ ತಾಟಿಸಲು। ಅಲ್ಲೆ ಅಶ್ವವು ಬೀಳೆ ನಡೆದೆ ಮುಂದೆ।। ಕೊರವಿ ರೂಪವ ತಾಳಿ। ಪರಿಪರಿಯ ಕಣಿ ಹೇಳಿ। ಪರಮ ಪಾದದರೇಣು ತರುಣಿಗಿತ್ತೆ। ಆಕಾಶರಾಜನ ಅಳಿಯನಾಗಿ। ಶ್ರೀತರುಣಿ ಪದ್ಮಾವತಿಯ ಕರಪಿಡಿದು। ಭೂತಳದಿ ನಿಂತೆ। ಶ್ರೀ ವೆಂಕಟೇಶನು ನೀನು । ಕರುಣದಿಂದೀಗ ನೀ ಪಾಲಿಸೆನ್ನ।।

### ವೆಂಕಟೇಶ ಕಲ್ಯಾಣ ವಿಶ್ವದ ಕಲ್ಯಾಣ

ವೆಂಕಟೇಶ ಕಲ್ಯಾಣ ವಿಶ್ವದ ಕಲ್ಯಾಣ।।ಪ।। ಪದ್ಮಾವತಿಯ ಕಲ್ಯಾಣ ಭಾಗ್ಯದ ಕಲ್ಯಾಣ।।ಅ.ಪ.।। ನಿತ್ಯೋತ್ಸವದ ಕಲ್ಯಾಣ। ನಿತ್ಯ ಕಲ್ಯಾಣ। ಪದ್ಮಾವತಿಯ ಕಲ್ಯಾಣ ಭಾಗ್ಯದ ಕಲ್ಯಾಣ।।1।। ಬ್ರಹ್ಮರುದ್ರರು ಇಂದ್ರ ಚಂದ್ರರು। ಮುಕ್ಕೋಟಿ ಸುರರು

ಬಂದಿಹರು। ಮನ್ಮಥ ಜನಕನ ಮದುವೆಯ ಮಾಡಲು ಲಕುಮಿ ಬಂದಳು। ಬಕುಳೆಯು ಬಂದಿಹಳು ॥2॥ ಬನ್ನಿರಿ ವೈಶಾಖ ದಶಮಿಯ ಕಲ್ಯಾಣ। ನೋಡಿರಿ ವೈಭವ ಪೂರಿತ ಕಲ್ಯಾಣ। ಶ್ರೀನಿಧಿ ಕಮಲಾನಾಥನ ಕಲ್ಯಾಣ। ಲೋಕದ ಕಣ್ಮನ ಸೆಳೆಯುವ ಕಲ್ಯಾಣ॥3॥ ಕಲ್ಯಾಣೋತ್ಸವ ಸೇವೆಯ ಮಾಡೋಣ। ಶ್ರೀನಿವಾಸರ ಕಲ್ಯಾಣೋತ್ಸವ ನೋಡೋಣಾ। ಕಾಣಿಕೆ ಸಲ್ಲಿಸಿ ನಮಿಸೋಣ। ಕಾಣಿಕೆ ಸಲ್ಲಿಸಿ ನಮಿಸೋಣ। ಕೈವಲ್ಯ ಸುಖವನ್ನು ಪಡೆಯೋಣಾ। ಕೈವಲ್ಯ ಸುಖವನ್ನು ಪಡೆಯೋಣ ॥4॥

### ತಿರುಮಲ ವೇಂಕಟ ಶೈಲಪನಾಥಂ

ತಿರುಮಲ ವೇಂಕಟ ಶೈಲಪನಾಥಂ, ಕರಯುಗಶಂಖರಥಾಂಗಸನಾಥಮ್। ಪುರಹರಬ್ರಹ್ಮ ಚರಾಚರನಾಥಂ, ತಂ ಪ್ರಣಮಾಮಿ ವೃಷಾಚಲನಾಥಮ್॥1॥ ಫಣಿವರಶೈಲಸಮಾಶ್ರಿತ ನಾಥಂ ಮಣಿಗಣ ಭೂಷಣ ಭೂಷಿತ ನಾಥಮ್। ಕನಕ ಕಿರೀಟಮನೋಹರನಾಥಂ ತಂ ಪ್ರಣಮಾಮಿ ವೃಷಾಚಲನಾಥಮ್॥2॥ ಗರುಡಗಿರೀಶಕೃತಾಸ್ಪದನಾಥಂ ಕರುಣರಸಾಮೃತ ಸಾಗರನಾಥಮ್। ವರದಮನನ್ತಮ ನಾಮಯ ನಾಥಂ ತಂ ಪ್ರಣಮಾಮಿ ವೃಷಾಚಲನಾಥಂ॥3॥ ಕಪಿಲಸರೋವರ ವೈಭವ ನಾಥಂ ವಿಪಿನವಿಹಂಗವಿಬೋಧಿತನಾಥಮ್। ನೃಪಶತಸಂಕುಲ ಸಂಸ್ತುತನಾಥಂ ತಂ ಪ್ರಣಮಾಮಿ ವೃಷಾಚಲನಾಥಮ್॥4॥ ನಾಕನೃಪಾಲ ಸುತಾಂಚಿತನಾಥಂ ಲೋಕಜನಾವನ ಪಾವನನಾಥಮ್। ಸಂಕಟನಾಶನ ಸಂಸ್ತುತನಾಥಂ ತಂ ಪ್ರಣಮಾಮಿ ವೃಷಾಚಲನಾಥಮ್॥5॥ ಭಿಲ್ಲಕುಲಾಲಕುಲಾವನನಾಥಂ ಲೋಕಜನಾವನ ಪಾವನ ನಾಥಮ್। ಕಲ್ಯಕೃತೋತ್ತಮದಿವ್ಯ ಪ್ರಭಾತಂ ತಂ ಪ್ರಣಮಾಮಿ ವೃಷಾಚಲನಾಥಮ್॥6॥ ಭಕ್ತ ಸಹಸ್ರ ನಿಷೇವಿತನಾಥಂ ಮುಕ್ತಿವರಾದಿಕ ದಾನಸಮರ್ಥಮ್। ಶಕ್ತಿಯುತಂ ವಿಬುಧಾಶ್ರಿತನಾಥಂ ತಂ ಪ್ರಣಾಮಾಮಿ ವೃಷಾಚಲನಾಥಮ್॥7॥ ಸಾಲತಮಾಲರಸಾಲ ಸಮೇತಂ ಶೈಲಕುಲಾಧಿಪಶೃಂಗಸನಾಥಮ್। ನೀಲಸರೋಜಶರೀರವಿಭಾಂತಂ ತಂ ಪ್ರಣಮಾಮಿ ವೃಷಾಚಲನಾಥಮ್॥8॥ ಅರುಣ ಸಹೋದರ ದಿವ್ಯವರೂಥಂ ಸರಸಿರುಹೇಕ್ಷಣ ಸುಂದರನಾಥಮ್। ಧರಣಿರಮಾಪ್ತ ಸಖಂ ಮಮ ನಾಥಂ ತಂ ಪ್ರಣಮಾಮಿ ವೃಷಾಚಲ ನಾಥಮ್॥9॥ ಕೃತನುತಗೋಪನಿಷೇವಿತನಾಥಂ ಯತಿಪತಿವೃಂದಸಮರ್ಚಿತ ನಾಥಮ್। ಶ್ರುತಿತತಿವಂದ್ಯ ಮಜಾದಿಕನಾಥಂ ತಂ ಪ್ರಣಮಾಮಿ ವೃಷಾಚಲನಾಥಮ್ ॥10॥

### ಶ್ರೀ ವೆಂಕಟೇಶನತಿ ಸುಂದರ ಮೋಹನಾಂಗ (ಶ್ರೀವೆಂಕಟೇಶ ದ್ವಾದಶನಾಮ)

ಶ್ರೀ ವೆಂಕಟೇಶನತಿ ಸುಂದರ ಮೋಹನಾಂಗಂ। ಶ್ರೀ ಭೂಮಿಕಾಂತಮರವಿಂದದಲಾಯ ತಾಕ್ಷಮ್। ಪ್ರಾಣಪ್ರಿಯಂ ಪರಮ ಕಾರುಣಿಕಾಂಬುರಾಶಿಂ। ಬ್ರಹ್ಮೇಶವಂದ್ಯಮಮೃತಂ ವರದಂ ನಮಾಮಿ॥1॥ ಅಖಿಲವಿಬುಧವಂದ್ಯಂ ವಿಶ್ವರೂಪಂ ಸುರೇಶಮ। ಭಯವರದ ಹಸ್ತಂ ಕಂಜಜಾಕ್ಷಂ ರಮೇಶಮ್। ಜಲಧರನಿಭಕಾಂತಿಂ ಶ್ರೀ ಮಹೀಭ್ಯಾಂ ಸಮೇತಂ। ಪರಮ ಪುರುಷಮಾದ್ಯಂ ವೇಂಕಟೇಶಂ ನಮಾಮಿ॥2॥ ವೇಂಕಟೇಶೋ ವಾಸುದೇವೋ ವಾರಿಜಾಸನ ವಂದಿತಃ ಸ್ವಾಮಿ ಪುಷ್ಕರಿಣೀವಾಸಃ। ಶಂಖಚಕ್ರ ಗದಾಧರಃ॥3॥ ಪೀತಾಂಬರಧರೋ ದೇವೋ ಗರುಡಾರೂಢ ಶೋಭಿತಃ। ವಿಶ್ವಾತ್ಮಾ ವಿಶ್ವಲೋಕೇಶೋ ವಿಜಯೋ ವೇಂಕಟೇಶ್ವರಃ ॥4॥ ಏತಾನಿ ದ್ವಾದಶನಾಮಾನಿ ತ್ರಿಸಂಧ್ಯ ಯಃ ಪಠೇನ್ನರಃ। ಸರ್ವಪಾಪವಿನಿರ್ಮುಕ್ತೋ ವಿಷ್ಣೋ ಸಾಯುಜ್ಯಮಾಪ್ನಯಾತ್॥5॥

### ತಿರುಮಲ ವೇಂಕಟ ನಾಯಕ ಪಾಲಕ (ವೇಂಕಟೇಶವಿಭಷ್ಟಕಂ)

ತಿರುಮಲ ವೇಂಕಟ ನಾಯಕ ಪಾಲಕ ಮಂಗಲದಾಯಕ ನಾಥ ವಿಭೋ ಕರುಣರಸಾಮೃತ ವಾರಿಧಿ ಪೂರ್ಣನಿಶಾಕರನಾಯಕನಾಥ ವಿಭೋ। ಸರಸಿಜಸುನ್ದರ ದಿವ್ಯಪದಾಬ್ಜ ಸಮುಲ್ಲಸಿತಾಮರಸಿನ್ದುವಿಭೋ। ಜಯ ಜಯ ಹೇ ಫಣಿಪರ್ವತನಾಯಕ ವೇಂಕಟನಾಯಕ ನಾಥವಿಭೋ॥1॥ ಗಗನವಿಭೋಸ್ಸುತಯಾಪರಿರಂಭಿತ ಮಾಲಿಕಯಾಯುತಕಂಠ ವಿಭೋ। ವಿಗತಭಯಾರ್ತಿಜನಾಭಯದಾಯಕ ಧರ್ಮವಿವರ್ಧಕ ನಾಥ ವಿಭೋ।

ಜಗದಖಿಲಾವನ ಜೀವನ ದಾನವಿನೋದನ ಮನ್ಮಥನಾಥ ವಿಭೋ। ಜಯಜಯ ಹೇ ಗರುಡಾಚಲನಾಯಕ ವೇಂಕಟನಾಯಕ ನಾಥ ವಿಭೋ॥2॥ ವಿಷಧರಭೂಷಣ ಪಾಪವಿಶೋಷಣ ಸಜ್ಜನತೋಷಣ ನಾಥ ವಿಭೋ। ವೃಷಗಿರಿನಾಯಕ ನತಜನಪಾಲಕ ಸನ್ಮತಿದಾಯಕ ನಾಥ ವಿಭೋ। ತೃಷಿತಜನಾರ್ತಿಹರಾದಿಗುಣ್ಯೆರ್ಯುತ ಸನ್ಮನಸಾದೃತ ನಾಥ ವಿಭೋ। ಜಯಜಯ ಹೇ ವರವೇಂಕಟಶೈಲಪ ವೇಂಕಟನಾಯಕ ನಾಥ ವಿಭೋ॥3॥ ಕರಧೃತಶಂಖರಥಾಂಗವರಾಯುಧ ವಸ್ತ್ರವಿಭೂಷಣಕಾಂತ ವಿಭೋ। ಸುರಗಣಸೇವಿತ ಸಜ್ಜನ ಪೂಜಿತ ಸದ್ಗತಿದಾಯಕ ನಾಥ ವಿಭೋ। ದುರಿತಹರಾಖ್ಯ ಸರಿದ್ವರವಾರಿನಿಮಜ್ಜನಕೃಜ್ಜನಕೃಜ್ಜನಾಥ ವಿಭೋ। ಜಯ ಜಯ ಹೇ ವಿಮಲಾಂಜನಶೈಲಪ ವೇಂಕಟನಾಯಕ ನಾಥ ವಿಭೋ॥4॥ ಝುಷಕಮಠಾದಿ ವರಾಹ ನೃಕೇಸರಿ ವಾಮನಭಾರ್ಗವರಾಮ ವಿಭೋ। ಇಷುಧರವರ್ಯರ ಘೂದ್ವಹಸೀರಿಬಲಾನುಜ ಪಾತ್ರವಿಭೂತಿ ವಿಭೋ। ವೃಷವೃಷಬಾಂಜನ ವೇಂಕಟವಾಸುಕಿ ವಿಷ್ಣುವಿನಾಯಕನಾಥ ವಿಭೋ। ಜಯ ಜಯ ಹೇ ಶುಭ ಶೌರಿಗಿರಿಶ್ವರ ವೇಂಕಟನಾಯಕ ನಾಥ ವಿಭೋ॥5॥ ಕನಕ ಕಿರೀಟಲಸನ್ಮಣಿ ರತ್ನ ಕುಲಾಕಲಿ ತಾಲಕ ಮೌಲಿ ವಿಭೋ। ದಿನಕರ ಕೋಟಿ ಸಮಾನ ಶುಭಾನನರಂಜಿತ ಪುಂಡ್ರಲಲಾಟ ವಿಭೋ। ಧನಪತಿನಾತ್ತಧನಾರ್ಪಣ ದಕ್ಷ ವಿಚಕ್ಷಣದೀಕ್ಷಿತ ನಾಥ ವಿಭೋ। ಜಯಜಯ ಹೇ ವೃಷಭಾಚಲನಾಯಕ ವೇಂಕಟನಾಯಕ ನಾಥ ವಿಭೋ॥6॥ ಗುರುಕವಿ ಮಂದರ ವೀಂದುರಸಾತ್ಮಜ ಸೌಮ್ಯ ಗಣಾರ್ಚಿತ ನಾಥ ವಿಭೋ। ಸುರಪತಿ ವಹ್ನಿಯಮಾಸುರ ವಾರುಣ ವಾಯುಧನೇಶ ಮಹೇಶ ವಿಭೋ। ನರಪತಿ ಗಣ್ಯ ಗಣಾದಿ ಭಿರರ್ಚಿತ ಪಾದಯುಗಾಂಬುಜ ನಾಥ ವಿಭೋ। ಜಯ ಜಯ ಹೇ ವೃಷಪರ್ವತ ನಾಯಕ ವೇಂಕಟನಾಯಕ ನಾಥವಿಭೋ॥7॥ ಮಣಿಗಣ ಭೂಷಣ ಭೂಷಿತ ಸರ್ವಶರೀರ ಸುಶೋಭಿತ ನಾಥ ವಿಭೋ। ಗುಣಗಣ ರಂಜಿತ ಭಕ್ತ ಜನಾವನ ತತ್ಪರಮಾನಸ ನಾಥ ವಿಭೋ। ನತನಿಜಮಸ್ತಕ ಗೋಪಕ ವಿಭ್ರಮರಾಯಿತ ಪಾದ ಸರೋಜ ವಿಭೋ। ಜಯ ಜಯ ಹೇ ಪ್ರಣತಾರ್ತಿ ಹರಾಚ್ಯುತ ವೇಂಕಟನಾಯಕ ನಾಥ ವಿಭೋ॥8॥

### ಶ್ರೀನಿವಾಸನೆ ಏನ ಬೇಡಲಿ ನಿನ್ನ

ಶ್ರೀನಿವಾಸನೆ ಏನ ಬೇಡಲಿ ನಿನ್ನ। ಧ್ಯಾನದೊಳಿರಿಸೆನ್ನ॥ಪ॥ ನಾನಾ ವಿಷಯದಿ ಹೋಗಲಿಸದೆ ಮನಸು। ನಿನ್ನಲ್ಲೇನಿಲಿಸು॥ ನಾನು ನನ್ನದು ಎಂಬೊ ದುರಭಿ ಮಾನ। ಏನು ಹೇಳಲಿ ಇನ್ನು ಅದರ ಸಂಗ। ಬಹು ಮಾನವು ಭಂಗ॥1॥ ಎಲ್ಲಿ ನೋಡಿದರು ಅಲ್ಲಿ ನಿನ್ನ ರೂಪ। ತೋರಯ್ಯ ಭೂಪ। ಸೊಲ್ಲು ಸೊಲ್ಲಿಗೆ ನಿನ್ನ ದಿವ್ಯನಾಮ। ನುಡಿಸಯ್ಯ ಸುದಾಮ। ಫುಲ್ಲನಾಭ ನಿನ್ನ ಮಂಗಳ ಕಥೆಗಳನು। ಕೇಳಿಸು ಅನುದಿನವು॥ ಎಲ್ಲ ಕಾಲದಿ ನಿನಗರ್ಪಿತ ಶ್ರೀತುಲಸೀ। ಆಘ್ರಾಣಿಸುವೆ ಸುಖಿಸಿ॥2॥ ಶ್ರೀಶನಿನ್ನ ನಿಜದಾಸರಸಹವಾಸ। ದಲ್ಲಿರಿಸೋ ಈಶ। ಏಸು ಜನ್ಮಗಳು ಬಂದರು ಬರಲಯ್ಯ। ಪರಿಹರಿಸೋ ಜೀಯಂ। ಭೂಸುರ ಜನ್ಮವ ನಿತ್ತುದಕೆ ಪಾರ್ಥ। ಸಖಗುಣ ಪುರುಷಾರ್ಥ॥ ವಾಸುದೇವ ಗುರು ಶ್ರೀಶವಿಠ್ಠಲಸ್ವಾಮಿ। ಸರ್ವಾಂತರ್ಯಾಮಿ॥3॥

### ಬೆಟ್ಟದೊಡೆಯನಿಗೆ ಬೆಳಗುವೆ (ಆರತಿ) ರಾಗ: ಹಂಸಾನಂದಿ-ಆದಿತಾಳ

ಬೆಟ್ಟದೊಡೆಯನಿಗೆ ಬೆಳಗುವೆ ಆರತಿ। ಭಕ್ತರಕ್ಷಕನಿಗೆ ಕರ್ಪೂರದಾರತಿ। ಭಕ್ತರ ಮೊರೆಕೇಳಿ। ಬೆಟ್ಟದಿಂದಿಳಿದು ಬಂದು। ಭಕ್ತರಭೀಷ್ಟವ ಬಿಡದೆ ಸಲಿಸುವ॥ಪ॥ ಸೃಷ್ಟಿಸ್ಥಿತಿಗಳಿಗೆ ಆಧಾರನಾಗಿ। ಶಿಷ್ಟರಪಾಲಿಪ ಶ್ರೀನಿವಾಸನಾಗಿ। ಶಾರದ ದಾಸಿಯ ಹೃದ್ವಿಲಾಸನಾಗಿ। ವರದಹಸ್ತದಿಂ ಜಗವ ಪಾಲಿಪಗೆ। ವಜ್ರವೈಢ್ಯೂರ್ಯ ರತ್ನದಾರತಿ॥1॥ ಮುತ್ತು ಪಚ್ಚೆಯಿಂ ಹೊಳೆವ ಆರತಿ। ಶಂಖು-ಚಕ್ರಗಳ ಪಿಡಿದು ಹೊಳೆಯುತಿಹ। ನಂದ ಗೋವಿಂದಗೆ ಬೆಳಗುವೆನಾರತಿ। ಹೊಳೆಯುತಿಹ ಶ್ರೀನಿವಾಸಗೆ ಬೆಳಗುವೆನಾರತಿ। ಹೊಳೆಯುತಿಹ ವೆಂಕಟೇಶನಿಗೆ ಬೆಳಗುವೆನಾರತಿ॥2॥

**ಲಾಲಿ ಪಾವನ ಚರಣ (ಲಾಲಿ)** **ರಾಗ: ಆನಂದಭೈರವಿ-ಖಂಡಛಾಪುತಾಳ**

ಲಾಲಿ ಪಾವನ ಚರಣ ಲಾಲಿ ಅಘಹರಣ। ಲಾಲಿ ವೆಂಕಟರಮಣ ಲಲಿತ ಕಲ್ಯಾಣ॥ಪ॥ ವನಜಾಕ್ಷ ಮಾಧವ ವಸುದೇವ ತನಯ। ಸನಕಾದಿ ಮುನಿವಂದ್ಯ ಸಾಧುಜನಪ್ರಿಯ। ಇನಕೋಟಿ ಶತತೇಜ ಮುನಿಕಲ್ಪ ಭೂಜ। ಕನಕಾದ್ರಿಯನಿಲಯ ವೆಂಕಟರಾಯ ಜೀಯ॥1॥ ಜಗದೇಕ ನಾಯಕ ಜಲಜದಳ ನೇತ್ರ ಖಗರಾಜ ವಾಹನ ಕಲ್ಯಾಣ ಚರಿತ। ಸಗರತನಯಾರ್ಚಿತ ಸನಕಾದಿ ವಿನುತ ರಘುವಂಶ ಕುಲತಿಲಕ ರಮಣೀಯ ಗಾತ್ರ॥2॥ ನಂದಗೋಪಕುಮಾರ ನವನೀತ ಚೋರ ಮಂದಾಕಿನೀ ಜನಕ ಮೋಹನಾಕಾರ। ಇಂದುಧರ ಸತಿವಿನುತ ವಿಶ್ವ ಸಂಚಾರ ನಂದ ಗೋವಿಂದ ಮುಚುಕುಂದನುತ ಸಾರ॥3॥ ಪಕ್ಷಿ ವಾಹನ ವಿಷ್ಣು ಪಾಹಿ ಪರಮೇಶ ರಕ್ಷ ಕೌಸ್ತುಭ ಭೂಷ ವೈಕುಂಠ ವಾಸ। ಅಕ್ಷಯ ಫಲಧಾತ ಅಖಿಳ ಲೋಕೇಶ ಲಕ್ಷಣ ಪರಿಪೂರ್ಣ ಲಕ್ಷ್ಮೀ ಪ್ರಾಣೇಶ॥4॥ ನರಮೃಗಾಕಾರಿ ಹಿರಣ್ಯಕ ವೈರಿ ಕರಿರಾಜ ರಕ್ಷಕ ಕಾರುಣ್ಯಮೂರ್ತಿ। ಹರಿ ಆದಿ ಕೇಶವ ಗುರು ಅಪ್ರಮೇಯ ಸಿರಿಧರ ಶೇಷಗಿರಿ ವರತಿಮ್ಮರಾಯ॥5॥

**ಜಯಮಂಗಳಂ ನಿತ್ಯ ಶುಭಮಂಗಳಂ (ತೊಳಸದಕ್ಕಿಯ)** **ರಾಗ: ಭೈರವಿ**

ಜಯಮಂಗಳಂ ನಿತ್ಯ ಶುಭಮಂಗಳಂ॥ಪ॥ ತೊಳಸದಕ್ಕಿಯ ತಿಂಬ ಕಿಲುಬು ತಳಿಗೆಯಲುಂಬ। ಕೊಳಗದಲಿ ಹಣಗಳನು ಅಳೆಸಿಕೊಂಬ। ಇಲ್ಲ ತನಗೆಂದು ಸುಳ್ಳು ಮಾತಾಡಿದರೆ। ಎಲ್ಲವನು ಕಸುಕೊಂಬ ಕಳ್ಳ ದೊರೆಗೆ॥ಜಯ॥1॥ ತನ್ನ ನೋಡೇನು ಎಂದು ಮುನ್ನೂರು ಗಾವುದಬರೆ। ತನ್ನ ಗುಡಿಯ ಪೊಕ್ಕ ಜನರಿಗೆಲ್ಲಾ। ಹೊನ್ನು ಹಣಗಳ ಕಸುಕೊಂಡು ತನ್ನ ದರುಶನ ಕೊಡದೆ। ಬೆನ್ನೊಡೆಯ ಹೊಡೆಸುವ ಅನ್ಯಾಯಕಾರಿಗೆ ॥ಜಯ॥2॥ ಗಿಡ್ಡ ಹಾರುವನಾಗಿ ಬಡ್ಡಿ ದಾನವ ಬೇಡಿ। ದುಡ್ಡು ಕಾಸುಗಳಿಗೆ ಕೈಯ ನೀಡಿ। ಅಡ್ಡ ಬಿದ್ದ ದಾಸರಿಗೆ ಎಡರುಗಳ ಕಳೆದು। ದೊಡ್ಡವರಮಾಳ್ಪ ಸಿರಿ ವಿಜಯ ವಿಠಲಗೆ॥ಜಯ॥3॥

**ಜಯಮಂಗಳಂ ನಿತ್ಯ ಶುಭಮಂಗಳಮ್ (ಅಗಲೆದೆಯೆ)**

ಜಯಮಂಗಳಂ ನಿತ್ಯ ಶುಭಮಂಗಳಮ್॥ಪ॥ ಅಗಲೆದೆಯೆ ಹರಿಯ ಹೃದಯಾಲಯವು ನಿನಗಿರಲು। ಭೃಗುಮುನಿಯ ಬಂದೊದ್ದುದನು ಕಾಣುತ। ಮಿಗೆಮಿಳಿದು ಕರವೀರ ಪುರಕೆ ತೆರಳಿದ ನಿನ್ನ। ಬಗೆಯ ತಿಳಿದವರ್ಯಾರು ಭಜಕ ಜನ ಪ್ರೀಯೆ॥1॥ ದೇವದೇವೋತ್ತಮನು ನೀನಗಲಿದಾಕ್ಷಣದಿ। ಭೂವರಾಹನಾಶ್ರಯದಿ ತಾನಿಲ್ಲಲು। ಕಾವನಯ್ಯನ ಮದುವೆ ನೆವದಲಿ ನೀ ಪೋಗಿ। ಆ ವಿಭುವ ನೊಡಗೂಡಿದ ಅಖಿಲಜಗಭರಿತೆ॥2॥ ಪದುಮಜಾಂಡ ಶ್ರೀ ನಿನ್ನ ಪೂಜಿಸುವ ಭಕುತರಿಗೆ। ಉದಧಿ ಉಕ್ಕುವ ತೆರದಿ ಭಾಗ್ಯವಿತ್ತು। ಮುದದಿಂದ ಸಲಹೆಮ್ಮ ಮುನ್ನ ಅಹಿಹೊಳೆ ನಿಲಯೆ। ಸದಯ ವೇಂಕಟನ ನಿಜ ರಾಣಿ ಅಹಿವೇಣಿ॥3॥



## 12. ಶ್ರೀ ಶನೈಶ್ವರ ಜಯಂತಿ

**ನೀಲವರ್ಣ ನಮೋ ನಮೋ** **ರಾಗ: ರೇವತಿ**

ನೀಲವರ್ಣ ನಮೋ ನಮೋ। ಪಂಗುನಾಮ ನಮೋ ನಮೋ। ಕಾಲಾನುಜ ನಮೋ ನಮೋ। ಮಂದರಾಜ ನಮೋ ನಮೋ। ನೀಲ ವಾಹನ ನಮೋ ನಮೋ। ಹಂಸಬಾಲ ನಮೋ ನಮೋ। ಜಯಜಯ ನಮೋ ನಮಸ್ತೆ॥ ಕಾಲಾಂಕಿತ ನಮೋ ನಮೋ। ಸಕಲರಾಶಿಸುವಿ ನಮೋ ನಮೋ। ಶಾಲ ಚರಿತ ನಮೋ ನಮೋ। ಪಾಮರಜನ ಪರಿಪಾಲಕ ನಮೋ ನಮೋ। ಛಾಯಾಕುಮಾರ ನಮೋ ನಮೋ। ಜಯಜಯ ನಮೋ ನಮಸ್ತೆ। ನಮಸ್ತೆ ಶನಿದೇವ ಶನಿದೇವಾ ನಮಸ್ತೆ॥

## ಕೋಣಾಂತಕೋ ರೌದ್ರ (ದಶನಾಮಾನಿ-ಶನೈಶ್ವರ ಸ್ತುತಿ)

ಕೋಣಾಂತಕೋ ರೌದ್ರ ಯಮೋ ಥ ಬಭ್ರುಃ ಕೃಷ್ಣಃ ಶನಿಃ ಪಿಂಗಳಮಂದ ಸೌರಿಃ। ನಿತ್ಯಂ ಸ್ಮೃತೋ ಯೋ ಹರತೇ ಚ ಪೀಡಾಂ ತಸ್ಮೈ ನಮಃ ಶ್ರೀ ರವಿನಂದನಾಯ॥ ಕೋಣಪಃ ಪಿಂಗಳೋ ಬಭ್ರುಃ ಕೃಷ್ಣೋ ರೌದ್ರೋಂತಕೋ ಯಮಃ। ಸೌರಿಃ ಶನೈಶ್ವರೋ ಮಂದಃ ಪಿಪ್ಪಲಾದೇನ ಸಂಸ್ತುತಃ॥ ಏತಾನಿ ದಶನಾಮಾನಿ ಪ್ರಾತರುತ್ಥಾಯ ಯಃ ಪಠೇತ್ ಶನೈಶ್ವರ ಕೃತಾ ಪೀಡಾನ ಕದಾಚಿತ್ ಭವಿಷ್ಯತಿ॥

## ನೀಲಾಂಜನ ಸಮಾಭಾಸಂ

ನೀಲಾಂಜನ ಸಮಾಭಾಸಂ ರವಿಪುತ್ರಂ ಯಮಾಗ್ರಜಂ। ಛಾಯಾ ಮಾರ್ತಾಂಡ ಸಂಭೂತಂ ವಂದೇಹಂ ತಂ ಶನೈಶ್ವರಂ॥ ಶನೇ ದಿನಮಣೇಃ ಸೂನೋಹ್ಯನೇಕ ಗುಣಸನ್ಮಣೇ। ಹ್ಯರಿಷ್ಟಂ ಹರ ಮೇ ಭೀಷ್ಟಂ ಕುರುಮಾ ಕುರು ಸಂಕಟಂ॥

## ಕಾರ್ಕೋಟಕಸ್ಯ ನಾಗಸ್ಯ

ಕಾರ್ಕೋಟಕಸ್ಯ ನಾಗಸ್ಯ। ದಮಯಂತ್ಯಾ ನಳಸ್ಯಚ। ಋತಪರ್ಣಸ್ಯ ರಾಜರ್ಷೇ। ಕೀರ್ತನಂ ಕಲಿನಾಶನಂ॥

## ಶನಿದೇವ ಕೃಪೆಮಾಡು — ರಾಗ: ಅಠಾಣ

ಶನಿದೇವ ಕೃಪೆಮಾಡು ವಿನಯದಿಂ ಕಾಪಾಡು। ಮುನಿಯದೆ ಕ್ಷಮೆಯ ಕೊಡು ಅಭಯವನು ನೀಡು॥ಪ॥ ವಿನುತ ತನಯನೆ ನಿಮ್ಮ ಘನ ಮಹಿಮೆಯ ಮುನ್ನ। ಮನದೊಳು ತಿಳಿಯದ್ದೋದೇ ಅಪರಾಧಿಯಾದೆ॥1॥ ಅಪರಾಧವೆಲ್ಲವ ಕೃಪೆಯಿಂದ ಮನ್ನಿಸು। ಸಫಲವ ನೀಡು ಬೇಗಾ ಮಹಾನುಭಾವಾ॥2॥ ಕಾಡದಿರೆನ್ನ ಬಂದುಮಾಡುವ ಸಾಷ್ಟಾಂಗವ ಜೋಡಿಸಿ ಕರಗಳನು। ಬೇಡಿಕೊಂಬೆನು ನಿನ್ನ ಘನ ಸುಪ್ರಸನ್ನಾ॥3॥

## ಎಂತೂ ಪೊಗಳುವೆನಯ್ಯ — ರಾಗ: ಮಾಯಾಮಾಳವಗೌಳ

ಎಂತೂ ಪೊಗಳುವೆನಯ್ಯ। ಛಾಯಾಕಾಂತಾತ್ಮಜ ಶನೇಶ್ವರ ನಿಮ್ಮ ಮಹಿಮೆಯ॥ಪ॥ ದ್ವಾದಶ ಜನ್ಮ ಭೀತಿಯ ನಾಲ್ಕೈದೆಂಟು। ಆದ ಮಾತ್ರಕೆ ಬರೇ ಇಂತ ಮಾತ್ರಕ್ಕೆ ಬಾರೆಂದು ಸಾಧಿಸಿ। ಧರೆಗೆ ಚಾಡಿಯನ್ಹೇಳಿ। ಕಾದಿದ್ದ ಬಂಟರು। ಕಠಿನ ಮಾತುಗಳಾಡಿ। ಬೀದಿಗೆ ಎಳೆವೊರಯ್ಯಾ॥ ಸೇವಕ ಜನವಾದಿಸಿ ಓಡುವರೂ। ಓ ಶನಿರಾಯ॥1॥ ಧರೆ ಮೂರರೊಳಗೆ। ನೀನೆ ಬಲ್ಲಿದನೆಂದು ಸುರಧೇನುವಿಗೆ ಸರಿ। ಯಾದ ಗೋವ್ಗಳು ತಾವು। ಕರೆಯದೆ ಬರಡಾಗಿ ಕಾಲಲ್ಲಿ ಒದೆಯೋದು। ಇರಿಸಿದ್ದ ಧನ ಕಣ್ಣಿಗೆ ಕಾಣದೆ ಹೋಯಿತು। ಕಡಿದು ಬಟ್ಟೆ ಇಲಿ। ಕತ್ತರಿಸಿಡುವೋದು। ಗುರಿಯಿಲ್ಲದಾ ವ್ಯಾಜ್ಯ ಗುಂಡೀಗೆ ಬೀಳ್ವುದು। ನೆರೆ ಹೊರೆ ಸೇರರಯ್ಯಾ ಸೇವಕಜನ। ಕರೆದಾರೆ ಬಾರರಲ್ಲಾ। ಓ ಶನಿರಾಯ॥2॥ ಅತ್ಯಂತ ಪ್ರೀತಿಯಾಗಿದ್ದ। ದೊರೆಗಳ ತಾವು। ಸಿಟ್ಟಲಿದಂಡವ ತೆರಿಸಬೇಕೆಂಬರು। ವರ್ತಕರೆಂಬೋರು। ಹೊಣೆಯಾಗಲೊಲ್ಲರು। ಮಿತ್ರರು ಎಲ್ಲಾ ಶತ್ರುಗಳಾದರು। ಪುತ್ರರು ಸೇರರಯ್ಯಾ ಹತ್ರದಿ ನಿಂತು ನೆಟ್ಟಗೆ ಮುರಿವೋರಯ್ಯಾ॥ ಕೆಟ್ಟ ಕೆಲಸವ ಮಾಡಿದೆ ಎಂಬೋರಲ್ಲಾ। ಓ ಶನಿರಾಯ॥3॥ ದೇಹದೊಳಗೆ ಅರ್ಧ ದೇಹವಾದ ಸತಿ। ದಾರಿದ್ರ್ಯ ಬಂದಲ್ಲಿ ಮಾತಾಡಲೊಲ್ಲಳು। ಕೂಡೆ ಹುಟ್ಟಿದವರು ವೈರವ ಬೆಳಸೋರು। ಬೀಗರು ಸೇರರಯ್ಯಾ। ಹೆಣ್ಣು ಮಕ್ಕಳು। ಕರೆದರೆ ಬಾರರಲ್ಲಾ॥ಓಶನಿರಾಯ॥4॥ ಅಲ್ಲಾದಕಾರ್ಯ। ಕಾಯಿತು ಕೈ ಮನಸೋತು ಬಳಲಿಕೆ ತಪ್ಪೀ ಬಯಲಿಗೆ ಬರುವೋದು। ಮೈಯಲ್ಲಿ ಕಜ್ಜಿ ತುರಿಯು ಹೆಚ್ಚಿ ಕಾಡ್ವೋದು। ಚಲ್ವ ಕೃಷ್ಣನ್ನ ಪಾಡಿ। ಬಿಡುಗಡೆಯೊಳೂ। ವಲ್ಲೆನೆಂದರು ಸಂ। ಪದವೀವೋ ದೇವನಂ ಎಂತೂ ಪೊಗಳುವೆನಯ್ಯ॥5॥

## ಕೋಪವ ಬಿಡು ಬಿಡು — ರಾಗ: ಹಿಂದುಸ್ಥಾನಿಕಾಪಿ

ಕೋಪವ ಬಿಡು ಬಿಡು ಶನಿಮಹದೇವ ಕಾಪಾಡು ನಮಿಸುವೆ ಕರುಣ ಪ್ರಭಾವ॥ಪ॥ ತಾಪತ್ರಯದ ಬಲೆ ಬೀಸುವುದೇಕೆ ಈ ಪರಿ ಜೀವನ ಬಳಲುವುದೇಕೆ। ಸುಖದ ಬಯಕೆಯೊಳು ದುಃಖವಿದೇಕೆ ಸಖರೋಳ್ ಗಳಿಗೆಯೋಳ್

ಹಗೆತನವೇಕೆ।।1।। ಗಾಣದಪರಿ ತನು ತಿರುಗುತಲಿಹುದು ತ್ರಾಣವಿಲ್ಲದೆ ಭಕ್ತಿ ಬಳಲುತಲಿಹುದು। ಮೂರ್ಖರ ಜೊತೆಗೂಡಿ ಮತಿಹೀನನಾದೆ ಗೋರ್ಕಲ್ಲ ಸಕ್ರೆಯಂತಗಿಯುತ ಹೋದೆ।।2।। ಕಡುಕೋಪದೃಷ್ಟಿ ಹಿಂತಿರುಗಿಸು ದೇವ ಪಡುವ ವ್ಯಥೆಯ ತಾಳಲಾರೆನೋ ಜೀಯ। ನೀರ್ಗುಡಿಸುತ ಬೆಣ್ಣೆ ಹುಡುಕಿಸಬೇಡ ದುರ್ಗ ಮಧ್ಯದಿ ಮೃಗದೆಡೆ ಬಿಡಬೇಡ।।3।। ಕಾರ್ಗತ್ಲೆ ಕಮರಿಗೆ ತಳ್ಳಲಿ ಬೇಡ ವಾಘ್ರನ ಮಧ್ಯದಿ ಕೈ ಬಿಡಬೇಡ। ಪೂರ್ವಸುಕೃತದ ಫಲ ಪಡೆಯನ್ನ ಬೇಡ ಸರ್ವಸ್ವ ತಳೆದೆನ್ನ ತುಳಿಯಲಿ ಬೇಡ।।4।। ಕೇಳ್ವರಾಯರೆನುತಲಿ ಬರದಿರಬೇಡ ತಾಳ್ಮೆಯಿಂದಲಿ ಬಂದು ತಿಳುಹಿಸು ಜಾಡ। ದಾಟಲಸಾಧ್ಯವು ದೋಣಿಯು ಸಿಗದು ದಾಟಿ ಸಲಹುವ ಶಕ್ತನೀನೇ ಅಹುದು।।5।। ನಿನ್ನ ಮಹಾತ್ಮೆಯ ಅರಿಯದೆ ಹೋದೆ ಎನ್ನಗರ್ವದಿ ಬಹು ಹಿಂದುಳಿದ್ಹೋದೆ। ನಾನು ಗೈದಪರಾಧ ಮನ್ನಿಸು ದೇವ ನೀನೆನ್ನ ಸಲಹುವ ಮಹಾನುಭಾವ।।6।। ಶ್ರೇಷ್ಠ ಪುರುಷನಿವನೆನಿಸುವ ನೀನೆ ಅಷ್ಟೈಶ್ವರ್ಯದಲ್ಲಿ ಮೆರೆಸುವ ನೀನೆ। ದೃಷ್ಟಿಯ ನೀಡೋ ದೇವ ಕಷ್ಟವ ಹರಿಸೋ ನಷ್ಟದ ಕಡಲೊಳು ಜನರ ಉದ್ಧರಿಸೋ।।7।। ಮಾಡುವ ಕೆಲಸವ ಪೂರ್ಣವಗೊಳಿಸೋ ಆಡುವ ನುಡಿಯಲ್ಲಿ ಸತ್ಯವ ನುಡಿಸೋ। ಧನಧಾನ್ಯ ಸಂಪದ ವೃದ್ಧಿಯಗೊಳಿಸೋ ಮನೆಯೊಳು ಮಂಗಳ ಕಾರ್ಯವ ನಡೆಸೋ।।8।। ಘಾಸಿಯಾಗುವ ಜನ್ಮದಲಿ ಬೆಳಕರ್ದಿಸೋ ವಾಸುಕಿಶಯನನ ದರ್ಶನ ಕೊಡಿಸೋ। ಆಯುರಾರೋಗ್ಯಭಾಗ್ಯವ ಬೇಗನೆ ಸಲಿಸೋ ವಾಯುಸುತನೆ ಧ್ಯಾನ ಮರೆಯದಂತ್ಹರಸೋ।।9।। ಈಶ ಸೇವೆಯ ಫಲಪ್ರಾಪ್ತಿಗೊಳಿಸೋ ದೇಶಸೇವೆಯೊಳೆನ್ನ ಆಯುಸ್ಸು ಮುಗಿಸೋ। ಸಂಜೀವನೌಷಧ ಸಿಗುವದದೆಂತೋ ಮಂಜುನಾಥನು ಹನುಮಂತನೆ ಬಲ್ಲ।।10।। ಮಂಗಳಂ ಜಯ ಜಯ ಶನಿಮಹದೇವ ಮಂಗಳಂ ಜಯ ಜಯ ಕಲಿಯ ಪ್ರಭಾವ।।2 ಸಾರಿ।।

### ಉಂಡಲಿಗೆ ನೆಲಗಡಲೆ

ಉಂಡಲಿಗೆ ನೆಲಗಡಲೆ ಖಂಡ ಸಕ್ಕರೆ ಕಬ್ಬೂ। ಒಬ್ಬಟ್ಟು ಹೂರಣದ ಕಡುಬು ದೋಸೆಗಳಾ।। ಸೊಂಡಿಲಾ ಗಣಪತಿಗೆ ನೈವೇದ್ಯವನೆ ಮಾಡೀ। ಮುಕುಂದನಾ ಚರಣಕೇ। ಕೈ ಮುಗಿದು ವಂದಿಸುವೇ।। ಈಶ್ವರನು ನೀನೆ ಜಗದೀಶ್ವರನು ನೀನೆ। ಕೋಟೀಶ್ವರನು ನೀನೆ। ಶನೀಶ್ವರನು ನೀನೆ।। ಯಾಕಯ್ಯಾ ಶನಿರಾಯ ಕೋಪಿಸಿಕೊಳಬೇಡ।। ಆಕಳಾ ತುಪ್ಪದಲಿ ದೀಪ ಹಚ್ಚುವೆನೂ।। ಮಕ್ಕಳನು ಮರಿಗಳನು। ಕಷ್ಟಪಡಿಸಲಿಬೇಡಾ। ಹಿಟ್ಟಾ ಕುಟ್ಟಿ ತಂಬಿಟ್ಟ ನಿರಿಸುವೆನೂ।। ನಿನ್ನ ಹೆಸರನು ಹೇಳಿ। ನಾ ಒಳ್ಳೆಯಾ ಬ್ರಾಹ್ಮಣಗೇ। ಎಣ್ಣೆಯಾನೊತ್ತಿ ಬಿಸಿನೀರ ನೆರೆಯುವೆನು।। ಚಿಗಳಿ ತಂಬಿಟ್ಟನೂ ಎಳ್ಳುಪುಡಿ ಅನ್ನವನೂ। ಒಳ್ಳೆಯಾ ಬ್ರಾಹ್ಮಣಗೇ ಉಣಬಡಿಸುವೆನೂ। ಇಷ್ಟು ಪರಿಯಲಿ ಎನ್ನ ಕಷ್ಟ ಪಡಿಸಲಿಬೇಡಾ। ಉಟ್ಟ ಸೀರೇಯೆನಗೆ। ಮಟುಕ್ಮಾಡಬೇಡಾ। ಯಾವ ಪರಿಯಲಿ ಎನ್ನ ಬಾಧೆ ಪಡಿಸಲಿಬೇಡಾ।। ಬಾಯಿ ಕುತ್ತಿಗೆ ಅಡ್ಡಲಾಗಿ ಬರಬೇಡಾ। ಸ್ತೋತ್ರವನು ಮಾಡಿದರೆ। ಆತ ಶನೀಶ್ವರನೂ। ಪ್ರೀತಿ ಇಂದಲೆ। ಮುಗುಳುನಗೆಗಳನು ನಗುತಾ।। ಈಕೆ ಹಾಗೊಳ್ಳೋಳು। ಲೋಕದೊಳಗಿನ್ನಿಲ್ಲಾ। ಈಕೆ ಹಾಗೊಳ್ಳೋಳು ಮೂರ್ಲೋಕದೊಳಗಿಲ್ಲಾ।। ಇನ್ನು ನಿಮ್ಮ ಮನೆಯೊಳಗೆ ಘಳಿಗೆ ಇರುವುದು ಇಲ್ಲಾ। ನಿಮ್ಮ ಮನೆಗಳ ಬಿಟ್ಟು ನಾಂ ಪೋಪೆನೆಂದಾ।। ಏಳ್ರಾಟದ ಶನಿಯನೂ। ಊರ್ಹೊರಗೆ ಹೊರಡಿಸ್ತೀ। ಬರುವ ದಾರಿಯಲಿ। ಭಾಗ್ಯಲಕ್ಷ್ಮೀಯನು ಕಂಡೇ।। ಉಪ್ಪರಿಗೆ ಮನೆಯೊಳಗೆ। ಪಟ್ಟೆ ಮಂಚದ ಮೇಲೆ। ಮಿತ್ರೆ ಮಹಾಲಕ್ಷ್ಮೀ ಓಡಾಡುವುದ ಕಂಡೇ।। ಅಂದದರಮನೆಯೊಳಗೆ। ಹಲಗೆ ಮಂಚದ ಮೇಲೆ। ಬಂದು ವೋಲಾಡುವೋ ಲಕ್ಷ್ಮೀಯನು ಕಂಡೇ। ಸಾಲಗಳನ್ಹರಿಸೀ। ಸಾವಿರಾ ಮನೆ ಕಟ್ಟಿ। ಐಶ್ವರ್ಯಗಳ ಕೊಡುವ ಶ್ರೀ ವೆಂಕಟೇಶಾ।। ಆದಿನಾರಾಯಣಾ। ಅಲುಮೇಲು ರಂಗಪುರೀ। ಗೋವರ್ಧನೋದ್ಧಾರಿ। ಗೋಕುಲಾನಂದಾ।।

### ನವಗ್ರಹ ರಾಜನೆ ಶನಿ ಭಗವಾನನೆ — ರಾಗ: ವಸಂತ

ನವಗ್ರಹ ರಾಜನೆ ಶನಿ ಭಗವಾನನೆ। ಕಾಕವಾಹನನೆ ಅನುಗ್ರಹಿಸು ಎನ್ನ।।ಪ।। ನಿನ್ನ ಕರುಣಾ ದೃಷ್ಟಿಯ ತೋರಿ। ಎನ್ನಯ ಕರ್ಮವ ಕರಗಿಸು ದೇವನೆ.।ಅ.ಪ.।। ಮಹಾಮಹಿಮ ನಿನ್ನ ದೃಷ್ಟಿಗೆ ಸಿಲುಕದ। ಮಹಾಮಹಿಮರುಂಟೆ ಇಳೆಯೊಳಗೆ। ಸುರಾಸುರರನು ತಾ ಬಿಡದೆ ಕಾಡಿಹೆ। ನವಗ್ರಹಕ್ಕೊಡೆಯನೆ ಶನಿಭಗವಾನನೆ।।1।। ಶರಣು ಶರಣು ನಿನಗೆ ಶನಿ

ಮಹರಾಯನೆ। ಶಾರದೆ ವಂದಿತ ಶನಿ ಭಗವಾನನೆ। ಸ್ವಾರ್ಥವ ಬಿಡಿಸಿ ಸ್ವಾನುಭವ ನೀಡಿ। ಸಕಲಚರಾಚರ ಪಾಲಿಪ ಶನಿರಾಯನೆ॥2॥

## ಬಲ್ಲೆ ಬಲ್ಲೆನು ನಿನ್ನ ಬಹಳ

ಬಲ್ಲೆ ಬಲ್ಲೆನು ನಿನ್ನ ಬಹಳ ಪ್ರತಾಪವ। ಎಲ್ಲ ಲೋಕಂಗಳಲಿ। ಬಲ್ಲಿದವರ ಭಂಗ ಪಡಿಸಿದೆ। ನಿನಗೆಣೆ ಇಲ್ಲ। ಶನೀಶ್ವರನೇ॥ ಹರಿಹರ ಬ್ರಹ್ಮಾದಿಗಳ ಗೋಳಾಡಿಸಿದೆ। ಕರುಣಾ ಗಳಿನಿತಿಲ್ಲದೆ। ಹರಿಶ್ಚಂದ್ರ। ನಳಚಕ್ರವರ್ತಿ। ಷೋಡಶರಾಜರ। ವರ ಪಾಂಡವರ ಪೀಡಿಸಿ॥ ತರಿಸಿದೆ ಮನೆ ಮನೆ ವಾರ್ತೆಗಳೆಲ್ಲವ। ತಿರಿದುಂಡು ಮರುಳುಗೊಂಡು ಪರರ ಪೀಡಿಸಿ। ದೈನ್ಯಪಟ್ಟು। ಲಜ್ಜೆಗೆಟ್ಟು। ತಿರುಗುವಂದದಿ ಮಾಡಿದೆ॥ ಹಿತರಿದ್ದು ಫಲವೇನು ಸಕಲರು ನೆನೆಯುವ ಕಾರ್ಯ। ಸಿದ್ದಿಯಾಗದು ಆತಗೇ। ಲುಬ್ಧತನದಿ ಮಹಾಪಾತಿವ್ರತ್ಯದಿಂದ ಕೂಡಿದ ಸತಿ ಬದ್ಧದ್ವೇಷದಲಿರುವಳೂ॥ ಇದ್ದ ಮನುಜರ ಪಾಡು। ಶನಿಯು ಬಂದು ಹೊಂದಿದ್ದ। ಕ್ಷಣ ಮಾತ್ರದಿ। ನಿದ್ದೆ ಹಸಿವು ಕಷ್ಟ। ಬಹಳ ಬಳಲಿಕೆ ಪಟ್ಟ। ದರಿದ್ರ ಬಂದೆಡೆಗೊಂಬೋದೂ॥ ಒಳ್ಳೆದಾಗಿದ್ದ ಸಂಗಾತೀರ। ಸ್ನೇಹವ ಎಲ್ಲವ ನೀಕೆಡಿಸಿ। ಅಲ್ಲಲ್ಲಿ ಕೊಡುವ ದಣೆಗಳ ಮನವನೆ ಹೊಕ್ಕು। ಇಲ್ಲ ಹೋಗೆಂದೆನುತ॥ ಮುಟ್ಟಿದ್ದು ಹಾವಾಗಿ ಹರಿವೋದು ಸಾಲಾದ ಅಟ್ಟೋಳಿಘನವಾಯಿತು ಮುಟ್ಟಲೀಸೆ ಪೂರ್ವ ಬಲ್ಲರ। ಕರೆವೊಬಲ್ಲಾ ನೆಂಟರಿಷ್ಟಾರಾಡಿಕೊಂಬೋರು॥ ಕಟ್ಟಿದ್ದ ಪಶು ಕರೆಯದು ಆಡಿದ ಮಾತು ಕೆಟ್ಟಿತು ಸಭೆಯೊಳಗೇ। ಬಿತ್ತಿದ್ದ ಬೆಳೆರಾಶಿ ಹಿಡಿದರೆ ಹೊನ್ನು। ಬಟ್ಟಬಯಲಹುದೂ॥ ಕಲಸನ್ನ ಮೊಸರನ್ನ ತೈಲಸಾಸಿವೆಯನ್ನ ಎಳ್ಳು ಸೂಸಲನ್ನವನ್ನು ಒಲುಮೆಯಿಂದಲಿ ನಿನಗೆ ಸಮರ್ಪಿಸಿ ಬೇಡಲು ಒಡನೆ ಪ್ರಸನ್ನನಾಗುವಿ। ಶೇಷಗಿರಿಯ ಲಕ್ಷ್ಮೀಶನ ದಯದಿಂದ ಸರ್ವೇಶ್ವರ ನೀನಲ್ಲವೇ। ದೋಷ ದುರಿತವನ್ನು ದೂರದಲ್ಲಿಟ್ಟು ಸಂತೋಷದಿಂದಿರಿಸೆಮ್ಮನು॥

## ಜಯ ಗಣೇಶ ಗಿರಿಜಾ ಸುವನ (ಶನಿಚಾಲೀಸಾ)

ಜಯ ಗಣೇಶ ಗಿರಿಜಾ ಸುವನ। ಮಂಗಲ ಕರಣ ಕೃಪಾಲದೀನನ ಕೆ ದುಃಖ ದೂರ ಕರೀ, ಕೀ ಜೈ ನಾಥ ನಿಹಾಲ॥ ಜಯ ಜಯ ಶ್ರೀ ಶನಿದೇವ ಪ್ರಭು, ಸುನಹು ವಿನಯ ಮಹರಾಜ। ಕರಹು ಕೃಪಾ ಹೇ ರವಿ ತನಯ ರಾಖಹು ಜನ ಕೀ ಲಾಜ॥ ಜಯತಿ ಜಯತಿ ಶನಿದೇವ ದಯಾಲಾ। ಕರತ ಸದಾ ಭಕ್ತನ ಪ್ರತಿಪಾಲಾ॥ ಚಾರಿ ಭುಜಾ ತನು ಶ್ಯಾಮ ವಿರಾಜೈ। ಮಾಥೆ ರತನ ಮುಕುಟ ಛವಿ ಛಾಜೈ॥ ಪರಮ ವಿಶಾಲ ಮನೋಹರ ಭಾಲಾ। ಟೆಢೀ ದೃಷ್ಟಿ ಭೃಕುಟಿ ವಿಕರಾಲಾ॥ ಕುಂಡಲ ಶ್ರವಣ ಚಮಾಚಮ ಚಮಕೇ। ಹಿಯೇ ಮಾಲ ಮುಕ್ತನ ಮಣಿ ದಮಕೇ॥ ಕರ ಮೇಂ ಗದಾ ತ್ರಿಶೂಲ ಕುಠಾರಾ। ಪಲ ಬಿಚ ಕರೈಂ ಅರಿಹಿಂ ಸಂಹಾರಾ॥ ಪಿಂಗಲ ಕೃಷ್ಣೆ ಛಾಯಾನಂದನ। ಯಮ ಕೋಣಸ್ಥ ರೌದ್ರ ದುಃಖ ಭಂಜನ॥ ಸೌರೀ ಮಂದ ಶನೀ ದಶಾ ನಾಮಾ। ಭಾನುಪುತ್ರ ಪೂಜಹಿಂ ಸಬಕಾಮಾ॥ ಜಾ ಪರ ಪ್ರಭು ಪ್ರಸನ್ನ ಹ್ವೈ ಚಾಹೀಂ। ರಂಕಹುಂ ರಾವ ಕರೈಂ ಕ್ಷಣ ಮಾಹೀಂ॥ ಪರ್ವತಹೂ ತೃಣಹೋಯಿ ನಿಹಾರತ। ತೃಣಹೂ ಕೋ ಪರ್ವತ ಕರಿ ಡಾರತ॥ ರಾಜ ಮಿಲತ ಬನ ರಾಮಹಿಂ ದೀನ್ಹೋ। ಕೈಕೆಯೀ ಕೀ ಮತಿ ಹರಿ ಲೀನ್ಹೋ॥ ಬನಹೂಂ ಮೇಂ ಮೃತ ಕಪಟ ದಿಖಾಯೀಂ। ಮಾತು ಜಾನಕೀ ಗಯೀ ಚುರಾಯೀಂ॥ ಲಖನಹಿಂ ಶಕ್ತಿ ವಿಕಲ ಕರಿ ಡಾರಾ। ಮಚಿ ಗಾ ದಲ ಮೇಂ ಹಾಹಾಕಾರಾ॥ ರಾವಣ ಕೀ ಗತಿ ಮತಿ ಚೌರಾಯೀಂ। ರಾಮಚಂದ್ರ ಸೋಂ ಬೈರ ಬಢಾಯೀಂ। ದಿಯೋ ಕೀಟ ಕರಿ ಕಂಚನ ಲಂಕಾ। ಬಜಿ ಬಜರಂಗ ಬೀರ ಕೀ ಡಂಕಾ॥ ನೃಪ ವಿಕ್ರಮ ಪರ ತುಹಿ ಪಗು ಧಾರಾ। ಚಿತ್ರ ಮಯೂರ ನಿಗಲಿ ಗೈ ಹಾರಾ॥ ಹಾರ ನೌಲಖಾ ಲಗಾಯೋ ಚೋರೀ। ಹಾಥ ಪೈರ ಡರವಾಯೋ ತೋರೀ॥ ಭಾರೀ ದಶಾ ನಿಕೃಷ್ಟ ದಿಖಾಯೋ। ತೆಲಿಹಿಂ ಘರ ಕೊಲ್ಹೂ ಚಲವಾಯೋ॥ ವಿನಯ ರಾಗ ದೀಪಕ ಮಹಂ ಕೀನ್ಹೋ। ತಬ ಪ್ರಸನ್ನ ಪ್ರಭು ಹ್ವೈ ಸುಖ ದೀನ್ಹೋ॥ ಹರಿಶ್ಚಂದ್ರ ನೃಪ ನಾರಿ ಬಿಖಾನೀ। ಆಪಹುಂ ಭರೇ ಡೋಮ ಘರ ಪಾನೀ॥ ತೈಸೇ ನತ ಪರ ದಶಾ ಸಿರಾನೀ। ಭೂಜೀ ಮೀನ ಕೂದ ಗಯೀ ಪಾನಿ॥ ಶ್ರೀ ಸಂಕರಹಿಂ ಗಾಹ್ಯೋಜಬ ಜಾಯೀ ಪಾರ್ವತೀ ಕೋ ಸತಿ ಕರಾಯೀ। ತನಿಕ ವಿಲೋಕತ ಹೀ ಕರಿ ರೀಸಾ। ನಭ ಉಡಿ ಗಯೋ ಗೌರಿಸುತ ಸೀಸಾ॥ ಪಾಂಡವ ಪರ ಭೈ ದಶಾ ತುಮ್ಹಾರೀ। ಬಚೀ ದ್ರೌಪದೀ ಹೋತಿ ಉಘಾರೀ॥ ಕೌರವ ಕೇ ಭೀ

ಗತಿ ಮತಿ ಮಾರ್‍ಯೋ। ಯುದ್ಧ ಮಹಾಭಾರತ ಕರಿ ಡಾರ್‍ಯೋ॥ ರವಿ ಕಹಂ ಮುಖ ಮಹಂ ಧರಿ ತತ್ಕಾಲಾ। ಲೇಕರ ಕೂದಿ ಪರ್‍ಯೋ ಪಾತಾಲಾ॥ ಶೇಷ ದೇವ ಲಖಿ ವಿನತೀ ಲಾಯೀ ರವಿ ಕೋ ಮುಖ ತೇ ದಿಯೋ ಛುಡಾಯಿ॥ ವಾಹನ ಪ್ರಭುಕೇ ಸಾತ ಸುಜಾನಾ। ಹಯ ದಿಗ್ಗಜ ಗದ್ರಭ ಮೃಗ ಸ್ವಾನಾ॥ ಜಂಬುಕ ಸಿಂಹ ಆದಿ ನಗ ಧಾರೀ॥ ಸೋ ಫಲ ಜ್ಯೋತಿಷ ಕಹತ ಪುಕಾರೀ॥ ಗಜ ವಾಹನ ಲಕ್ಷ್ಮೀ ಗೃಹ ಆವೈಂ। ಹಯ ತೇ ಸುಖ ಸಮಾಪ್ತಿ ಉಪಜಾವೈಂ॥ ಗದ್ರಭ ಹಾನಿ ಕರೈಂ ಬಹು ಕಾಜಾ। ಸಿಂಹ ಸಿದ್ಧ ಕರ ರಾಜ ಸಮಾಜಾ॥ ಜಂಬುಕ ಬುದ್ಧಿ ನಷ್ಟ ಕರ ಡಾರೈ। ಮೃಗದೇ ಕಷ್ಟಪ್ರಾಣ ಸಂಹಾರೈ॥ ಜಬ ಆವಹಿಂ ಪ್ರಭು ಸ್ವಾನ ಸವಾರೀ। ಚೋರೀ ಆಧಿ ಹೊಯ ಡರ ಭಾರೀ ತೈ ಸಹಿ ಚಾರಿ ಚರಣ ಯಹ ನಾಮಾ। ಸ್ವರ್ಣ ಲೌಹ ಚಾಂದೀ ಅರು ತಾಮಾ। ಲೌಹ ಚರಣ ಪರ ಜಬ ಪ್ರಭು ಆವೈಂ। ಧನ ಜನ ಸಂಪತ್ತಿ ನಷ್ಟ ಕರಾವೈಂ॥ ಸಮತಾ ತಾಮ್ರರಜತ ಶುಭಕಾರೀ। ಸ್ವರ್ಣ ಸರ್ವ ಸುಖ ಮಂಗಲ ಭಾರೀ॥ ಜೊ ಯಹ ಶನಿಚರಿತ ನಿತ ಗಾವೈ। ಕಬಹುಂ ನ ದಶಾ ನಿಕೃಷ್ಟ ಸತಾವೈ॥ ಅದ್ಭುತ ನಾಥ ದಿಖಾವೈಂ ಲೀಲಾ। ಕರೈಂ ಶತ್ರು ಕೇ ನಶಿ ಬಲಿ ಢೀಲಾ। ಜೋ ಪಂಡಿತ ಸುಯೋಗ್ಯ ಬುಲವಾಯೀ। ವಿಧಿವತ ಶನಿ ಗ್ರಹ ಶಾಂತಿ ಕರಾಯೀ॥ ಪೀಪಲ ಜಲ ಶನಿ ದಿವಸ ಚಢಾವತ। ದೀಪ ದಾನ ದೈ ಬಹು ಸುಖ ಪಾವತ॥ ಕಹತ ರಾಮಸುಂದರ ಪ್ರಭು ದಾಸಾ। ಶನಿ ಸುಮಿರತ ಸುಖ ಹೋತ ಪ್ರಕಾಸಾ॥

ದೋಹಾ : ಪಾಠ ಶನಿಶ್ಚರ ದೇವ ಕೋ। ಕಿಯೋ ಭಕ್ತ ತೈಯಾರ। ಕರತ ಪಾಠ ಚಾಲೀಸ ದಿನ। ಹೋ ಭವಸಾಗರ ಪಾರ॥

## ಶ್ರೀಮನ್ಮಹಾಮಾರ್ತಾಂಡ ಪುತ್ರ (ಶನಿಸ್ತೋತ್ರ-ರಗಳೆಧಾಟಿ)

ಶ್ರೀಮನ್ಮಹಾಮಾರ್ತಾಂಡ ಪುತ್ರ ಮುನೀಂದ್ರಾದಿ ಸ್ತೋತ್ರ। ವರಾನಂದ ಗಾತ್ರ ಪವಿತ್ರ ಚರಿತ್ರ ಸುರಿತ್ರ। ಕಾಶ್ಯಪಾವಶ್ಯ ಗೋತ್ರಾ ।।ಪ।। ನಭೋ ಮಾರ್ಗಸಂಚಾರಿ ನೀನಾಗೆ ನಾನಾ ಸ್ಥಾನಕೆ ಬರಲು। ಇದ್ದ ಗೂಡಿಲ್ಲದೆ ಗಮನವಂ ಮಾಡಿ ಏಳ್ರಾಟದೊಳು। ಕ್ಷಂದರೂ ಭದ್ರರೂ ಭದ್ರವಾಗಿದ್ದು, ವೃತ್ತಿ ಕ್ಷೇತ್ರಗಳಂ ಪೋಗಿ। ನಿಜಾನಂದಲಯವಂ ಬಿಟ್ಟು ಗ್ರಾಮಾದಿಗ್ರಾಮಗಳ ತಿರುಗುತ। ಗ್ರಾಸವಾಸಕ್ಕಿಲ್ಲದೆ, ಸಾಲವಂ ತೆಗೆದು ಕೊಡುವುದಕ್ಕಿಲ್ಲದೆ। ಕಡು ನಿಷ್ಠೂರವಂ ಪಟ್ಟು ನಿಜಾಶ್ರಯವಂ ಮಾಡಿ। ನಿಂದತ್ವವಂ ಪೊಂದಿ ಬಂಧುತ್ವದೊಳ್ ಭಜನೆಯಂಗೆಟ್ಟು। ನಾನಾರೋಗ ರುಜಿನವಂ ಪೊಟ್ಟು, ಓ ಎಂದಳಲಿಸಿದೆ ।।ಕೃಷ್ಣಾ।।1।। ಎಲಾ! ಇದೆ ನಿನ್ನದೆಲ್ಲ ಸ್ವಭಾವತ್ವವೆಲ್ಲ। ಬೆನ್ನಂಟಿ ನೀ ಬಿಡದೇ ಬಚ್ಚಿಟ್ಟ ದ್ರವ್ಯವನು। ಕಣ್ಣಲ್ಲಿ ಕಾಮಿಸದೆ ಕಳವಳಿಸಿ ಮನೆಯಲ್ಲಿ। ಅಣ್ಣಗೂ ತಮ್ಮಗೂ ಅತಿ ವೈರವಂ ಬೆಳಸಿ। ಪುತ್ರ ಮಿತ್ರಾದಿಗಳು ಶತ್ರುತ್ವವಂ ಪೊಂದಿ। ವ್ಯರ್ಥಜೀವೀ ಎನಿಸಿ ಊರೆಲ್ಲ ವಾಕರಿಸಿ। ರಾಜಭಯ ಚೋರಭಯ ರಾಷ್ಟ್ರಭಯ ಮುಂತಾಗಿ। ವಾದಿಯೇ ತಪ್ಪಿ ಕಾಂತಯೇ ಘನವಾಗಿ। ಕಟ್ಟಾಳು ಘನಮಾತು ಕಟ್ಟದು ಸಭೆಯಲ್ಲಿ । ಅಟ್ಟುಂಬುವ ಪಾತ್ರೆಗವಕಾಶವಂ ತಪ್ಪಿ। ಹಿಟ್ಟಿಗುಪ್ಪಿಲ್ಲದೆ ಆವರಿಕೆ ಘನವಾಗಿ। ಪರರ ಮನೆಯನು ಸೇರಿ ಪರದಾಟ ಪಟ್ಟಲ್ಲಿ। ಮಡದಿ ಸುತರೊಂದು ಕಡೆ ತಾನೊಂದು ಕಡೆಯಲ್ಲಿ। ಮಿಡುಕುತಿರೆ ಶೋಕದಿಂ ಕಡು ಮೋಹ ಅಪನಿಂದ್ಯ। ಪರವಾಟಿಯನೆ ಮಾಡಿ ಬಿಡದೆ ಕಾಡಿ ಕೃಷ್ಣಾ।।2।। ಇನ್ನಾದರೂ ನಿನ್ನ ಜರ್ಝುರ್ಯ್ಯಭೂತ ಭಯಂಕರ। ಕ್ರೂರ ದೃಷ್ಟಿಯನೆ ಬಿಟ್ಟು ಅನ್ಯೋನ್ಯವಾಗಿ ಸೌಮ್ಯದೃಷ್ಟಿಯನೆ ತೋರಿ। ಅಟ್ಟದೊಳೂ ಮೂಡೆ ಕಟ್ಟಿದ ಗೋವಿಂಡು। ನಟ್ಟ ನಡುವಿನ ಧಾನ್ಯ ನಿಜ ಭೋಗವಂ ಬಯಸಿ। ಬಟ್ಟ ಬಡಿಸೋವರಿಗೆ ಹನ್ನೊಂದನೇ ರಾಶಿ। ಒಳಗಿದ್ದ ಫಲಗಳ ಚೆನ್ನಾಗಿ ಅನುಭವಿಸಿ ಹೊನ್ನ ತಾವರೆಗೆರೆಯ ರಂಗನಾಥನ ನೀನಂಬು ಮನವೆ ಕೃಷ್ಣಾ।।3।।

## ಜಯ ಜಯ ಶ್ರೀ ಶನಿದೇವ (ಆರತಿ-ಹಿಂದಿ)

ಜಯ ಜಯ ಶ್ರೀ ಶನಿದೇವ ಭಕ್ತನ ಹಿತಕಾರೀ। ಸೂರಜ ಕೇ ಪುತ್ರ ಪ್ರಭು ಛಾಯಾ ಮಹತಾರೀ।।1।। ಶ್ಯಾಮ ಅಂಕ ವಕ್ರ ದೃಷ್ಟ ಚತುರ್ಭುಜಾಧಾರೀ। ನೀಲಾಂಬರ ಧಾರ। ನಾಥ ಗಜ ಕೀ ಅಸವಾರೀ।।2।। ಕ್ರೀಟ ಮುಕುಟ ಶೀಶ ಸಹಜ ದಿಪತ ಹೈ ಲಿಲಾರೀ। ಮುಕ್ತನ ಕೀ ಮಾಲ ಗಲೇ ಶೋಭಿತ ಬಲಿಹಾರೀ।।3।। ಮೋದಕ ಮಿಷ್ಠಾನ ಪಾನ ಚಢತ ಹೈಂ ಸುಪಾರೀ। ಲೋಹಾ ತಿಲ ತೇಲ ಉಡದ ಮಹಿಷೀ ಅತಿ ಪ್ಯಾರೀ।।4।। ದೇವ ದನುಜ ಋಷಿ ಮುನಿ ಸುರತ ನರ ನಾರೀ। ವಿಶ್ವನಾಥ ಧರತ ಧ್ಯಾನ ಶರಣ ಹೈಂ ತುಮ್ಹಾರೀ।।5।।

ದೋಹಾ:- ನಿತ ನೇಮ ಕರಿ ಪ್ರಾತಃ ಹೀ। ಜೋ ಪಾಠ ಕರೇ ಚಾಲೀಸ್। ತಾಕೀ ಸಬ ಮನ ಕಾಮನಾ। ಪೂರ್ಣ ಕರಹಿಂ ಜಗದೀಶ।। ಮಗಸರ ಛಠಿ ಹೇಮಂತ ಋತು। ಸಂವತ ಚೌಂಸಠ ಜಾನ। ಅಸ್ತುತಿ ಚಾಲೀಸಾ ಶಿವಹಿಂ ಪೂರ್ಣ ಕೀನ ಕಲ್ಯಾಣ।।

### ಶನಿಮಹಾರಾಜಗೆ ಮಂಗಳಾರತಿ ರಾಗ: ಕುರಂಜಿ

ಶನಿಮಹಾರಾಜಗೆ ಮಂಗಳಾರತಿ ಎತ್ತಿರೆ ಅಂಗನೆಯರು ಮಂಗಳಾರತಿ ಎತ್ತಿರೆ। ಮಂಗಳಾರತಿ ಎತ್ತಿ ಮಹಾ ಮಹಿಳೆಯರೆಲ್ಲಾ ಭಂಗಪಡಿಸುವಂತ ಶನಿ ಮಹಾರಾಯಗೆ।।ಪ।। ಭುವನದೊಡೆಯ ವಿಕ್ರಮ ಆರ್ಯ..ರು ಹವಣಿಸಿ ನುಡಿದರಂದು। ನವಗ್ರಹರೊಳಗೆಲ್ಲ ಘನವಾದವನ್ಯಾರು ಸುವಿವೇಕದಿಂದ ಪೇಳ್ದೆ ನುಡಿದ ಜ್ಯೋತಿಷ್ಯರು।।1।। ಭಾನು ಶ್ರೇಷ್ಠನೆನಲು ಮತ್ತೊಬ್ಬನು ವೀಣಾಂಕ ಬುಧ ಶ್ರೇಷ್ಠನೆನಲು। ನಾನಾ ಬಗೆಯ ಮಂಗಳ ಬುಧ, ಗುರು, ಶುಕ್ರ, ಶ್ರೇಷ್ಠ। ಹೀನ ರಾಹು ಕೇತುಗಳೆಂದು ನುಡಿದರು।।2।। ಪಿತಗೆ ಕಷ್ಟವ ಕೊಟ್ಟಂತ ಶನಿಮಹಾರಾಯ ಪೃಥುವಿಯೊಳ್ ಅತಿ ಭ್ರಷ್ಟಡನು। ಶತ ಪಾಪಿಯೆನುತ ಭೂಪತಿ ನಕ್ಕನಾ ಮಾತ ರೃಥವನ್ನು ಋತು ಕೇಳಿ ತಾ ಬೇಗ ಬಂದನು।।3।। ಏನಯ್ಯಾ ವಿಕ್ರಮನೆ ಎನ್ನನ್ನು ಬಹುಹೀನವಾಗಿ ಜರಿದೆ ಏನಾದರೂ ಒಂದು ವಿಧದಲ್ಲಿ ನೋಯಿಸಿ ನಿನ್ನ ಮಾನಕ್ಹಾನಿಯ ತರುವೆ ಎಂದು ತಾ ಪೋದನು।।4।। ಅತ್ತ ಪೋಗಲು ಶನಿಯು ಭೂಪತಿಗಾಗ ಚಿತ್ತ ಚಂಚಲವಾಯಿತು। ವ್ಯರ್ಥವಾಯಿತು ಶನಿವಾರ ಪೂಜಿಸು ಎಂದು ಉತ್ತಮರು ನುಡಿದರು ವಿಕ್ರಮರಾಯಗೆ।।5।। ಎಷ್ಟಾದರು ಶನಿಯ ಪೂಜಿಪೊರುಂಟೆ ಅಷ್ಟದರಿದ್ರವದು। ಸೃಷ್ಟಿಗೊಡೆಯನಾದ। ಶ್ರೀಕೃಷ್ಣನ ಸ್ಮರಣೆ ಇಲ್ಲದೆ ಬೇರುಂಟೆ।।6।। ಕಾಯುವ ಮರಹಿಕೊಂಡು ಶನಿಮಹಾರಾಯ ಮಾಯಾದಶ್ವವನ್ನೆ ತಂದು। ಉಪಾಯದಿಂದಲೇ ಕೊಡುವೆ ನೋಡುವೆನೆನುತಲೆ ರಾಯನೇರಲು ತೇಜಿ ಹಾರಿತು ಗಗನಕ್ಕೆ।।7।। ಮೋಸ ಹೋದೆನೆನ್ನುತ ವಿಕ್ರಮರಾಯ ಕ್ಲೇಶ ಪಡುತ ಮನದಿ। ದೇಶ ಕೋಶವೆ ತಿರುಗಿ ತೊಳಲಿ ಬಳಲಿ ಒಬ್ಬ ವೈಶ್ಯನ ಸುತೆಯಿಂದ ಬಹು ಕಷ್ಟ ಬಂದಿತು।।8।। ಇಂದು ರತ್ನದ ಹಾರವ ಇವನು ಕದ್ದನೆಂದು ತಂದೆಗೆ ಪೇಳಲು। ವಂದಿಸಿ ಬಹುಬೇಗ ಇದ ರಾಯಗೆ ಪೇಳಿ ಬಂದು ಚಾರಕರು ಕೊಂಡೆಳೆದೊಯ್ದರು।।9।। ಖೂಳ ಇವನ ನೋಡದೆ ಹೊರಗೆ ಒಯ್ದು ಏರಿಯ ಮಧ್ಯದಲಿ ಕಾಲುಕೈಗಳು ಕಡಿದು। ಬೀಳಿಸಿ ಬನ್ನಿರೆನಲು ಹೇಳಿದಂದದಿ ಮಾಡಿ ಊರ ಸೇರಿದರು।।10।। ಅನ್ನ ಆಹಾರವಿಲ್ಲದೆ ವಿಕ್ರಮರಾಯ ಇನ್ನೇನು ಗತಿ ಎನಗೆ ಎನ್ನ ಕಾಯೋ ಶನಿಮಹರಾಯ। ಎನ್ನುತಲೆ ಮನ್ನಿಸಿ ಮನದಲ್ಲಿ ಧ್ಯಾನ ಮಾಡಿದನು।।11।। ತೇಲಿ ಸೊಸೆ ಎಂಬೋಳು ಮನೆಗೆ ಒಯ್ದು। ಪಾಲಿಸುತ್ತಿದ್ದಳಾಗ ಬಾಲೆ। ಪ್ರಭಾವತಿ ಮಾಲೆಯ ಹಾಕಲು ಕಾಲುಕೈಗಳು ಬೆಳೆದು ವಿನಯನಾತನಾದ।।12।। ತನ್ನ ಪುರವ ಸೇರಿದಾ ವಿಕ್ರಮರಾಯ ಚೆನ್ನಾಗಿ ಸುಖ ಬಾಳಿದ ಬಣ್ಣದಿಂದಲಿ ಬರೆದು ಇಷ್ಟಾರ್ಥಗಳನ್ನೆಲ್ಲಾ ಚೆನ್ನಾಗಿ ಕೊಡುವಂಥ। ಶನಿಮಹಾರಾಯಗೆ ಮಂಗಳಾರತಿ ಎತ್ತಿರೆ।। ಮಂಗಳಾರತಿ ಎತ್ತಿ ಮಹಾ ಮಹಿಳೆಯರೆಲ್ಲಾ ಚೆನ್ನಾದ ದೈವ ಶನಿಮಹಾರಾಯಗೆ।।13।।

### ಸೂರ್ಯನ ಮಗನಾಗಿ (ಮಂಗಳ) ರಾಗ: ಸುರುಟಿ

ಸೂರ್ಯನ ಮಗನಾಗಿ ಜನಿಸಿ ಧರೆಯೊಳು ಶ್ಯಾಮಲ ವರ್ಣವ ತಾಳಿದಗೇ। ಧೈರ್ಯವಂತನಾಗಿ ಜಗವಲ್ಲಾಡಿಸಿದ ಜಗವೀರನಾದ ಶನಿದೇವರಿಗೆ ಮಂಗಳಂ।।1।। ಕಲಿಯುಗದೊಳು ವಿಕ್ರಮಾರ್ಕನ ಸಭೆಯೊಳು ನಲಿದಾಡಿ ವಿಪ್ರರು ಪೇಳುತಿರೇ। ಗ್ರಹಗಳ ಸಾಮರ್ಥ್ಯ ಹೇಳುವ ಸಮಯದಿ ಕೊನೆಯಲಿ ವರ್ಣನೆ ಬಂದ ಶನಿದೇವರಿಗೆ ಮಂಗಳಂ।।2।। ಹುಟ್ಟಿದಾಗಲೆ ಶನಿದೇವನು ತಂದೆಗೆ ಕಡುಕಷ್ಟ ಕೊಟ್ಟಾನೆಂದು ಹೇಳುತಿರೆ। ಭ್ರಷ್ಟನ ಸುದ್ದಿ ಬೇಡವೆನ್ನಲು ವಿಕ್ರಮಅಷ್ಟರೊಳಗೆ ಬಂದ ಶನಿದೇವರಿಗೆ ಮಂಗಳಂ।।3।। ನಿಂದಾನೆ ವಿಕ್ರಮ ಬಂದಾನು ಸಭೆಯೊಳು ನಿಂದು ಆರ್ಭಟಿಸುತ್ತ ಗುಡಿಗುಡಿಸೆ। ನಡುಗಿ ವಿಕ್ರಮ ತಾನು ಒಡನೆ ಪಾದವ ಕಟ್ಟಿ ಒಡನೆ ಚಿಮ್ಮಿದ ಶನಿದೇವರಿಗೆ ಮಂಗಳಂ।।4।। ಆಡಿದ್ದು ತಪ್ಪೆಂದು ಕ್ಷಮಿಸೆಂದು ವಿಕ್ರಮ ಬೇಡಲು ಶನಿದೇವ ನಾನು ಬಿಡಿಸುವೆ ಗರ್ವವ ವಿಕ್ರಮ ನೋಡೆಂದು ನಡೆದಾನು ಶನಿದೇವರಿಗೆ ಮಂಗಳಂ।।5।। ಇತ್ತಲು ವಿಕ್ರಮ ಮನದಲಿ ಚಿಂತಿಸಿ ಎಂತು ಗೈವನು ಶಿವನು ಎನ್ನುತಿರೇ। ಪಂಚವರ್ಣದ ಕುದುರೆ ವಂಚಿಸಿ ತಂದ ಕಾರುವಾನ್ ವೇಷದ ಶನಿದೇವರಿಗೆ ಮಂಗಳಂ।।6।। ನೋಡಿದ ವಿಕ್ರಮ ಮಾಯದ ಕುದುರೆಯ ಬೆಲೆಯನು

ಹೇಳೆಂದು ಕೇಳುತಿರೇ। ಸವಾರಿ ಮಾಡಿದ ಮೇಲೆ ಬೆಲೆಯ ಹೇಳುವೆನೆಂದು ಕುದುರೆ ಮೇಲೇರಿಸಿದಾ ಶನಿದೇವರಿಗೆ ಮಂಗಳಂ॥7॥ ಏರಿದ ಕೂಡಲೆ ಹಾರಿತು ಗಗನಕ್ಕೆ ಭೋರೆಂದು ನಡೆಯಿತು ರಾಜ್ಯಬಿಟ್ಟು। ಅಲ್ಲಿ ಘೋರಾರಣ್ಯದ ಮಧ್ಯದ ನಿಶಿಯೊಳು ಕುದುರೆ ಇಳಿಸಿದ ಶನಿದೇವರಿಗೆ ಮಂಗಳಂ॥8॥ ಮಾಯವಾಯಿತು ಕುದುರೆ ನೋಡಿದಾ ವಿಕ್ರಮ ಹಾ ಎಂದು ದುಃಖವ ಪಡುತಿರೇ। ಮರುದಿನ ಅನ್ನ ನೀರು ಇಲ್ಲದಂತೆ ಕಡುಕಷ್ಟ ಪಡಿಸಿದಾ ಶನಿದೇವರಿಗೆ ಮಂಗಳಂ॥9॥ ದಾರಿಯ ಮರೆಮಾಡಿ ಘೋರಕಾನನದೊಳು ಗುಡ್ಡಬೆಟ್ಟಗಳನ್ನು ಹತ್ತುತಿರೇ ಅಲ್ಲಿ ದಾರಿಯ ತೋರಿಸಿ ತಾಮಲಿಂದಾಪುರವ ಸೇರಿಸಿದ ಶನಿದೇವರಿಗೆ ಮಂಗಳಂ॥10॥ ಪಟ್ಟಣದೊಳು ಪೋಗೆ ಶೆಟ್ಟಿಯು ತಾ ಕಂಡು ಅಟ್ಟಹಾಸದಿ ಅಡಿಗೆ ಮಾಡಿಸಿದ ಊಟಮಾಡಿಸಿ ಹಾಸುಮಂಚದ ಮೇಲೆ ಮಲಗಿಸಿದ ಶನಿದೇವರಿಗೆ ಮಂಗಳಂ॥11॥ ಮಗಳಿಗೆ ತಕ್ಕಂಥ ವರನೆಂದು ಭಾವಿಸಿ ಮಗಳನು ಕಳುಹಲು ಮನೆಯೊಳಗೆ। ಮುತ್ತಿನ ಸರವನ್ನು ಗೂಟಕ್ಕೆ ಹಾಕಲು ಹಂಸನಾಗಿ ನುಂಗಿಹಾರಿ ಹೋದ ಶನಿದೇವರಿಗೆ ಮಂಗಳಂ॥12॥ ಶೆಟ್ಟಿಯ ಮಗಳಿಗೆ ಎಚ್ಚರವಾಗಲು ಹಾರವ ಕಾಣದೆ ಕಳ್ಳನೆಂದು। ದಂಡಿಸಿ ಎಳೆದೊಯ್ದು ರಾಜನ ಬಳಿಗಾಗ ಕೈಕಾಲು ಕಡಿಸಿದ ಶನಿದೇವರಿಗೆ ಮಂಗಳಂ॥13॥ ಕತ್ತರಿಸಿದಾ ಬಾಧೆ ರಕ್ತ ಸುರಿಯುವ ಬಾಧೆ ಅನ್ನನೀರಿಲ್ಲದ ತೃಷಿ ಬಾಧೆ। ತಡೆಯಲಾರದೆ ವಿಕ್ರಮಾದಿತ್ಯರಾಯನು ಬೇಡಿದಾ ಶನಿದೇವರಿಗೆ ಮಂಗಳಂ॥14॥ ಬೇಡಲು ವಿಕ್ರಮ ಹುಟ್ಟಿತು ಕರುಣವು ಬಿಡಬೇಕು ಇವನನ್ನು ಎಂದೆನುತೆ। ಅನ್ನನೀರಿನ ಸುಖ ಆಗಲೆ ಮಾಡಿಸಿ ಉರಿ ತಣ್ಣಗೆ ಮಾಡಿದಾ ಶನಿದೇವರಿಗೆ ಮಂಗಳಂ॥15॥ ಬಂದಳು ಉಜ್ಜಯಿನಿಪುರದಿಂದ ಮಾರ್ಗದಿ ಕಂಡಳು ರಾಜನ ತೇಲಿ ಸೊಸೆ। ತಂದೆಯ ತೆರದಲಿ ತಂದಳು ಮಂದಿರಕೆ ಅಲ್ಲಿ ಚೆಂದದಿಗಾಣವ ಹೊಡೆಸಿದ ಶನಿದೇವರಿಗೆ ಮಂಗಳಂ ॥16॥ ಗಾಣದ ಮೇಲೇರಿ ಹಾಡಲು ರಾಗವ ಹತ್ತಿತು ದೀಪಗಳೆಲ್ಲಾ ಬೆಳಕಾಗಲು। ರಾಜನ ಮಗಳು ಚೋದ್ಯಾಗೊಳ್ಳುತ ಅಲ್ಲಿಗೆ ದೊರೆಯ ಕರೆಸಿದಾಗಲೆ ಅಲ್ಲಿಗೆ ಬಂದ ಶನಿದೇವರಿಗೆ ಮಂಗಳಂ॥17॥ ಮಗಳಿಗೆ ಬಂತಿನ್ನು ಮಾಯದ ನಿದ್ರೆಯು ಪ್ರತ್ಯಕ್ಷನಾದನು ಶನಿದೇವನು। ಸತ್ಯಕ್ಕೆ ಮೆಚ್ಚಿದೆ ವಿಕ್ರಮ ಬೇಡೆಂದು ವರವ ಕೊಡುವೆನೆಂದ ಶನಿದೇವರಿಗೆ ಮಂಗಳಂ॥18॥ ನೋಡಿದ ವಿಕ್ರಮ ಎರಗಿದ ಪಾದಕ್ಕೆ ನಾಡಿನ ಜನರಿಗೆ ಪೀಡಿಸದೇ। ಇಂಥ ಕಡುಕಷ್ಟ ನರರಿಗೆ ಕೊಡುವುದಿಲ್ಲವೆಂದು ವರವ ಕೊಡು ಎಂದ ಶನಿದೇವರಿಗೆ ಮಂಗಳಂ ॥19॥ ವಿಕ್ರಮ ರಾಯನೆ ನಿನ್ನಯ ಚರಿತ್ರೆಯನು ಯಾರು ಓದಿಸಿ ಕೇಳುವರೋ ಅಂಥವರನ್ನು ಪಿಡಿಯುವುದಿಲ್ಲವೆಂದು ಕೈಕಾಲು ಕೊಟ್ಟ ಶನಿದೇವರಿಗೆ ಮಂಗಳಂ॥20॥ ಶನಿವಾರದ ದಿವಸ ಓದುವ ನರರಿಗೆ ಧನಧಾನ್ಯವ ಕೊಟ್ಟು ಪುತ್ರರ ಕೊಡುವೆನು। ಪೂಜಿಸೆ ಇನ್ನು ಘನಸುಖ-ಸಂಪತ್ತು ಕೊಡುವೆನೆಂದಾ ಶನಿದೇವರಿಗೆ ಮಂಗಳಂ॥21॥ ಶಂಕರ ವಾಸ್ಮಯ್ಯ ಹೇಳಿದ ಶನಿಮಹಿಮೆ ಆದರದಿಂದ ಕೇಳಿದರೆ ಅವರು ಬೇಡಿದ ವರವಾ ಕೊಡುವೆ ನಾನಿನ್ನು ಇದು ಸತ್ಯ ಸತ್ಯ ಎಂದ ಶನಿದೇವರಿಗೆ ಮಂಗಳಂ॥22॥



## 13. ನವಗ್ರಹ ಸ್ತುತಿ/ಸ್ತೋತ್ರಗಳು

**ಸಕಲ ಗ್ರಹಬಲ ನೀನೆ ಸರಸಿಜಾಕ್ಷ** **ರಾಗ: ಅಠಾಣ-ಝಂಪೆತಾಳ**

ಸಕಲ ಗ್ರಹಬಲ ನೀನೆ ಸರಸಿಜಾಕ್ಷ॥ಪ॥ ನಿಖಿಲ ರಕ್ಷಕ ನೀನೆ ವಿಶ್ವವ್ಯಾಪಕನೆ॥ಅ.ಪ॥ ರವಿಚಂದ್ರ ಬುಧ ನೀನೆ। ರಾಹುಕೇತುವು ನೀನೆ। ಕವಿ ಗುರು ಶನಿಯು ಮಂಗಳನು ನೀನೆ॥ ದಿವರಾತ್ರಿಯು ನೀನೆ ನವವಿಧಾನವು ನೀನೆ। ಭವರೋಗಹರ ನೀನೆ। ಭೇಷಜನು ನೀನೆ॥1॥ ಪಕ್ಷಮಾಸವು ನೀನೆ। ಪರ್ವಕಾಲವು ನೀನೆ। ನಕ್ಷತ್ರ ಯೋಗ ತಿಥಿ ಕರಣ ನೀನೆ॥ ಅಕ್ಷಯವೆಂದು ದ್ರೌಪದಿಯ ಮಾನವ ಕಾಯ್ದ। ಪಕ್ಷಿವಾಹನ ದೀನರಕ್ಷಕನು ನೀನೆ॥2॥ ಋತುವತ್ಸರವು ನೀನೆ। ಪೃಥಿವಿಗಾದಿಯು ನೀನೆ। ಕ್ರತು ಹೋಮ ಯಜ್ಞ ಸದ್ಗತಿಯು ನೀನೆ॥ ಜಿತವಾಗಿ ಎನ್ನೊಡೆಯ ಪುರಂದರ ವಿಠ್ಠಲನೆ। ಶ್ರುತಿಗೆ ಸಿಲುಕದ ಅಪ್ರತಿಮಮಹಿಮ ನೀನೆ॥3॥

**ಭಜರೇ ರೇ ಮಾನಸ ಶ್ರೀ ರಘುವೀರಂ** **ರಾಗ: ಅಭೇರಿ**

ಭಜರೇ ರೇ ಮಾನಸ ಶ್ರೀ ರಘುವೀರಂ ಭುಕ್ತಿಮುಕ್ತಿಪ್ರದಂ ವಾಸುದೇವಂ ಹರಿಂ॥ಪ॥ ವಿಜಿನವಿದೂರಂ ವಿಶ್ವಾಧಾರಂ ಸುಜನ ಮಂದಾರಂ ಸುಂದರಾಕಾರಂ॥ಅ.ಪ॥ ರಾವಣ ಮರ್ಧನಂ ರಕ್ಷಿತ ಭುವನಂ ರವಿಶಶಿ ನಯನಂ ರವಿಜಾತಿ ಮದನಂ ರವಿಜಾದಿ ವಾನರ ಪರಿವೃತಂ ನರವರಂ ರತ್ನಹಾರ ಪರಿಶೋಭಿತ ಕಂದರಂ ರವಿಶಶಿ ಕುಜಬುಧ ಗುರುಶುಕ್ರ ಶನೈಶ್ಚರ ರಾಹುಕೇತು ನೇತಾರಂ ರಾಜಕುಮಾರಂ ರಾಮಂ ಪವನಾಜಾಪ್ತ ಅವನಿಜಾ ಮನೋಹರಂ ॥ಚ॥

**ನಮಃ ಸೂರ್ಯಾಯ**

ನಮಃ ಸೂರ್ಯಾಯ ಚಂದ್ರಾಯ ಮಂಗಳಾಯ ಬುಧಾಯಚ ಗುರುಶುಕ್ರ ಶನಿಭ್ಯಶ್ಚ ರಾಹುವೇ ಕೇತುವೇ ನಮಃ॥

**ಸೂರ್ಯಃ ಶೌರ್ಯ ಮಥೇಂದುರಿಂದ್ರಪದವೀಂ**

ಸೂರ್ಯಃ ಶೌರ್ಯ ಮಥೇಂದುರಿಂದ್ರಪದವೀಂ। ಸನ್ಮಂಗಲಂ ಮಂಗಲಃ। ಸದ್ಬುದ್ಧಿಂ ಚ ಬುದೋ ಗುರುಶ್ಚ ಗುರುತಾಂ ಶುಕ್ರಃ ಶುಭಂ ಶಂ ಶನಿಃ॥ ರಾಹುರ್ಬಾಹುರ್ಬಲಂ ಕರೋತು ವಿಜಯಂ ಕೇತುಃ ಕುಲಸ್ಯೋನ್ನತಿಂ। ನಿತ್ಯಂ ಪ್ರೀತಿಕರಾ ಭವಂತು ಭವತಾಂ ಸರ್ವೇನುಕೂಲಾ ಗ್ರಹಾಃ॥

**ಭಾಸ್ವಾನ್ಮೇ ಭಾಸಯೇತ್ ತತ್ವ್ತಂ**

ಭಾಸ್ವಾನ್ಮೇ ಭಾಸಯೇತ್ ತತ್ವ್ತಂ ಚಂದ್ರಶ್ಚಾಹ್ಲಾದಕೃದ್ಭವೇತ್। ಮಂಗಳೋ ಮಂಗಲಂ ದದ್ಯಾತ್ ಬುಧಶ್ಚ ಬುಧತಾಂ ದಿಶೇತ್॥1॥ ಗುರುರ್ಮೇ ಗುರುತಾಂ ದದ್ಯತ್ ಕನಿಶ್ಚ ಕವಿತಾಂ ದಿಶೇತ್ ಶನಿಶ್ಚ ಶಂ ಪ್ರಾಪಯತು ಕೇತುಃ ಕೇತುಂ ಜಯೇರ್ಪಯೇತ್॥2॥ ರಾಹುರ್ಮೇ ರಹಯೇದ್ರೋಗಂ ಗ್ರಹಾಃ ಸಂತು ಕರಗ್ರಹಾಃ। ನವಂ ನವಮಂ ಮಮೈಶ್ವರ್ಯಂ ದಿಶಂತ್ವೇತೇ ನವಗ್ರಹಾಃ॥3॥ ಶನೇ ದಿನಮಣೇಃ ಸೂನೋ ಹ್ಯನೇಕಗುಣಸನ್ಮಣೆ। ಅರಿಷ್ಟಂ ಹರ ಮೇ ಭಿಷ್ಟಂ ಕುರು ಮಾಕುರು ಸಂಕಟಮ್॥4॥ ಹರೇ ರನುಗ್ರಹಾರ್ಥಾಯ ಶತೃಣಾಂ ನಿಗ್ರಹಾಯ ಚ। ವಾದಿರಾಜಯತಿ ಪ್ರೋಕ್ತಂ ಗ್ರಹಸ್ತೋತ್ತ್ರಂ ಸದಾ ಪಠೇತ್॥5॥ ಶ್ರೀ ವಾದಿರಾಜತಿ ವಿರಚಿತ ನವಗ್ರಹ ಸ್ತೋತ್ರ॥

**ಜಪಾಕುಸುಮಸಂಕಾಶಂ**

ಜಪಾಕುಸುಮಸಂಕಾಶಂ ಕಾಶ್ಯಪೇಯಂ ಮಹಾದ್ಯುತಿಂ। ತಮೋರಿಂ ಸರ್ವಪಾಪಘ್ನಂ ಪ್ರಣತೋಸ್ಮಿ ದಿವಾಕರಂ॥1॥ ದಧಿಶಂಕ ತುಷಾರಾಭಂ ಕ್ಷೀರೋದಾರ್ಣವಸಂಭವಂ। ನಮಾಮಿ ಶಶಿನಂಸೋಮಂ ಶಂಭೋರ್ಮುಕುಟಭೂಷಣಂ॥2॥ ಧರಣೀಗರ್ಭಸಂಭೂತಂ ವಿದ್ಯುತ್ಕಾಂತಿ ಸಮಪ್ರಭಂ। ಕುಮಾರಂ ಶಕ್ತಿಹಸ್ತಂ ತಂ ಮಂಗಳಂ ಪ್ರಣಮಾಮ್ಯಹಂ॥3॥ ಪ್ರಿಯಂಗು ಕಲಿಕಾಶ್ಯಾಮಂ ರೂಪೇಣಾಪ್ರತಿಮಂ ಬುಧಂ। ಸೌಮ್ಯಂ ಸೌಮ್ಯಗುಣೋಪೇತಂ ತಂ ಬುಧಂ ಪ್ರಣಮಾಮ್ಯಹಂ॥4॥ ದೇವಾನಾಂಚ ಋಷಿಣಾಂಚ ಗುರುಂ ಕಾಂಚನಸನ್ನಿಭಂ। ಬುದ್ಧಿ ಭೂತಂ ತ್ರಿಲೋಕೇಶಂ ತಂ ನಮಾಮಿ ಬೃಹಸ್ಪತಿಂ॥5॥ ಹಿಮಕುಂದಮೃಣಾಲಾಭಂ ದೈತ್ಯಾನಾಂ ಪರಮಂ ಗುರುಂ। ಸರ್ವಶಾಸ್ತ್ರ ಪ್ರವಕ್ತಾರಂ ಭಾರ್ಗವಂ ಪ್ರಣಮಾಮ್ಯಹಂ॥6॥ ನೀಲಾಂಜನಸಮಾಭಾಸಂ ರವಿಪುತ್ರಂ ಯಮಾಗ್ರಜಂ। ಛಾಯಾಮಾರ್ತಾಂಡ ಸಂಭೂತಂ ತಂ ನಮಾಮಿ ಶನೈಶ್ಚರಂ॥7॥ ಅರ್ಧಕಾಯಂ ಮಹಾವೀರ್ಯಂ ಚಂದ್ರಾದಿತ್ಯವಿಮರ್ದನಂ। ಸಿಂಹಿಕಾಗರ್ಭ ಸಂಭೂತಂ ತಂ ರಾಹುಂ ಪ್ರಣಮಾಮ್ಯಹಂ॥8॥ ಪಲಾಶಪುಷ್ಪ ಸಂಕಾಶಂ ತಾರಕಾಗ್ರಹ ಮಸ್ತಕಂ। ರೌದ್ರಂ ರೌದ್ರಾತ್ಮಕಂ ಘೋರಂ ತಂ ಕೇತುಂ ಪ್ರಣಮಾಮ್ಯಹಂ ॥9॥ ಇತಿ ವ್ಯಾಸ ಮುಖೋದ್ಗೀತಂ ಯಃ ಪಠೇತ್ ಸುಸಮಾಹಿತಃ। ದಿವಾ ವಾ ಯದಿವಾ ರಾತ್ರೌ ವಿಘ್ನ ಶಾಂತಿ ರ್ಭವಿಷ್ಯತಿ॥10॥ ನರನಾರೀ ನೃಪಾಣಾಂ ಚ ಭವೇದ್ದುಸ್ವಪ್ನನಾಶನಂ। ಐಶ್ವರ್ಯಮತುಲಂ ತೇಷಾಮಾರೋಗ್ಯಂ ಪುಷ್ಟಿವರ್ಧನಂ॥11॥ ಗ್ರಹನಕ್ಷತ್ರಜಾಃ ಪೀಡಾ ಸ್ತಸ್ಕರಾಗ್ನಿ ಸಮುದ್ಭವಾಃ। ತಾಃ ಸರ್ವಾಃ ಪ್ರಶಮಂ ಯಾಂತಿ ವ್ಯಾಸೋ ಬ್ರೂತೇನ ಸಂಶಯಃ ॥12॥

### ಲೋಕ ಜೀವರ ಕರ್ಮಸಾಕ್ಷಿಯ (ರವಿ) (ಮೇಲಿನ ಸ್ತೋತ್ರದ ಛಾಯಾಪದ್ಯ)

ಲೋಕ ಜೀವರ ಕರ್ಮಸಾಕ್ಷಿಯ ನೇಕ ವಿದ್ಯಾವೇದ್ಯ ಸಸ್ಯಾ ನಿಕಚೇತನ ಛಾಯೆಯಾಣ್ಮನೆ ಕಶ್ಯಪಾತ್ಮಜನೆ ಲೋಕನೇತ್ರನೆ ಕಮಲ ಮಿತ್ರನೆ ಲೋಕ ಪೂಜ್ಯ ತಮೋಘ್ನ ಲೋಕಾ ಲೋಕ ವಿಭ್ರಾಜಿತನೆ ಭಾನುವೆ ನಿನಗಿದೋ ನಮನ॥

### ವ್ಯೋಮಕೇಶ ಶಿರೋವಿಭೂಷಣ (ಶಶಿ)

ವ್ಯೋಮಕೇಶ ಶಿರೋವಿಭೂಷಣ ಯಾಮಿನೀ ಪತಿ ಔಷಧೀಶ್ವರ ಭಾಮೆ ರೋಹಿಣಿಯರಸ ತಾರಾನಿಕರ ಸಂವೃತನೆ ತಾಮರಸದಳನಯನ ನಯನನೆ ಗೋಮಿನೀ ಸಹಜಾತ ಹಿಮರುಚಿ ಕೋಮಲಾಂಗ ಶಶಾಂಕ ಸೋಮನೆ ನಿನಗಿದೋ ನಮನ॥

### ಭೂರಮಾಸುತ ಮಂಗಳಾಧಿಪ (ಕುಜ) ರಾಗ: ನಾಟ-ಝಂಪೆತಾಳ

ಭೂರಮಾಸುತ ಮಂಗಳಾಧಿಪ ಚಾರು ಶುಭಕರ ಕಂಬುಕಂಧರ ಧಾರಿಣೀ ದಾತಾರ ಮುದ್ಗರ ಶಶಿಶೂಲಧರ ಧೀರ ಶೋಣಾಂಬರನೆ ರಕ್ತ ಶರೀರ ದೀನಾನಾಥ ಸುಜನೋದ್ಧಾರ ಶೋಣಿತನಯನ ಭೌಮನೆ ನಿನಗಿದೋ ನಮನ॥

### ಇಂದುವರಸುತ ರಸಿಕ ವಿಬುಧಾ (ಬುಧ)

ಇಂದುವರಸುತ ರಸಿಕ ವಿಬುಧಾ ನಂದವರ್ಧಕ ಸರಸಕವಿತಾ ವೃಂದರಚನಾಚೋದ್ಯ ಭೂಸುರವಂದ್ಯ ಸುರಸೇವ್ಯ ಸಿಂಧುರಾನ್ವಿತ ಸಿಂಹವಾಹನ ಬಂಧನಾಘವಿಮುಕ್ತ ವಿಮಲಾ ನಂದ ಸರ್ವಾಭರಣ ಸೌಮ್ಯನೆ ನಿನಗಿದೋ ನಮನ॥

### ಅಜಕುಲಾತ್ಮ ದಿವಿಜತೇಜನೆ (ಗುರು)

ಅಜಕುಲಾತ್ಮಜ ದಿವಿಜತೇಜನೆ ಯಜನ ರಕ್ಷಕ ನೀತಿಬೋಧಕ ನಿಜಕರದೆ ಜಪಮಾಲೆ ದಂಡ ಕಮಂಡಲಾನ್ವಿತನ ತ್ರಿಜಗದರ್ಚಿತ ಶಾಸ್ತ್ರಪಂಡಿತ ಗಜವಿರಾಜಿತ ವಾಕ್ಪತಿಯೆ ನಿಂ ನಿನಗಿದೋ ನಮನ॥

### ದಾನವಾನ್ವಯ ಗುರುವೆ (ಶುಕ್ರ)

ದಾನವಾನ್ವಯ ಗುರುವೆ ಭಾರ್ಗವ ಭಾನು ಗುರು ಪರಿಪಂಥಿ ಶಾಸ್ತ್ರ ಜ್ಞಾನಪರಿಣತ ನೀತಿಚತುರ ಸಿತಾಂಗನೇಕಾಕ್ಷ ದಾನವಾರಿಯ ಕರುಣಪಾತ್ರನೆ ದೀನ ಪೋಷಕ ಸಕಲ ಸನ್ನುತ ದನಿ ಕರುಣಾಂಭೋದಿ ಶುಕ್ರನೆ ನಿನಗಿದೋ ನಮನ॥

### ದಿನಪ ಛಾಯಾಸುತ ಯಮಾಗ್ರಜ (ಶನಿ)

ದಿನಪ ಛಾಯಾಸುತ ಯಮಾಗ್ರಜ ವಿನುತ ನೀಲಾಂಬರ ಸಮಾನ್ವಿತ ಘನಮಹಿಮ ನೀಲಾಂಗ ರತ್ನಾಭರಣ ಭೂಷಿತನೆ ಅನವರತ ತಿಲ ತೈಲ ದೀಪೋ ದನ ಸಮನ್ವಿತ ಕಾಕವಾಹನ ಮನವನರಳಿಪ ಚತುರಸಾರಿಯೆ ನಿನಗಿದೋ ನಮನ॥

### ರಾಹುವೇ ನೀಂ ಸೂರ್ಯಸೋಮ(ರಾಹು)

ರಾಹುವೇ ನೀಂ ಸೂರ್ಯ ಸೋಮ ಗ್ರಾಹ ಚಿಂತಕ ರುಜಿನ ನಾಶಕ ರೂಹುಗೆಟ್ಟಿಹ ಕರದೊಳುರೆ ಕರವಾಲ ಧರಿಸಿರುವ ಬಾಹು ವಿಕ್ರಮ ಸರ್ಪಭೀತರ ಕಾಹಿ ಸುಖಕರ ಮಂದ ಶಕ್ರರ ನೇಹಿ ನಮಿಪೆನು ಸ್ವೆಂಹಿಕೇಯನೆ ದೀನ ಪಾಲಕನೇ॥

### ವಿಕಟ ಮಾಯಾ ರೌದ್ರ ಭೀಷಣ (ಕೇತು)

ವಿಕಟ ಮಾಯಾ ರೌದ್ರ ಭೀಷಣ ಸಕಲ ದಾನವ ಮಣಿ ನವಗ್ರಹ। ಸಖನೆ ಛಾಯಾಗ್ರಹನೆ ಕಿಂಕುಶ ಕುಸುಮಸಂಕಾಶ ಪ್ರಕಟವೆಚ್ಚರಿ ಮಕುಟ ಭೂಷಿತ ವಿಕಚ ಶಿರೆನಪಸವ್ಯ ಗಾಮಿಯೆ ಸುಕರ ಮಂಗಳವಸನ ಕೇತುವೆ ನಿನಗಿದೋ ನಮನ।।

### ಭಾನು ಶಶಿ ಕುಜ (ಫಲಶ್ರುತಿ)

ಭಾನು ಶಶಿ ಕುಜ ಸೌಮ್ಯ ಗುರು ಕವಿ ಭಾನು ಪುತ್ರನ ರಾಹುಕೇತುವ ನಾನು ಪೂರ್ವಿಯೊಳೇಕ ಭಾವದಿ ನೆನೆದು ಸಂಸ್ತುತಿಸೆ ಸಾನುಕೂಲ್ಯವು ಸಕಲವಾಂಛಿತ ದಾನ ದೊರೆವುದು ದೇವ ಗಂಗಾ ಸ್ನಾನ ಫಲವನು ಪಡೆದು ನಲಿವರು ಬುವಿಯ ಜೀವಿಗಳು।।

### ಭಾನು ಪ್ರಕಾಶ ನಮೋ

ಭಾನು ಪ್ರಕಾಶ ನಮೋ ನಮೋ ರಘುಕುಲ ವಂದ್ಯನೆ ನಮೋ ನಮೋ। ಆಂಜನೇಯ ಗುರು ನಮೋ ನಮೋ। ಆದಿತ್ಯ ದೇವನೆ ನಮೋ ನಮೋ। ತಾರಾಧೀಶನೆ ನಮೋ ನಮೋ। ಸಾಧು ಪೂಜಿತನೆ ನಮೋ ನಮೋ। ಸರ್ವರ ವಂದ್ಯನೆ ನಮೋ ನಮೋ। ಚಂದ್ರ ದೇವನೆ ನಮೋ ನಮೋ।।1।। ಮಂಗಳ ಕಾರಕ ನಮೋ ನಮೋ। ಶರಣ ರಕ್ಷಕ ನಮೋ ನಮೋ। ಪಾಪ ವರ್ಜಿತ ನಮೋ ನಮೋ। ಅಂಗಾರಕವರ ನಮೋ ನಮೋ।।2।। ಸೋಮ ವಂಶಜನೆ ನಮೋ ನಮೋ। ಬುಧಾರ್ಚಿತ ಶ್ರೇಷ್ಠನೆ ನಮೋ ನಮೋ ಸೌಮ್ಯ ರೂಪನೆ ನಮೋ ನಮೋ। ಶ್ರೀ ಬುದ ದೇವನೆ ನಮೋ ನಮೋ।।3।। ಭಾರ್ಗವ ಶಿಷ್ಯನೆ ನಮೋ ನಮೋ। ಶ್ರೀ ಬ್ರಹ್ಮ ಪುತ್ರನೆ ಸುರಾಸುರ ವಂದ್ಯನೆ ನಮೋ ನಮೋ। ಬೃಹಸ್ಪತಿ ದೇವನೆ ನಮೋ ನಮೋ ರಾಕ್ಷಸ ಗುರುವೇ ನಮೋ ನಮೋ।।4।। ಕಾವ್ಯಾಸಕ್ತನೆ ನಮೋ ನಮೋ। ದೇವಾಭಿ ವಂದಿತನೆ ನಮೋ ನಮೋ।। ಶ್ರೀಶುಕ್ರ ದೇವನೆ ನಮೋ ನಮೋ। ಛಾಯಾ ಪುತ್ರನೆ ನಮೋ ನಮೋ। ಚಾತುರ್ವರ್ಗ ವಂದ್ಯನೆ ನಮೋ ನಮೋ।।5।। ಕಷ್ಟಾಘನಾಶನೆ ನಮೋ ನಮೋ। ಶನಿಮಹಾರಾಜನೆ ನಮೋನಮೋ। ಅಷ್ಟಮ ಗ್ರಹ ಶ್ರೇಷ್ಠನೆ ನಮೋ ನಮೋ। ಭಯಂಕರ ದೇವನೆ ನಮೋ ನಮೋ।।6।। ಗೋವಿಂದ ವರ ಪಾತ್ರನೆ ನಮೋ ನಮೋ। ರಾಹುದೇವನೆ ನಮೋ ನಮೋ। ಚಿತ್ರವರ್ಣನೆ ನಮೋ ನಮೋ। ಶಿರೋ ಮಾತ್ರವೆ ನಮೋ ನಮೋ।।7।। ಜೈಮಿನಿ ಗೋತ್ರಜನೆ ನಮೋ ನಮೋ। ಕೇತು ದೇವನೆ ನಮೋ ನಮೋ। ನವಗ್ರಹ ರೂಪ ಹರಿ ನಮೋ ನಮೋ। ನವಗ್ರಹ ರೂಪ ಹರ ನಮೋ ನಮೋ। ಬಾಲ ಹನುಮ ಪ್ರಭು ನಮೋ ನಮೋ। ದಶಾವತಾರ ರೂಪ ನಮೋ ನಮೋ।।

### ಆದಿತ್ಯಾಶ್ಚಂದ್ರ ಮಾಭೌಮೋವಿಧ

ಆದಿತ್ಯಾಶ್ಚಂದ್ರ ಮಾಭೌಮೋವಿಧ ಪುತ್ರೋ ಬೃಹಸ್ಪತಿಃ। ಶುಕ್ರಂ ಶನೈಶ್ಚರೋ ರಾಹುಃ ಕೇತುಃ ಸೂರ್ಯಸ್ಯಪೀಡಕಃ।। ಏತೇ ನವಗ್ರಹಾನಿತ್ಯಂ ಮಾಂ ರಕ್ಷಂತು ಭಯಾಪಹಾಃ। ಪರಮೇಶ್ವರಸ್ಯ ವದೂತಾ ನಾನಾ ಕರ್ಮಪ್ರಚೋದಕಾಃ।।

### ಗ್ರಹಾಣಮಾದಿರಾದಿತ್ಯ (ನವಗ್ರಹ ಪೀಡಾಹರ ಸ್ತೋತ್ರ)

ಗ್ರಹಾಣಮಾದಿರಾದಿತ್ಯ ಲೋಕರಕ್ಷಣಕಾರಕಃ। ವಿಷಮಸ್ಥಾನ ಸಂಭೂತಾಂ ಪೀಡಾಂ ಹರತು ಮೇರವಿಃ।।1।। ರೋಹಿಣೀಶಃ ಸುಧಾಮೂರ್ತಿಃ ಸುಧಾಗಾತ್ರಃ ಸುಧಾಶನಃ। ವಿಷಮಸ್ಥಾನ ಸಂಭೂತಾಂ ಪೀಡಾಂ ಹರತು ಮೇ ವಿದುಃ।।2।। ಭೂಮಿಪುತ್ರೋ ಮಹಾತೇಜಾ ಜಗತಾಂ ಭಯಕೃತ್ ಸದಾ। ವೃಷ್ಟಿಕೃದ್ ವೃಷ್ಟಿ ಹರ್ತಾ ಚ ಪೀಡಾಂ ಹರತು ಮೇ ಕುಜಃ।।3।। ಉತ್ಪಾತೋ ರೂಪೋ ಜಗತಾಂ ಚಂದ್ರಪುತ್ರೋ ಮಹಾದ್ಯುತಿ। ಸೂರ್ಯಪ್ರಿಯಕರೋ ವಿದ್ವಾನ್ ಪೀಡಾಂ ಹರತು ಮೇ ಬುಧಃ।।4।। ದೇವಮಂತ್ರಿ ವಿಶಾಲಾಕ್ಷಃ ಸದಾ ಲೋಕ ಹಿತೇ ರತಃ। ಅನೇಕ ಶಿಷ್ಯ ಸಂಪೂರ್ಣಃ ಪೀಡಾಂಹರತು ಮೇ ಗುರುಃ।।5।। ದೈತ್ಯಮಂತ್ರೀ ಗುರುಸ್ರೇಷಾಂ ಪ್ರಣವಶ್ಯ ಮಹಾದ್ಯು। ಪ್ರಭುಸ್ತಾರಾಗ್ರಹಾಣಾಂ ಚ ಪೀಡಾ ಹರತು ಮೇ ಭೃಗುಃ।।6।। ಸೂರ್ಯೋಪುತ್ರೋ ದೀರ್ಘ ದೇಹೋ ವಿಶಾಲಾಕ್ಷಃ ಶಿವಪ್ರಿಯಃ। ಧೀರ್ಘಚಾರಃ

ಪ್ರಸನ್ನಾತ್ಮಾ ಪೀಡಾಂ ಹರತು ಮೇ ಶನಿಃ॥7॥ ಮಹಾಶಿರಾ ಮಹಾವಕ್ತ್ರೋ ದೀರ್ಘದಂಷ್ಟ್ರೋ ಮಹಾಬಲಃ। ಅತನುಶ್ಚೋರ್ಧ್ವ ಕೇಶಶ್ಚ ಪೀಡಾಂ ಹರತು ಮೇ ಶಿಖೀ॥8॥ ಅನೇಕ ರೂಪ ವರ್ಣೈಶ್ಚ ಶತಶೋಥ ಸಹಸ್ರಶಃ। ಉತ್ಪಾತರೂಪೋ ಜಗತಾಂ ಪೀಡಾ ಹರಸು ಮೇ ತಮಃ॥9॥ ಬ್ರಹ್ಮಾಂಡ ಪುರಾಣ ನವಗ್ರಹ ಪೀಡಾಹರ ಸ್ತೋತ್ರಂ ಸಂಪೂರ್ಣಂ



## ನವಗ್ರಹ ಕೀರ್ತನೆಗಳು (ಸಂಸ್ಕೃತ)

### ಸೂರ್ಯಮೂರ್ತೇ ನಮೋಸ್ತುತೆ (ಸೂರ್ಯ) ರಾಗ: ಸೌರಾಷ್ಟ್ರ-ಧ್ರುವತಾಳ

ಸೂರ್ಯಮೂರ್ತೇ ನಮೋಸ್ತುತೇ, ಸುಂದರ ಛಾಯಾಧಿಪತೇ॥ಪ॥ ಕಾರ್ಯಕಾರಣಾತ್ಮಕ ಜಗತ್ಪ್ರಕಾಶಕ ಸಿಂಹರಾಶ್ಯಾಧಿಪತೇ। ಆರ್ಯವಿನುತ ತೇಜಃಸ್ಫೂರ್ತೇ ಆರೋಗ್ಯಾದಿ ಫಲದಕೀರ್ತೇ॥ಅ.ಪ॥ ಸಾರಸಮಿತ್ರ, ಮಿತ್ರ ಭಾನೋ ಸಹಸ್ರ ಕಿರಣ ಕರ್ಣಸೂನೋ। ಕ್ರೂರ ಪಾಪಹರ ಕೃಶಾನೋ, ಗುರುಗುಹಮೋದಿತ ಸ್ವಭಾನೋ। ಸೂರಿಜನೇಡಿತ ಸುದಿನಮಣೇ, ಸೋಮಾದಿಗ್ರಹ ಶಿಖಾಮಣೇ। ಧೀರಾರ್ಚಿತಕರ್ಮ ಸಾಕ್ಷಿಣೇ, ದಿವ್ಯತರ ಸಪ್ತಾಶ್ವರಥಿನೇ। ಸೌರಾಷ್ಟ್ರಾರ್ಣ ಮಂತ್ರಾತ್ಮನೇ, ಸೌವರ್ಣಸ್ವರೂಪಾತ್ಮನೇ। ಭಾರತೀಶ ಹರಿಹರಾತ್ಮನೇ, ಭುಕ್ತಿಮುಕ್ತಿ ವಿತರಣಾತ್ಮನೇ॥ಚರಣ॥

### ಚಂದ್ರಂಭಜಮಾನಸ (ಚಂದ್ರ) ರಾಗ: ಅಸಾವೇರಿ-ಮತ್ಯತಾಳ

ಚಂದ್ರಂಭಜಮಾನಸ ಸಾಧುಹೃದಯ ಸದೃಶಂ॥ಪ॥ ಇಂದ್ರಾದಿಲೋಕ ಪಾಲೇಡಿತ ತಾರೇಶಂ। ಇಂದುಂ ಷೋಡಶಕಲಾಧರಂ ನಿಶಾಕರಂ। ಇಂದಿರಾ ಸಹೋದರಂ ಸುಧಾಕರಮನಿಶಂ॥ಅ.ಪ॥ ಶಂಕರ ಮೌಳಿ ವಿಭೂಷಣಂ ಶೀತಕಿರಣಂ। ಚತುರ್ಭುಜಂ ಮದನಚ್ಛತ್ರಂ ಕೃಪಾಕರಂ। ವೇಂಕಟೇಶನಯನಂ ವಿರಾಣ್ಮನೋಜನನಂ। ವಿಧುಂಕುಮುದಮಿತ್ರಂ ವಿಧಿ ಗುರುಗುಹವಕ್ತ್ರಂ। ಶಶಾಂಕಂ ಗೀಷ್ಪತಿಶಾಪಾನುಗ್ರಹಪಾತ್ರಂ। ಶರಚ್ಚಂದ್ರಿಕಾ ಧವಳ ಪ್ರಕಾಶಗಾತ್ರಂ। ಕಂಕಣಕೇಯೂರ ಹಾರಮಕುಟಾದಿಧರಂ। ಪಂಕಜರಿಪುಂ ರೋಹಿಣೀ ಪ್ರಿಯಕರ ಚತುರಂ॥ಚ॥

### ಅಂಗಾರಕ ಮಾಶ್ರಯಾಮ್ಯಹಂ (ಅಂಗಾರಕ) ರಾಗ: ಸುರುಟಿ-ರೂಪಕತಾಳ

ಅಂಗಾರಕ ಮಾಶ್ರಯಾಮ್ಯಹಂ ವಿನತಾಶ್ರಿತ ಜನ ಮಂದಾರಂ। ಮಂಗಳವಾರಂ ಭೂಮಿಕುಮಾರಂ ವಾರಂ ವಾರಂ॥ಪ॥ ಶೃಂಗಾರಕ ಮೇಷ ವೃಶ್ಚಿಕರಾಶ್ಯಾಧಿಪತಿಂ-ರಕ್ತಾಂಗಂ। ರಕ್ತಾಂಬರಾದಿಧರಂ-ಶಕ್ತಿ ಶೂಲಧರಂ। ಮಂಗಳಂ ಕಂಬುಗಳಂ ಮಂಜುಳತರ ಪದಯುಗಳಂ। ಮಂಗಳದಾಯಕ ಮೇಷತುರಂಗಂ ಮಕರೋತ್ತುಂಗಂ॥ಅ.ಪ॥ ದಾನವ ಸುರಸೇವಿತ ಮಂದಸ್ಮಿತ ವಿಲಸಿತ ವಕ್ತ್ರಂ। ಧರಣೀಪ್ರದಂ ಭ್ರಾತೃಕಾರಕಂ ರಕ್ತನೇತ್ರಂ। ದೀನರಕ್ಷಕಂ ಪೂಜಿತ ವೈದ್ಯನಾಥಕ್ಷೇತ್ರಂ। ದಿವ್ಯೌಘಾದಿ ಗುರುಗುಹ ಕಟಾಕ್ಷಾನುಗ್ರಹಪಾತ್ರಂ। ಭಾನುಚಂದ್ರ ಗುರುಮಿತ್ರಂ ಭಾಸಮಾನ ಸುಕಲತ್ರಂ। ಜಾನುಸ್ಥಹಸ್ತ ಚಿತ್ರಂ ಚತುರ್ಭುಜಂ ಅತಿವಿಚಿತ್ರಂ॥ಚರಣ॥

### ಬುಧಮಾಶ್ರಯಾಮಿ (ಬುಧ) ರಾಗ: ನಾಟಕುರಂಜಿ-ಝಂಪೇತಾಳ

ಬುಧಮಾಶ್ರಯಮಾಮಿ ಸತತಂ, ಸುರವಿನತಂ ಚಂದ್ರತಾರಾಸುತಂ॥ಪ॥ ಬುಧಜನೈರ್ವೇದಿತಂ ಭೂಸುರೈ ರ್ಮೋದಿತಂ। ಮಧುರ ಕವಿತಾಪ್ರದಂ, ಮಹನೀಯ ಸಂಪದಂ॥ಅ.ಪ॥ ಕುಂಕುಮಸಮದ್ಯುತಿಂ, ಗುರುಗುಹ ಮುದಾಕೃತಿಂ। ಕುಜವೈರಿಣಂ ಮಣಿಮಕುಟಹಾರ ಕೇಯೂರ ಕಂಕಣಾದಿ ಧರಣಂ। ಕಮನೀಯತರ ಮಿಥುನ ಕನ್ಯಾಧಿಪಂ ಪುಸ್ತಕಕರ ನಪುಂಸಕಂ ಕಿಂಕರಜನ ಮಹಿತಂ ಕಿಲ್ಬಿಷಾದಿರಹಿತಂ। ಶಂಕರಭಕ್ತಹಿತಂ ಸದಾನಂದ ಸಹಿತಂ॥ಚ॥

**ಬೃಹಸ್ಪತೇ ತಾರಾಪತೇ ಬ್ರಹ್ಮಜಾತೇ (ಬೃಹಸ್ಪತಿ) ರಾಗ: ಅಠಾಣ-ತ್ರಿಪುಟ**

ಬೃಹಸ್ಪತೇ ತಾರಾಪತೇ ಬ್ರಹ್ಮಜಾತೇ। ನಮೋಸ್ತುತೇ॥ಪ॥ ಮಹಾಬಲ ವಿಭೋ ಗೀಷ್ಪತೇ ಮಂಜುಧನುರ್ಮೀನಾಧಿ ಪತೇ। ಮಹೇಂದ್ರಾದ್ಯುಪಸಿತಾಕೃತೇ ಮಾಧವಾದಿ ವಿನತ ಧೀಮತೆ॥ಅ.ಪ॥ ಸುರಾಚಾರ್ಯ ವರ್ಯವಜ್ರಧರ, ಶುಭಲಕ್ಷಣ ಜಗತ್ರಯಗುರೋ। ಜರಾದಿವರ್ಜಿತ ಕ್ರೋಧ, ಕಚಜನಕಾಶ್ರಿತಜನಕಲ್ಪತರೋ। ಪುರಾರಿಗುರುಗುಹ ಸಂಮೋದಿತ ಪುತ್ರಕಾರಕ ದೀನಬಂಧೋ। ಪರಾದಿ ಚತ್ವಾರಿ ವಾಕ್ಸ್ವರೂಪ ಪ್ರಕಾಶಕ ದಯಾಸಿಂಧೋ। ನಿರಾಮಯಾಯ ನೀತಿಕರ್ತೇ, ನಿರಂಕುಶಾಯ ವಿಶ್ವಭರ್ತ್ರೇ। ನಿರಂಜನಾಯ ಭುವನ ಭೋಕ್ತ್ರೇ, ನಿರಂಶಾಯ ಸುಖಪ್ರದಾತ್ರೇ॥ಚರಣ॥

**ಶ್ರೀ ಶುಕ್ರ ಭಗವಂತಂ (ಶುಕ್ರ) ರಾಗ: ಫರಜ್-ಅಟ್ಟತಾಳ**

ಶ್ರೀ ಶುಕ್ರ ಭಗವಂತಂ ಚಿಂತಯಾಮಿ ಸಂತತಂ ಸಕಲ ತತ್ವಜ್ಞಂ॥ಪ॥ ಹೇ ಶುಕ್ರ ಭಗವನ್ ಮಾಂ ಆರು ಪಾಲಯ ವೃಷ ತುಲಾಧೀಶ ದೈತ್ಯ ಹಿತೋಪದೇಶ॥ಅ.ಪ॥ ಕೇಶವ ಕಟಾಕ್ಷೈ ಕನೇತ್ರಂ ಕಿರೀಟಧರಂ ಧವಳಗಾತ್ರಂ ಶ್ರೀ। ವಿಂಶತಿ ವತ್ಸರೋಡು ದಶಾವಿಭಾಗ ಮಷ್ಟವರ್ಗಂ। ಕವಿಂಕಳತ್ರಕಾರಕಂ ರವಿನಿರ್ಜರಗುರು ವೈರಿಣಂ। ನವಾಂಶ ಹೋರಾ ದ್ರೇಕಾಣಾದಿ ವರ್ಗೋತ್ತಮಾವ ಸರಸಮಯೇ। ವಕ್ರೋಚ್ಚನೀಚ ಸ್ವಕ್ಷೇತ್ರ ವರಕೇಂದ್ರ ಮೂಲ ತ್ರಿಕೋಣೇ। ತ್ರಿಂಶಾಂಶ ಪುಷ್ಯಂಶೈರಾವತಾಂಶ ಪಾರಿಜಾತಾಂಶ ಗೋಪುರಾಂಶ ರಾಜಯೋಗ ಕಾರಕಂ ರಾಜ್ಯಪ್ರದಂ ಗುರುಗುಹ ಮುದಂ॥ಚರಣ॥

**ದಿವಾಕರ ತನುಜಂ (ಶನಿ) ರಾಗ: ಯದುಕುಲಕಾಂಬೋದಿ-ಏಕತಾಳ**

ದಿವಾಕರ ತನುಜಂ ಶನೈಶ್ಚರಂ ಧೀರತರಂ ಸಂತತಂ ಚಿಂತಯೇಹಂ॥ಪ॥ ಭವಾಂಬುನಿಧೌ ನಿಮಗ್ನ ಜನಾನಾಂ ಭಯಂಕರಂ ಅತಿಕ್ರೂರ। ಭವಾನೀಶ ಕಟಾಕ್ಷ ಪಾತ್ರ ಭೂತ ಭಕ್ತಿಮತಾಮತಿ ಶಯ ಶುಭ ಫಲದಂ॥ಅ.ಪ॥ ಕಾಲಾಂಜನ ಕಾಂತಿಯುಕ್ತ ದೇಹ ಕಾಲಸಹೋದರಂ ಕಾಕವಾಹಂ। ನೀಲಾಂಶುಕ ಪುಷ್ಪ ಮಾಲಾವೃತಂ ನೀಲರತ್ನ ಭೂಷಣಾಲಂಕೃತಂ। ಮಾಲಿನೀ ವಿನುತ ಗುರುಗುಹ ಮುದಿತಂ ಮಕರ ಕುಂಭರಾಶಿನಾಥಂ। ತಿಲತೈಲ ಮಿಶ್ರಿತಾನ್ನ ದೀಪಪ್ರಿಯಂ ದಯಾಸುಧಾಸಾಗರಂ ನಿರ್ಭಯಂ ಕಾಲದಂಡ ಪರಿಪೀಡಿತ ಜಾನುಂಕಾಮಿತಾರ್ಥ ಫಲದ ಕಾಮಧೇನುಂ। ಕಾಲ ಚಕ್ರ ಭೇದ ಚಿತ್ರಭಾನುಂ ಕಲ್ಪಿತ ಛಾಯಾದೇವೀ ಸೂನಂ॥ಚ।

**ಸ್ಮರಾಮ್ಯಹಂ ಸದಾ ರಾಹುಂ (ರಾಹು) ರಾಗ: ರಮಾಮನೋಹರಿ-ರೂಪಕತಾಳ**

ಸ್ಮರಾಮ್ಯಹಂ ಸದಾ ರಾಹುಂ ಸೂರ್ಯಚಂದ್ರ ವೀಕ್ಷ್ಯಂ ವಿಕೃತದೇಹಂ॥ಪ॥ ಸುರಾಸುರಂ ರೋಗಹರಂ ಸರ್ಪಾದಿ ಭೀತಿಹರಂ। ಶೂರ್ಪಾಸನ ಸುಖಕರಂ ಶೂಲಾಯುಧಧರಕರಂ ॥ಅ.ಪ.॥ ಕರಾಳವದನಂ ಕಠಿಣಂ ಕಯಾನಾರ್ಣ ಕರುಣಾದ್ರ್ರಾಪಾಂಗಂ। ಚತುರ್ಭುಜಂ ಖಡ್ಗ ಖೇಟಾದಿ ಧರಣಂ। ಚರ್ಮಾದಿ ನೀಲವಸ್ತ್ರಂ ಗೋಮೇಧಕಾಭರಣಂ। ಶನಿಶುಕ್ರಮಿತ್ರ ಗುರುಗುಹ ಸಂತೋಷಕರಣಂ॥ಚರಣ॥

**ಮಹಾಸುರಂ ಕೇತುಮಹಂ ಭಜಾಮಿ (ಕೇತು) ರಾಗ: ಚಾಮರ-ರೂಪಕ**

ಮಹಾಸುರಂ ಕೇತುಮಹಂ ಭಜಾಮಿ ಛಾಯಾಗ್ರಹವರಂ॥ಪ॥ ಮಹಾವಿಚಿತ್ರ ಮಕುಟಧರಂ ಮಂಗಳ ವಸ್ತ್ರಾದಿಧರಂ। ನರ ಪೀಠಸ್ಥಿತಂ ಸುಖಂ ನವಗ್ರಹಯುತಂ ಸಖಿಂ॥ಅ.ಪ॥ ಕೇತುಂಕೃಣ್ವನ್-ಮಂತ್ರಿಣಂ, ಕೋಧನಿಧಿ ಜೈಮಿನಂ ಕುಲುತ್ಥಾದಿಭಕ್ಷಣಂ, ಕೋಣಧ್ವಜ ಪತಾಕಿನಂ। ಗುರುಗುಹ ಚಾಮರಭರಣಂ, ಗುಣ ದೋಷಜಿತಾಭರಣಂ। ಗ್ರಹಣಾದಿಕಾರ್ಯಕಾರಣಂ ಗ್ರಹಾಪಸವ್ಯಸಂಚಾರಿಣಂ॥ಚರಣ॥



# ನವಗ್ರಹ ಕೀರ್ತನೆಗಳು (ಕನ್ನಡ)

## ರೋಗಹರನೇ ನಮೋ (ಸೂರ್ಯ) ರಾಗ : ಮಲಯಮಾರುತ

ರೋಗಹರನೇ ನಮೋ। ದಿನಕರನೇ ನಮೋ। ಅರಿವ ನೀಡುವ ಲೋಕ ದೀಪನೇ ನಮೋ॥ಪ॥ ಅರುಣ ವರ್ಣ ನಮೋ ಅರುಣಾಂಬರ ನಮೋ। ಅರುಣನ ಸಾರಥಿಯ ಮಾಡಿದವನೇ ನಮೋ॥ ಗಿರಿಶ ಪ್ರಿಯ ನಮೋ। ತಮವ ಕಳೆಯುತ ಮೇರುಗಿರಿಗೆ ಪ್ರದಕ್ಷಿಣೆಯ ಗೈವ ನಿನಗೆ ನಮೋ॥1॥ ಕಮಲಬಾಂಧವ ನಮೋ ಕಮಲಾಸನ ನಮೋ। ಕಮಲಾಭಯಕರ ಕರ್ಮಸಾಕ್ಷಿಗೆ ನಮೋ। ಕಮಲಾಕ್ಷನಾಕ್ಷಿಯಲಿ ನೆಲೆಸಿಹನೆ ನಮೋ। ಕಮಲಾಕ್ಷ ನೆಲೆಸಿರುವ ಓ ತಾಣವೆ ನಮೋ॥2॥

## ಚಂದ್ರಮನೆ ಕಣ್ಮನಕಾಹ್ಲಾದಕರನೆ (ಚಂದ್ರ) ರಾಗ: ಅಭೇರಿ

ಚಂದ್ರಮನೆ ಕಣ್ಮನಕಾಹ್ಲಾದಕರನೆ ಇಂದ್ರನ ಪೋಲ್ವ ಸಂಪದ ನೀಡು ಬಾ॥ಪ॥ ಮನಸಿಜ ಜನಕನ ಮನಸಿಲುದಿಸಿ ನಮ್ಮ ಮನಸ್ಸಿಗೆ ನೆಮ್ಮದಿ ತರುವವನೆ ಬಾ। ಮನಸಿನ ದೇವಗೆ ಶಿರೋಮಣಿ ತಾರೆಯರ ಮನಸೆಳವಾ ಪ್ರಣಯದರಸೇ ಬಾ॥1॥ ಚಿನ್ನದ ಬೆಟ್ಟವ ತಿರುಗುವವನೆ ಬಾ। ಚೆನ್ನಿಗನೇ ಬಾ ಚಂದಮಾಮನೆ ಬಾ। ಚೆನ್ನೆ ಮಹಲಕುಮಿ ಮಾತೆಯಣ್ಣನೆ ಬಾ। ಚೆನ್ನಾಗಿ ಸೊದೆಯನು ಸೂಸುವನೆ ಬಾ॥2॥

## ಮಂಗಳನೆ ಮಂಗಳವನೇ ನೀಡುದೇವ (ಮಂಗಳ) ರಾಗ: ಷಣ್ಮುಖಪ್ರಿಯ

ಮಂಗಳನೆ ಮಂಗಳವನೇ ನೀಡುದೇವ॥ಪ॥ ಉರಿವ ಕೆಂಡದ ತೆರದಿ ಬೆಳಗುವಂಗಾರಕನೆ ಧರೆಯ ಸುತನೆ ಕುಜನೆ ಮೇಷವಾಹನನೇ। ಉರಿದಾಗ ಮುನಿಸಿನಿಂ ಅಮಂಗಳವ ಮಾಡುವನೆ। ಮರೆಯದೆನಗೆ ನೀಡು ನೀ ಮಂಗಳವನೆ॥1॥ ವರಶಕ್ತಿ ಶೂಲಗಧೆಗಳ ಧರಿಸಿದ ದೇವನೇ ವರದನೇ ವರಚತುರ್ಭುಜ ಧಾರನೇ। ಅರುಣ ವರ್ಣದ ಎಂಟು ಜ್ಯಾತ್ಯಶ್ವ ಹೂಡಿದ ಸ್ವರ್ಣ ರಥದಲಿ ಮೆರೆಯುವ ಷಣ್ಮುಖಪ್ರಿಯನೆ॥2॥

## ಬುಧನೆನಿಸೋ ಎನ್ನ (ಬುಧ) ರಾಗ: ನಾಟಕುರಂಜಿ

ಬುಧನೆನಿಸೋ ಎನ್ನ ಬುಧನೇ ವದನದಿ ಸವಿನುಡಿ ನುಡಿಸೋ ಘನ್ನ॥ಪ॥ ಸ್ವರ್ಣಕಾಂತಿಯ ಚೆಲುವ ಮನ್ಮಥಕಾಯ। ಇಂದು ನಂದನ ಬಾರೋ। ಇಂದಿರೇಶನ ಪ್ರಿಯ॥ಅ.ಪ.॥ ಹತ್ತಾರು ವರ್ಣದ ಹತ್ತು ಕುದುರೆ ಹೂಡಿ। ಹತ್ತಿಮಹಾರಥ ಸುತ್ತುವೆ ಹೊನ್ನ ಬೆಟ್ಟ। ಹಸಿಖೇಡಗಗಧಾಭಯ ಭೂಷಿತ ವರಹಸ್ತ ಎಸೆವ ಪೀತಾಂಬರ ಮರಕತ ಹಾರಯುಕ್ತ॥1॥

## ದೇವ ಗುರುವೇ (2) ನಮ್ಮನ್ನು (ಗುರು) ರಾಗ: ಬಾಗೇಶ್ರೀ

ದೇವ ಗುರುವೇ (2) ನಮ್ಮನ್ನು ಪೊರೆವೆ। ಅರಿವನೀವೆ ಸರ್ವ ಸೌಭಾಗ್ಯ ತರುವೆ॥ಪ॥ ದಂಡ ಕಮಂಡಲು ಜಪಮಾಲೆ ಹಿಡಿವೆ। ಪೊನ್ನ ಕಾಂತಿಯ ಮೈಗೆ ಪೊಂಬಟ್ಟೆ ಉಡುವೆ॥ ಪುಣ್ಯಕರ್ಮಕೆ ನೀ ಪ್ರೇರಣೆಯ ಕೊಡುವೆ। ಸತ್ ಪುತ್ರ ಸಂತತಿ ನೀಡಿ ಕಾಪಾಡುವೆ॥1॥ ವೇದ ಓದಿಸುವೆ ಮಾತುಗಾರಿಕೆಯ ನೀವೆ। ಲಕ್ಷ ದೋಷವ ಕಳೆಯೆ ಕೇಂದ್ರದಿ ನಿಲುವೆ। ಪೊನ್ನ ಕುದುರೆಯ ಕಟ್ಟಿ ಪೊನ್ನ ತೇರನೇರಿ। ಪೊನ್ನ ಗಿರಿಯನು ಸುತ್ತಿ ಪುಣ್ಯವನೆ ತರುವೆ॥2॥

## ಶುಕ್ರನೇ ನಮಿಪೆ ನಿನ್ನ (ಶುಕ್ರ) ರಾಗ: ಮೋಹನ

ಶುಕ್ರನೇ ನಮಿಪೆ ನಿನ್ನ। ಶತ್ರು ಭಯ ಕಳೆವಿತ್ತ ನೀಡು॥ಪ॥ ಇರುಳಿನಾಗಸದಲ್ಲಿ ಬೆಳ್ಳಿ ಚುಕ್ಕಿಯಾಗಿ ಬೆಳಕು ನೀಡುವೆ ಜಗಕೆ। ಬರಡು ಬಾಳಲ್ಲಿ ಸುಖ ಸಂಪದ ತುಂಬುವೆ ಶುಭದಾಯಕ ಬೆಳಕೆ॥2ಸಾರಿ॥1॥ ಬೆಳ್ಳಿಯಂದದಿ ಹೊಳೆವ ಮೈಯೇ ಬೆಳ್ಳುಡುಗೆಬಿಳಿ ಹೂ ಮಾಲೆಗಳು। ಒಳ್ಳೆ ವಜ್ರಾಭರಣಂಗಳು ದಂಡ ಕಮಂಡಲು ಜಪಮಾಲೆಗಳು।

ಶುಭದಾಯಕ ಬೆಳಕೆ।।2ಸಾರಿ।।2।। ಎಂಟ್ಹತ್ತು ಕುದುರೆಗಳ ಹೊನ್ನ ತೇರನೇರಿ ಮೇರುವ ತಿರುಗುವೆ। ದಾಂಪತ್ಯದ ಸುಖವ ನೀಡುವೆ ಭಕುತರ್ಗೆ ಕವಿತಾ ಶಕ್ತಿಯನೀವೇ। ಶುಭದಾಯಕ ಬೆಳಕೆ।।2ಸಾರಿ।।3।।

### ಸೂರ್ಯಪುತ್ರ ಎಮಗೆ (ಶನಿ) ರಾಗ: ನೀಲಾಂಬರಿ

ಸೂರ್ಯಪುತ್ರ ಎಮಗೆ ಶೌರ್ಯ ನೀಡು। ಶನಿಮಹಾತ್ಮ ಕಷ್ಟ ದೂರಮಾಡು।।ಪ।। ನೀಲವರ್ಣನೆ ನಿನಗೆ ನೀಲ ಉಡುಗೆ ಸುಮನ। ನೀಲ ಮಣಿಗಳಾಭರಣ ನೀಲ ಗಿಡುಗ ವಾಹನ।।1।। ಶೂಲಚಾಪ ಬಾಣಚರ್ಮ ಹಿಡಿದ ಕರಚತುಷ್ಟಯ। ನೀಲರಥಕೆ ಎಂಟು ಕುದುರೆ ಮೇರು ಸುತ್ತಿ ಬರುವೆಯಾ।।2।।

### ರಾಹುವೆ ನಿನ್ನನು ಭಜಿಸುವೆ ನಾ (ರಾಹು) ರಾಗ: ಹಂಸಾನಂದಿ

ರಾಹುವೆ ನಿನ್ನನು ಭಜಿಸುವೆ ನಾ।।ಪ।। ವರಸುಧೆ ಕುಡಿವಾಗ ದ್ವಿತಿಜರ ಕಂಡು। ಹರಿ ತನ್ನ ಚಕ್ರದಿಂದ ತರಿಯಲು। ಶಿರತಾ ಕದನದಿ ಜಗವೆನಿಸಲು। ಆ ಶಿರದಲಿ ನಿಂತ ಶತದೇವ ರೂಪ।।1।। ರಾಹುವೆ ರೋಗಗಳನೀಡಾಡು। ರಾಹುವೆ ಬಾಹುಬಲ ನೀ ನೀಡು। ರಾಹುವೆ ದೀರ್ಘಾಯುವನು ನೀಡು। ರಾಹುವೆ ಹರಿಕೃಪೆ ಕೊಡಮಾಡು।।2।।

### ಬ್ರಹ್ಮಸುತ ಕೇತುಗಣ ನಮಿಪೆ (ಕೇತು) ರಾಗ: ಮಧ್ಯಮಾವತಿ

ಬ್ರಹ್ಮಸುತ ಕೇತುಗಣ ನಮಿಪೆ ನಾನಿನಗೆ।।ಪ।। ವರಶಕ್ತಿ ಶೂಲಗಧೆ ಕಟ್ವಾಂಗಗಳನೆ। ಧರಿಸಿದ ವರಚತುರ್ಭುಜದಾರನೆ। ಅರುಣ ವರ್ಣದ ಹತ್ತು ಕುದುರೆಗಳ ಹೂಡಿದ। ಸ್ವರ್ಣರಥದಿಂ ಸ್ವರ್ಣಗಿರಿಯ ಸುತ್ತುವವನೆ।।1।। ಹಲವು ವರಗಳ ಬೇಡಿ ಫಲವೇನು ದೇವ। ಕುಲದ ಕೀರ್ತಿಗೆ ಎನ್ನ ಕೇತನವೆನಿಸಯ್ಯ। ಕುಲ ಪರ್ವತಗಳಿರುವ ಕಾಲಕ್ಕು ಅಳಿಯದೆ। ನಿಲುವ ಉನ್ನತ ವಿಫುಲ ಯಶವನೀಡಯ್ಯ।।2।।



ಸೂರ್ಯನೇ ಶಿವ ಸ್ವರೂಪನೇ (ಸೂರ್ಯ) ರಾಗ: ಮಲಯಮಾರುತ

ಸೂರ್ಯನೇ ಶಿವ ಸ್ವರೂಪನೇ। ಶುದ್ಧದಿನಕರ ಪರಂಜ್ಯೋತಿಯೆ ರವಿಯೇ...।।ಪ।। ಉಜ್ವಲನೇ ಪ್ರಭು ಊರ್ಧ್ವಕಾಯನೇ, ವಸುಧೇ ಅಂಡಚರಾಚರಾಧಿಪನೇ।।ಅ.ಪ।। ಸಿಂಹರಾಶಿಯಲಿ ಮೆರೆವಂಥವನೇ। ಕಾಶ್ಯಪಗೋತ್ರನೆ, ಕಾಂತಿದಾಯಕನೆ। ಆದಿತ್ಯನಾಥನೆ ಆರ್ತಶರಣ್ಯನೆ। ಅರುಣನೆ ಕರುಣನೇ ಸೂರ್ಯನಾರಾಯಣನೆ।।ಚ।।

ಶಾಂತಸ್ವರೂಪನೇ ಚಂದ್ರನೆ (ಚಂದ್ರ)

ರಾಗ: ಕಾಮವರ್ಧಿನಿ

ಶಾಂತಸ್ವರೂಪನೇ ಚಂದ್ರನೆ। ಶೀತಲಕಿರಣನೆ ಸಂತೋಷತರೋ।।ಪ।।ಕ್ಷೀರಸಾಗರದಿಂ ಹುಟ್ಟಿ ಬಂದವನೇ। ಕಟಕರಾಶಿಯಲಿ ಮೆರೆಯುವಂಥವನೇ।।ಅ.ಪ।। ಆತ್ರೇಯಗೋತ್ರದೆ ಜನಿಸಿದಂಥವನೇ। ವಿವಸ್ವನ್‌ಮಂಡಲ ಆಗ್ನೇಯವಾಸನೆ। ತಾರಾಧೀಶನೆ ರೋಹಿಣಿ ಪತಿಯೇ। ಸೋಮನೆ ಶಶಿಧರ ಪೀತಛತ್ರ ಧ್ವಜನೇ।।ಚ।।

ಅಂಗಾರಕ ಗ್ರಹವೆ ಧರಣಿಸುತಾ.. (ಮಂಗಳ)

ರಾಗ: ಕುಂತಲವರಾಳಿ

ಅಂಗಾರಕ ಗ್ರಹವೆ ಧರಣಿಸುತಾ..। ಮಂಗಳನೇ ಕೊಡು ಮಂಗಳವಾ।।ಪ।। ರಕ್ತಲೋಚನನೆ ರಕ್ತಾಂಬರನೇ। ಭಾರಧ್ವಾಜ ಕುಲ ಸಂಭೂತನೇ।।ಅ.ಪ।। ಭೂತಪ್ರೇತ ಪಿಶಾಚ ನಾಶಗೈವವನೆ। ನಕ್ಷತ್ರ ಚಕ್ರದಲಿ ಸಂಚರಿಸುವನೆ। ದಕ್ಷಿಣದಿಕ್ ತ್ರಿಕೋಣ ಮಂಡಲಗತನೆ। ಮೇಷ ವೃಶ್ಚಿಕ ರಾಶಿ ಈಶನೆ ನಮಿಸುವೆ।।ಚ।।

ಚಂದ್ರನ ತನುಜನೇ ಸಿಂಹಾದಿರೂಢನೇ (ಬುಧ)

ರಾಗ: ಆರಭಿ

ಚಂದ್ರನ ತನುಜನೇ ಸಿಂಹಾದಿರೂಢನೇ। ಮಹಿಮಾನ್ವಿತ ಬುಧನೇ।।ಪ।। ಕನ್ಯಾರಾಶಿಯಲಿ ಮೆರೆವಂಥವನೇ। ಮಿಥುನಾಧಿಪತಿಯೇ ಪೀತಛತ್ರ ಧ್ವಜನೇ।।ಅ.ಪ।। ತರ್ಕಶಾಸ್ತ್ರ ವಿಶಾರದ ವೇದಾಂತ ಜ್ಞಾನರವಿ। ಸೋಮವಂಶ ಪ್ರದೀಪಕ ಸೌಮ್ಯ ಚಿತ್ತ ಶುಭಪ್ರದ। ಅತ್ರಿಗೋತ್ರೋದ್ಭವನೇ ಅತ್ಯಂತ ವಿನಯನೇ। ಗಗನ ಭೂಷಣನೆ ಕಾಮಪ್ರದಾಯನೇ।।ಚ।।

ಬೃಹಸ್ಪತಿಯೇ ಗುರುವೇ (ಗುರು)

ರಾಗ: ತೋಡಿ

ಬೃಹಸ್ಪತಿಯೇ ಗುರುವೇ ಬ್ರಹ್ಮನ ಪುತ್ರನೇ। ಭಕ್ತರಿಗೆಂದು ಅನುಗ್ರಹಿಸು। ಬೃಹದ್ರಥನೆ ನಿನ್ನ ಸ್ತುತಿಸುವೆ ನಿತ್ಯಾ...। ಭಾರ್ಗವ ಶಿಷ್ಯನೇ ಕನಿಕರಿಸು।।ಪ।। ಹೇಮಾಂಬರಧರ ಹೇಮ ಭೂಷಣನೆ। ವಾಚಸ್ಪತಿ ವೇದಸಿದ್ಧಾಂತ ಪಾರಗನೆ।।ಅ.ಪ.।। ಅಧ್ವರಾಸಕ್ತನೇ ಆಂಗೀರಸನೇ। ಕಾಶ್ಯಪ ಪ್ರಿಯನೇ ಲೋಕತ್ರಯಗುರುವೇ। ಧನುರ್ಮೀನಾಧಿಪ ಧನುರ್ಬಾಣಧರನೇ। ದಾರಿದ್ರ್ಯ ನಾಶಕನೇ ದಯೆ ನೀ ತೋರಿಸು ಬೃಹಸ್ಪತಿಯೇ।।ಚ।।

ಸರ್ವಭೋಗಗಳ ವರದಾಯಕ (ಶುಕ್ರ)

ರಾಗ: ಕಲ್ಯಾಣಿ

ಸರ್ವಭೋಗಗಳ ವರದಾಯಕ। ಶುಭಗುಣನೇ ಭೃಗುವೇ ವರಶುಕ್ರನೇ।।ಪ।। ಜ್ಯೇಷ್ಠಾ ನಕ್ಷತ್ರದೆ ಶ್ರೇಷ್ಠನೆ ನೀ ಜನಿಸಿದೆ ಇಷ್ಟಾರ್ಥ ನೀಡುವ ವರಿಷ್ಠನು ನೀನೇಯೇ। ಆನಂದ ನಟನ ಕಾವ್ಯವಾಚನ, ಅದ್ಭುತ ಸಂಗೀತ ಆಸಕ್ತನೇ। ವಾಸನಾದಿ ಸುಖಭೋಜನ, ವಾಹನಾದಿ ಸುಖಭೋಗವ ತರುವ।।ಅ.ಪ।। ವೃಷಭ ತುಲಾದಿಗಳ ರಾಶಿಗಳೀಶನೆ। ದಾನವ ಗುರುವೆ ದೇವವಂದಿತನೇ। ಭಕ್ತಿ ಮುಕ್ತಿ ಫಲದಾತನೆ ಮಾನ್ಯನೆ। ನಿಖಿಲಶಾಸ್ತ್ರಜ್ಞನೇ ನೀತಿದುರಂಧರನೇ।।ಚ।।

ಸೂರ್ಯಪುತ್ರನೇ ನಿತ್ಯನೇ (ಶನಿ)

ರಾಗ: ನಾದನಾಮಕ್ರಿಯ

ಸೂರ್ಯಪುತ್ರನೇ ನಿತ್ಯನೇ ಶನೇಶ್ವರ ಭಗವನ್ ನಮಿಸುವೇ...।।ಪ।। ಚತುರ್ಭುಜ ನೀಲಾಂಬರ ಮಂದಗತನೇ। ಧನುರ್ಮಂಡಲದೆ ನೆಲಸಿಹನೆ।।ಅ.ಪ।। ಮಕರದೆ ಕುಂಭದೆ ನಿನ್ನ ರಾಜ್ಯಾಂಗ। ಛಾಯಾಸುತನೇ ಕೂರ್ಮಾಂಗ। ಆನಂದದಾತನೆ ಆಯುಷ್ಯ ಕಾರಕನೇ। ವರಮಳೆ ಕರೆದು ಕನಿಕರಿಸು।।ಚ।।

ಭೋಗಕಾರಕ ರಾಹುದೇವನೆ (ರಾಹು)

ರಾಗ: ಮೋಹನ

ಭೋಗಕಾರಕ ರಾಹುದೇವನೆ। ಭಜಿಸುವೆ ಭಕ್ತಿಯಲಿ।।ಪ।। ಧೂಮ್ರವರ್ಣನೆ ಶೂಲಧರನೇ। ನಿಜಸಿಂಹಾಸನನೇ ನಿನಗೆ ವಂದನೆ।।ಅ.ಪ।। ಸೂರ್ಯಗು ಚಂದ್ರಗು ವೈರಿಯಾದವನೆ। ಶೂರ್ಪಾಸನನೇ ಪೈಠಿಣಸ ಗೋತ್ರನೆ। ನೀಲಚಂದನ ಭೂಷಿತ ನಮನ। ವಿಷಭೀತಿಹರನೇ ವಂದಿಸುವೆ ನಿನಗೇ।।ಚ।।

ಜ್ಞಾನಕಾರಕ ಕೇತುದೇವನೇ (ಕೇತು)

ರಾಗ: ಮಧ್ಯಮಾವತಿ
ಜ್ಞಾನಕಾರಕ ಕೇತುದೇವನೇ ನಿನಗೇ ಕೋಟಿ ನಮಸ್ಕಾರ... ಓಂ.. ಓಂ.. ಓಂ..।।ಪ।। ಚಿತ್ರವರ್ಣನೆ ಧ್ವಜಾಕಾರನೇ ಪಿಂಗಳಾಕ್ಷನೆ ನಿನಗೆ ವಂದನೆ।।ಅ.ಪ।। ಜೈಮಿನಿ ಗೋತ್ರಜನೆ ಸಿಂಹಿಕಾಸುತನೇ। ಕರಾಳವದನನೇ ರಕ್ತಲೋಚನನೇ। ದಿವಾಕರ ನಿಷಾಕರ ಉಪದ್ರವಕಾರಕ। ಕಾಲಾಭಿಸನ್ನಿಭ ಕರುಣಿಸು ನಮಗೇ।।ಚ।।

## ನವಗ್ರಹ ಕೀರ್ತನೆಗಳು (ತಮಿಳು)

**ನಲಮೇ ಅರುಳಿಡುಂ (ಸೂರ್ಯ)** **ರಾಗ:ರೇವಗುಪ್ತಿ-ಮಿಶ್ರಛಾಪು**

ನಲಮೇ ಅರುಳಿಡುಂ ಸೂರ್ಯಮೂರ್ತಿ ಶರಣಂ ಶರಣಂ ನವಗ್ರಹತ್ತಿನ್ ನಡುನಾಯಕನೆ।।ಪ।। ಫಲಂತರುಂ ಸಿಂಹರಾಶಿಗಧಿಪ। ಮಾದಂ ಒರುರಾಶಿಯಿಲ್ ಸಂಚರಿಪ್ಪಾಯ್। ಏಳುವಗೈ ಕುದುರೈಗಳ್ ಪೂಟ್ಟಿಯ ರಥಂತನಿಲ್ ಕೀಳ್ ದಿಸೈ ವಂದೇ ನಿನೈತ್ತದೈ ನಿರೈವೇಟ್ರ ಅರುಳ್ ವಾಯ್।।ಅ.ಪ।। ಮಣಿಯಿಲ್ ಮಾಣಿಕ್ಯಮುಂ ಮಲರ್ ಸೆನ್ ತಾಮರೆಯುಂ। ಫಲಂತರುಂ ಗೋದುಮೈ ದಾನಿಯ ಪ್ರಿಯನೇ। ನಿರಂತನಿಲ್ ಸಿವಪ್ಪು ಆಡೈಗಳ್ ಅಣಿಂದೆ ಪಾಟಲಿ ಪುರದಾಸನ್ ಫಣಿಂದಿಡುಂ ಪರಮ ದಯಾಳಾ ದಿವಾಕರ।।ಚರಣ।।

**ಈಸನಿನ್ ಸಡೈದನಿಲ್ (ಚಂದ್ರ)** **ರಾಗ: ಮೋಹನ-ಆದಿತಾಳ**

ಈಸನಿನ್ ಸಡೈದನಿಲ್ ಒಳಿತರುಂ ಮದಿಯೆ। ವಾಳ್‌ವಿಲ್ ನೆಮ್ಮದಿ ತರುವಾಯ್ ಜಗದೀಶನಿನ್।।ಪ।। ರಾಶಿಯಿಲ್ ಸಿರಂದ ಕಟಕತ್ತಿನ್ ಅಧಿಪ। ಮಾಸಿಲ ಮುತ್ತು ಮಾಲೈ ಅಣಿಂದಿಡುಂ ಅಳಗಾ।।ಅ.ಪ.।। ಮಾದಂ ಒರುಮುರೈ ಈರಾರು ರಾಶಿಯಿಲುಂ। ಮಾನ್ಬುಡನ್ ಫಲಂವಂದು ಮಾಟ್ರಂಗಳ್ ಸೈವಾಯ್। ಆದವನ್ ಒಳಿಪೆಟ್ರು ಪೂರಾಣನಾಯ್ ತಿಗಳ್‌ಂದು। ಪೂಜೆಗಳ್ ಫಲಂಸೈಯೈ ಕಾರಣಂಆನಾಯ್। ವೆಣ್ಣಿರಆಡೆಯುಂ ಅರಳಿಯುಂ ಅಣಿವಾಯ್। ಪಾಟಲಿ ಪುರದಾಸನ್ ಪೋಟ್ರಿ ಫಣಿಂದಿಡುಂ।।ಚರಣ।।

**ಅಂಗಾರಕನೆ ಅರುಳ್ ಪುರಿವಾಯ್ (ಮಂಗಳ)** **ರಾಗ: ಶುಭಪಂತುವರಾಳಿ-ಆದಿತಾಳ**

ಅಂಗಾರಕನೆ ಅರುಳ್ ಪುರಿವಾಯ್। ಆನಂದಮಾಯ್ ಉಲಗಿಲ್ ವಾಳ್ ಕೈ ಅಮೈಂದಿಡ ।।ಪ।। ಮಂಗಳಂಪೊಂಗಿಡ। ಮನೈನಿಲಂಪೆರುಗಿಡ। ಸಂಕಟಂತಂದಿಡುಂ ಕಡನ್‌ಸುಮೈ ನೀಂಗಿಡ।।ಅ.ಪ.।। ತಾಮಿರಂ ಪವಳಂ ಸೆಂಬಗ ಪೂವುಂ। ಸಿವಪ್ಪಿಲ್‌ಆಡೆಯುಂ ಪಡೈತ್ತಿಡುವೇನ್। ಮೇಷ ವೃಶ್ಚಿಕನ್ ರಾಶಿಯಿನ್‌ನಾಥನೆ। ಪಾಟಲೀಶನ್ ಮಗಿಳುಂ ಗುಹ ಸ್ವರೂಪನೆ।।ಚರಣ।।

**ಚಂದ್ರಕುಮಾರನೆ ಸೌಮ್ಯನೆ (ಬುಧ)** **ರಾಗ: ಆರಭಿ-ಆದಿತಾಳ**

ಚಂದ್ರಕುಮಾರನೆ ಸೌಮ್ಯನೆನುಂ ಬುಧನೆ। ಸದಾ ಉನ್ ಪಾದಕಮಲಮೇ ಶರಣಂ।।ಪ।। ಸಂತತಮ್ ಹರಿನಾಮಂ ಆಯಿರಮ್ ಶೊನ್ನಾಲ್। ಶಾಂತಿ ಪೆಟ್ರಿಡುವಾಯ್ ಮರಕತಪ್ರಿಯನೆ।।ಅ.ಪ.।। ಪಿತ್ತಳೈ ಪಾತ್ತಿರಮುಮ್ ಪಚ್ಚೈಪೈಯಿರುಂ। ವೆಣ್‌ಕಾಂದಳ್ ಪೂವುಂ ವೆಣ್‌ಪಟ್ಟು ಪ್ರಿಯನೆ। ವೇರುಕೊಳ್‌ಗಳಾಳ್ ಏರ್ಪಡುಂ ತುನ್ಬಂಗಳೈ। ವಿಳಕ್ಕಿಡುವಾಯ್ ಉಂದನ್ ತಿರುಮಯನಾಲೈ। ಕಲ್ವಿಯಿಲ್ ತೇರ್ಚಿಯುಂ ಗಣಿದತ್ತಿಲ್ ಮೇನ್‌ಮೆಯುಂ। ಅರುಳ್‌ವಾಯ್ ಪಾಟಲಿ ಪುರದಾಸನ್ ವಣಂಗಿಡುಂ।।ಚರಣ।।

**ವೇದಂಗಳ್ ಪೋಟ್ರಿಡುಂ (ಗುರು)** **ರಾಗ: ಹಿಂದೋಳ-ರೂಪಕತಾಳ**

ವೇದಂಗಳ್ ಪೋಟ್ರಿಡುಂ ಗುರುದೇವ। ಮೀನ ಧನುಸ್ಸು ರಾಶಿಯಿಲ್ ಆಳ್‌ಭವನೇ।।ಪ।। ಜಾತಕತ್ತಿಲ್ ದೋಷಂ ಇರುಂದಿಡ ಉನ್‌ಕರುಣೈ ಪಾರ್ವೆಯಾಲ್ ವಿಲಗಿಡುಮೆ।।ಅ.ಪ.।। ಪೊನ್ನುಂ ಪುಷ್ಯರಾಗ ರತ್ತಿನಮುಮ್

ಪಚ್ಚೆಕಡಲೈಯುಂ ಉನಕ್ಕೇ ಅರ್ಪಣಿತ್ತೇನ್। ಮಲ್ಲಿಗೆಮಲರುಂ ಮಂಜಲಿಲ್‌ಆಡೆಯುಂ। ಮಗ್ಗಿಳ್‌ಂದೇ ಅಣಿಯುಂ ಬೃಹಸ್ಪತಿಯೇ। ಉಂದನ್ ಫಲವೇಂಡ್ರಿ ಮಣಮಕ್ಕಳ್ ಏಂಗಿಡ। ಉನ್ನತಪಾಟಲೀಶ್ವರನ್ ಮುಗ್ಗಿಳ್‌ಂದಿಡುಂ।।ಚರಣ।।

### ಶುಕ್ಕಿರ ಭಗವಾನೇ ಶರಣ್ (ಶುಕ್ರ) ರಾಗ: ಷಣ್ಮುಖಪ್ರಿಯ–ಆದಿತಾಳ

ಶುಕ್ಕರ ಭಗವಾನೇ ಶರಣ್ ಅಂಡೈದೇನ್। ವೃಷಭ ತುಲಾರಾಶಿ ಉನ್ ಆಟ್ಚ್‌ಪೀಠಮೇ।।ಪ।। ದಿಕ್ಕಿಲ್ಲಾದವನೈ ಉಂದನ್ ಅರುಳಾಲೆ। ಕೋಟೀಶ್ವರನ್ ಆಗಿ ಮಗ್ಗಿಳ್‌ಂದಿಡುಂ ದೇವಾ।।ಅ.ಪ.।। ವೆಣ್‌ತಾಮರೈ ಮಲರುಂ ವೆಳ್ಳಿಯುಂ ವೈರಮುಂ ಪೈರಿನಿಲ್ ಮೊಚ್ಚೆಯುಂ ವಿರುಂಬಿಡುವಾಯ್। ಗಂಧರ್ವಗಾನಇಸೈ ಪರಿಮಳ ಸೈವಾಯ್। ಸೌಂದರ್ಯ ವದನಮುಂ ತಂದಿಡುವಾಯ್। ಫಣಿಂದೇನ್ ಉನ್‌ಪಾದಂ ಫಲನಲ್ಲಿದರುಳ್‌ವಾಯ್। ಪಾಟಲಿ ಪುರದಾಸನ್ ಪೋಟ್ರಿ ಫಣಿಂದಿಡುಂ।।ಚರಣ।।

### ಈಶ್ವರ ಪಟ್ಟಂಪೆಟ್ರ (ಶನಿ) ರಾಗ: ಹಂಸಧ್ವನಿ–ಆದಿತಾಳ

ಈಶ್ವರ ಪಟ್ಟಂಪೆಟ್ರ ಶನಿಭಗವಾನೇ ಇದಯ ಪೂರ್ವಮಾಯ್ ಪದಮ್ ಫಣಿಂದೇನೆ।।ಪ।। ಭಾಸ್ಕರನ್ ಮಗನೆ ಉನ್ನೈ ಫಣಿಂದೋರ್ಕು। ಏಳರೆ ಆಂಡುಗಳಿಲ್ ತುನ್ಬುಂಕುರೈತಿಡುವಾಯ್।।ಅ.ಪ।। ಕರುಂಕುವಳೈ ಪೂವುಂ ಕರುನೀಲ ರತ್ತಿನಮ್। ಕಾಕ್ಕೈವಾಹನಮುಮ್ ಉಂದನ್ ತನಿಸಿರಪ್ಪು। ಕಾಕ್ಕೈಕ್ಕು ಕಾಲೆಯಿಲ್ ಅನ್ನಂಇಡುವೋರ್ಕು। ಕರುಣೈ ಕಾಟ್ಟಿಯೈ ಕಾತ್ತಿಡುವಾಯ್। ಉಂದನ್ ಸನ್ನಿಧಿಯಿಲ್ ಎಳ್ಳುಂ ಎಣ್ಣೈ ದೀಪಮೆ ಏಟ್ರುವೋರ್ಕು। ಉನ್ನದ ನಿಲೈಯೈ ತಂದಿಡುವಾಯ್। ಮಕರ ಕುಂಭತ್ತಿಲ್ ಪಿರಂದವರ್ಕೆ ದೀರ್ಘಆಯುಳೈ ಕೊಡುತ್ತಿಡುವಾಯ್। ಪಾಟಲೀಶ್ವರನೈ ಫಣಿಂದವರ್ಕ್ಕೆ ಇಡರ್‌ತರಾಮಲ್ ಅರುಳ್ ತರುವವನೈ।।ಚರಣ।।

### ಸರ್ಪತ್ತಿನ್ ರೂಪನೆ (ರಾಹು) ರಾಗ: ಪುನ್ನಾಗವರಾಳಿ–ಆದಿತಾಳ

ಸರ್ಪತ್ತಿನ್ ರೂಪನೆ ರಾಹುದೇವನೆ। ಶರಣಂ ಶರಣಂ ಸಂಕಟಂತೀರ್ಪಾಯ್।।ಪ।। ಶಾರ್‌ಂದಿಡುಂಕೋಳಿನ್ ಬಲಂಪೆರುಭವನೆ। ದುರ್ಗೇಯೇಯ್ ಪೂಜೆಸೈದಾಲ್ ನಲಮ್‌ಪೆರುಂ ಅರುಳ್‌ವಾಯ್।।ಅ.ಪ.।। ಮಲರಿಲ್ ಮಂದಾರೆಯುಂ ಮಣಿಯಿಲ್ ಗೋಮೇದಿಕಮುಮ್। ಪೈರಿನಿಲ್ ಉಳುಂದುಂ ನೀಲನಿರಆಡೆಯುಂ। ಭಕ್ತಿಯೋಡ್ ಅಳಿತ್ತಾಲ್ ಮನಂ ಇರಂಗಿಡುವಾಯ್।।2ಸಾರಿ।। ಪಾಟಲೀಶನ್‌ದಾಸನ್ ಪೋಟ್ರಿಂಡುಂದೇವ। ಶಂಕರಿ ಶಾಂಭವಿ ಚಾಮುಂಡಿ ಸರ್ವೇಶ್ವರಿಯೆ। ಪೂಜೆಸೈದಾಲ್ ಶಂಕರ ನರುಳ್‌ಲ್ ಸಿರಪೆಟ್ರವನೆ। ಮನಂ ಮಗ್ಗಿಳ್‌ಂದು ಉಡನೇ ಉದವಿಡುವಾಯ್।।ಚರಣ।।

### ಜ್ಞಾನತ್ತೈ ತರುವವನೈ (ಕೇತು) ರಾಗ: ಶ್ರೀ–ಆದಿತಾಳ

ಜ್ಞಾನತ್ತೈ ತರುವವನೈ ಎಂಗಳ್। ಮಾನತ್ತೈ ಕಾಪ್ಪವನೈ ಕೇತುದೇವ।।ಪ।। ತೇನುಳ್ಳ ಶೆವ್ವರಳಿ ವೈಢೂರ್ಯ ಪ್ರಿಯನೆ। ತೀಯದೈ ತವಿರ್ತು ನಲ್ಲದೈ ಅರುಳ್ ವಾಯ್।।ಅ.ಪ.।। ಛಾಯಾಗ್ರಹಮಾಯ್ ಇರುಂದಾಲುಂ। ತನಕೆನ್ರು ತನಿಸಿರಪ್ಪೈ ಪೆಟ್ರವನೇ। ದಾನಿಯತ್ತಿಲ್ ಕೊಳ್ಳುಂ ಸೆನ್ನಿರಆಡೆಯುಂ। ಪಡೈತ್ತಾಲ್ ನಲ್ಲ ಫಲಂತರುವಾಯ್।ಕೆಡುಪದೈ ನೀಕ್ಕಿ ಸೆಲ್ವಂ ಕೊಡುತ್ತಿಡುವಾಯ್। ಪಾಟಲೀಶ ಪ್ರಿಯದಾಸನ್ ಫಣಿಂದಿಡುಂ।।ಚರಣ।।

### ಕರಿಮುಖದ ಗಣಪತಿಯ (ಬುಧ–ಬೃಹಸ್ಪತಿ ಹಾಡು)

ಕರಿಮುಖದ ಗಣಪತಿಯ ಚರಣಕೆ ವಂದನೆ ಮಾಡಿ। ಶಾರದೆಗೆ ಶಿರಬಾಗಿ ಬೇಡಿಗೊಂಬುವೆ ನಾನು। ವಲಿದೆನಗೆ ವರವ ಕೊಡು ಎಂದು।।1।। ಅಜಭವನಾರದ ಸುಜನರೊಂದಿತ ದೇವ ಮುದದಿ। ಮುದ್ದು ಮಹಾಲಕ್ಷ್ಮೀ ನಾರಾಯಣಾಂ। ಬುಜಪಾದಕೆರಗಿ ನಮೋ ಎಂಬೆ।।2।। ಇರುತಿದ್ದ ಬಡವ ಬ್ರಾಹ್ಮಣರನೊಂದು ಪಟ್ಟಣದಿ। ಮಡದಿ ಮಕ್ಕಳು ನಾಲ್ಕು

ಮಂದಿ ಸುತರು ಸಖಿಯರೊಡಗೂಡಿಕೊಂಡು ಸುಖದಿಂದ।।3।। ಒಬ್ಬೊಬ್ಬ ಸುತಗೆ ಇಬ್ಬಿಬ್ಬರು ಗಂಡುಮಕ್ಕಳು। ವಿದ್ಯೋಕ್ತದಿಂದ ಚಂಡಿ ಕುಪನಯನ। ಶುದ್ಧಾತ್ಮರಾಗಿರುತಿಹರು।।4।। ಪ್ರಾತಃಕಾಲದಲೆದ್ದು ನಾಲ್ಕು ಮಂದಿ ಸುತರು। ಗೋಪಾಳ ಜೋಳ ನಾಲ್ಕು ಸೇರು ಕಾಳು। ತಂದ್ಹಾಕುವರು ಅರ್ಧ ಗ್ರಾಸವನು।।5।। ಮೂರು ಪಾವು ಹಿಟ್ಟು ಮುಂಜಾನೆಗೆ ಇಟ್ಟು। ಮುಂದುಳಿದ ಗ್ರಾಸವನು ಬುತ್ತಿ ಅಂಬಲಿ ಕಾಸಿ। ಕೊಂಡು ಕಾಲ ಕಳೆಯುವರು।।6।। ಒಂದಾನೊಂದು ದಿನದಿ ಬಂದರಿಬ್ಬರು ದ್ವಿಜರು ಮಂದಿರದ ದ್ವಾರದಲಿ ನಿಂತು ಕೂಗುತಿರೆ। ಬಂದಳೊಬ್ಬಳು ಹಿರಿಯ ಸೊಸೆ ತಾನು।।7।। ಆರು ಬಂದವರು ನಿಮ್ಮ ನಾಮವೇನೆಂದೆನಲು। ಬಾಗಿ ಶಿರವನು ಚರಣಕೆ ವಂದನೆಮಾಡಿ। ಬಹಳ ಭಕ್ತಿಯಿಂದಲಿ ಕರೆದಳು।।8।। ದಾರಾದರೇನಮ್ಮ ಬಾಯಾರಿ ಬಳಲಿದೆವು ಮೂರು ನಿರಹಾರ ಮಾಡಿಬಂದೆವು ನಮಗೆ ಆಹಾರವ ಕೊಟ್ಟು ಕಳಿಸೆಂದರು।।9।। ಭಿಕ್ಷಕೆ ಹೋದವರು ಈಕ್ಷಣ ಬರುವರು। ಅರಕ್ಷಣ ನೀವು ತಡೆದರೆ ಜೋಳದ ಭಕ್ಷ್ಯವನು ಮಾಡಿ ಬಡಿಸುವೆನು।।10।। ಹೊತ್ತು ಬಹಳಾಯಿತು ಹಸಿವೆ ನಮ್ಮ ಹೊಟ್ಟೆಗೆ। ತುತ್ತನ್ನು ಕೊಟ್ಟರೆ ಅದನುಂಡು ನಾವೀಗ। ತೃಪ್ತರಾಗಿ ಹರೆಸಿ ನಡೆದೇವು।।11।। ಮಡಿ ಉಟ್ಟು ಮಾಡಿದಳು ಮುಂಜಿ ಮಣಿಗಿಳಿಗಡಿಗೆ। ತಡೆಯದೇ ನೀವು ಸ್ನಾನಮಾಡಿ ಬನ್ನಿರೆಂದು ದೃಢಭಕ್ತಿಯಿಂದ ಕರೆದಳು।।12।। ಸ್ನಾನ ಸಂಧ್ಯಾವಂದನೆಯ ಮಾಡಿ ಬಂದೆವು ಎನಲು। ತಾನು ಎಡೆಮಾಡಿ ಎರಡು ಭಕ್ಕರಿಯ। ನೀಡಿದಳು ಬಹಳ ಹರುಷದಿ।।13।। ಬೆಲ್ಲ ಬೆಣ್ಣೆಯ ತುಪ್ಪ ಕರಣಿ ಕರಣಿ ಕೆನೆ ಮೊಸರು ನುಣ್ಣನ ತೊವ್ವಿ ಅರೆದ ಕೊಬ್ಬರಿ ಕಾರ। ಉಣ್ಣಿರೆಂದು ಹಾಕುತ್ತಿದ್ದಳು।।14।। ಸಡಗರದಿ ಅದನುಂಡು ಕುಡಿದು ಮೇಲ್ಮಜ್ಜಿಗೆಯ ವಡೆದಡಿಕೆ ವೀಳ್ಯವ ಕೊಟ್ಟು ನಿಮ್ಮ ನಡೆವ ಹೆಸರು ಹೇಳಬೇಕೆಂದಳು।।15।। ಇಂದುಸುತನು ಸುರರು ಗುರುವು ಎಂದು ಪೇಳುವರು ಎಮಗೆ। ಬಂದೆವು ನಾವು ಬುಧ-ಬೃಹಸ್ಪತಿಗಳು। ಆನಂದವಾಯಿತು ನಮಗೆಂದು।।16।। ಅನ್ನ ಬೇಕಾದರೆ ಅಡಿಗಿ ವಲೆಯ ಗೋಡೆಯಲಿ। ನಮ್ಮನು ಬರೆದು ಪೂಜೆಯನು ಮಾಡಿದರೆ। ಅನ್ನವನು ಕರೆದು ನಾವು ಕೊಡುವೆವು।।17।। ಭಾಗ್ಯ ಬೇಕಾದರೆ ಬರೆದು ಪೆಟ್ಟಿಗೆಯಲಿ ಬಹಳ ಭಕ್ತಿಯಿಂದಲಿ ಪೂಜೆ ಮಾಡಿದರೆ ಭಾಗ್ಯ। ಕೊಡುವೆನೆಂದು ಹೇಳಿ ನಡೆದರಾಗ।।18।। ಸುಣ್ಣ ಸಾರಣೆಯಾಡಿ ಬಣ್ಣ ಚಿತ್ರವ ಬರೆದು। ಚೆನ್ನಾಗಿ ಬರೆದು ಬುಧ ಬೃಹಸ್ಪತಿಗಳನ್ನು। ಮನ್ನಿಸಿ ಪೂಜೆಯ ಮಾಡಿದರು।।19।। ಹಚ್ಚಿಟ್ಟು ದೀಪಗಂಧಾಕ್ಷತೆಯು ಫಲ ಪುಷ್ಪ ಉತ್ರಾಣಿ ಅಕ್ಕಿ ಮಂತ್ರಾಕ್ಷತೆ ಮಾಡಿ। ಭಕ್ತಿಲೆ ಪೂಜೆಯನು ಮಾಡಿದರು।।20।। ಗೋಪಾಳಕೆ ಹೋದಲ್ಲಿ ಗೋದಿ ಬೇಳೆ ಅಕ್ಕಿ। ಹಾಕುವರು ತಂದು ನಾಲ್ಕು ಬೀದಿಯಲಿ ಗಂಟು। ತಾವು ಇಟ್ಟು ಹೊತ್ತಾರು ಹೆಗಲಲ್ಲಿ।।21।। ಹಿಡಿಜೋಳ ಬೇಡಿದರೆ ಪಡಿ ಜೋಳ ಹಾಕುವರು। ಬಡವರು ನೀವು ಬನ್ನಿರೆಂದು। ಕರೆದು ಹಿಡಿ ಹಿಡಿ ರೊಕ್ಕ ಕೊಡುವರು।।22।। ಭರದಿಂದ ಬಂದಾಗ ಸುರುವಿದರು ಧಾನ್ಯವನು। ಬರೆದಂಥ ಗೊಂಬೆಯನು ನೋಡಿ ಕೇಳಿದರದರ। ವಿವರವನು ಹೇಳಬೇಕೆಂದು।।23।। ಇವರು ಬುಧ-ಬೃಹಸ್ಪತಿಯೆಂಬ ದೇವತೆಗಳು। ಇವರು ಬಂದೆಮ್ಮ ಮನೆಯ ಊಟವನುಂಡು। ಒಲಿದು ವರವ ಕೊಟ್ಟು ನಡೆದರು।।24।। ಬಹಳ ಅನ್ನವ ಮಾಡು ಜೋಳದ ಭಕ್ಕರಿ ಮಾಡು। ಬೇಳೆಯ ತೊವ್ವೆ ಬೆಲ್ಲ ಬೆಣ್ಣೆಯ ತುಪ್ಪ। ಎಲ್ಲ ನೈವೇದ್ಯಕೆ ಇಡಿರೆಂದು।।25।। ದಿನದಿನಕೆ ಧನ-ಧಾನ್ಯ ಘನವಾಗಿ ಬರುವುದು। ಮನೆಯಲ್ಲಿ ಸುಖವು ಮನಕೆ ಬಂದದೇಶ ನೋಡಿ ಬರುವೆನೆಂದನು।।26।। ಅರಹೊಟ್ಟೆ ಅಷ್ಟದಾರಿದ್ರ್ಯ ಹಿಂದಾಯಿತು। ಸರ್ವರಾಜ್ಯವನು ನೋಡಿ ಬರುವೆನೆಂದು। ಹೊರಟನೊಬ್ಬ ಹಿರಿಯಮಗ ತಾನು।।27।। ಚಂದ್ರಾವತಿಯಲ್ಲಿ ಚಂದ್ರಶೇಖರನೆಂಬ ರಾಜನು। ಅಂದು ಸ್ವರ್ಗಸ್ಥನಾಗಿರಲು ರಾಜ್ಯಕ್ಕೆ ಮುಂದೊಬ್ಬ ಅರಸನು ಬರಲೆಂದು।।28।। ಆನೆಯ ಕರದಲಿ ವನಮಾಲೆಯ ಕೊಟ್ಟಿರಲಾಗ। ತಾನು ಓಡುತ ಹೋಗಿ ಆ ದ್ವಿಜನ ಕೊರಳಲಿ। ಹಾಕಿತು ಬಹಳ ಹರುಷದಲಿ।।29।। ಬಡವ ಬ್ರಾಹ್ಮಣ ಇಂಥ ಪೊಡವಿಪಾಲಕತನವ। ಕೊಡಲಾಗದು ನಡೆನಡೆ ನಡೆಯೆಂದು। ದೂಡಿದರು ಊರ ಹೊರಗಾಗ।।30।। ಮತ್ತೊಮ್ಮೆ ಮಾಲೆಯ ಕೊಟ್ಟರೋಡುತ ದ್ವಿಜನ ಕುತ್ತಿಗೆಯಲಿ ಹಾಕಿ ತನ್ನ ಸೊಂಡಿಲಿಂದ ಒತ್ತಿ ಕೊಂಡು ಒಯ್ದು ಆ ಗಜವು।।31।। ಲಕ್ಷ್ಮೀ ಒಲಿದವರಿಗೆ ಅಲಕ್ಷ್ಯ ಮಾಡುವದೇನು। ಸಾಕ್ಷಾತ್ ದೊರೆಯು ಈತನೆಂದು ಹೊಗಳಿಸುತ। ಕಟ್ಟಿದರು ಪಟ್ಟವನು ಬೇಗ।।32।। ಮತ್ತವರ ಮಂದಿರಕೆ ಬಂದರು ಬುಧ-ಬೃಹಸ್ಪತಿಗಳು। ಸ್ವಸ್ಥವೆ ಕ್ಷೇಮವೇ ಎಂಬಂತೆ ವಾರ್ತೆಯನು ಕೇಳಿದರು ಕರುಣದಿಂದಾಗ।।33।। ಬಂದೀರಿ

ದಯಮಾಡಿ ಉಂಡುಹೋಗಿ ಎನುತ। ಮಂಡಿಗೆ ಫೇಣಿ ಮಾಡಿವದಕೆ ಮರಗೋದಿ। ತಂದಳು ಸಕಲಸಾಹಿತ್ಯ॥34॥ ನಮಗೇನು ಬೇಡಮ್ಮ ನೌಲಿಪಾಕದ ಭಕ್ಷ್ಯ। ನವನೀತ ಶಾಕ ಶಂಕರಗಂಡನ ಅಡಿಗೆ। ಸವಿಯಾಗಿ ಮಾಡಿ ಬಡಿಸೆಂದರು॥35॥ ಜೋಡಿಸಿ ಮಣೆಯ ಹಾಕಿ ಜ್ಯೋತಿಗಳ ಹಚ್ಚಿಟ್ಟು ಕೂಡ್ರಿಸಿದಳಾಗ। ಕುಡಿಬಾಳೆ ಎಲೆ ಹಾಕಿ ಮಾಡಿದಡಿಗೆಯ ಬಡಿಸಿ ಭಕ್ತಿಯಲಿ॥36॥ ಉಂಡು ಕೈತೊಳೆದು ವೀಳ್ಯ ತಕ್ಕೊಂಡು। ಸಂಭ್ರಮದಿ ಸಾಮ್ರಾಜ್ಯವ ನಾಳಿರೆಂದು। ಒಲಿದು ವರವ ಕೊಟ್ಟು ನಡೆದರು॥37॥ ಒಂದು ದಿನ ಮಕ್ಕಳು ಬಂದು ಕೋಪದಿ ಬರೆದ ಗೊಂಬೆಯನು ಅಳಿಸಿ ಅಡಿಗೆಯನು ಎಳೆತಂದು। ಉಂಡರು ನೈವೇದ್ಯಕ್ಕೆ ಇಡದೆ ಹಾಗೆ॥38॥ ಅಂದಿನಿಂದಲಿ ಬಂದಿತು ದಾರಿದ್ರ್ಯ। ಒಂದು ಸೆರೆ ಕಾಳು ಹುಟ್ಟದಂತಾಯ್ತು। ಮುಂದೇನು ಎನಗೆ ಗತಿಯೆಂದರು॥39॥ ಊರು ಬಿಟ್ಟು ಪರ ಊರಿಗೆ ಹೋದಲ್ಲಿ। ಆರು ತಿಳಿಯುವರು ನಮ್ಮನ್ನು ಕಟ್ಟಿಗೆ ಮಾರಿ ಕಾಲವನು ಕಳೆಯೋಣ॥40॥ ಊರೂರು ತಿರುಗುತಲಿ ಮೀರಿತು ಹನ್ನೆರಡು ವರುಷ। ಮಾರುತಲಿ ಹೋಗಿ ಮಗನು ದೊರೆಯು ಆದಂಥ। ಶಹರಕ್ಕೆಹೋಗಿ ಸೇರಿದರು॥41॥ ಗುಡ್ಡ ಗುಡ್ಡವ ತಿರುಗಿ ದೊಡ್ಡ ಹೊರೆಗಳ ಹೊತ್ತು। ದಡ್ಡಿ ಬಿದ್ದವು ನಮ್ಮ ಉದರಕ್ಕೆ। ದುಡ್ಡುಗಳು ದೊರೆಯುವೆಂದೆನುತ॥42॥ ಅರಸನ ಮನೆಯಲ್ಲಿ ಅರೆಸುತ್ತಿದ್ದರು ಗಚ್ಚು ಧರಿಸಿ ಕಟ್ಟಿಗೆಯ ದಣಿಯಲಾರದೆ ಗಚ್ಚು। ಅರೆಯುವ ಕೆಲಸಕೆ ಹೊಂದಿದರು॥43॥ ಒಂದು ದಿನ ಆ ರಾಜ ಬಂದು ಬಾಜಾರಕೆ। ತಾಯಿ-ತಂದೆ ಅಣ್ಣ-ತಮ್ಮಂದಿರ ಹೆಂಡಿರು ತನ್ನ। ಸತಿ-ಸುತರ ನೋಡಿ ಹರುಷದಲಿ॥44॥ ದೊರೆ ತಾನು ತಮ್ಮವರ ಗುರುತು ತಿಳಿದಾಕ್ಷಣದಿ ಅರಿತುಕೋ ಇವರ ವರ್ತಮಾನವೆಂದು ಕಳಿಸಿದನು ಮಂತ್ರಿಯನು ಬೇಗ॥45॥ ದಾವದೇಶವು ನಿಮ್ಮ ನಾಮವೇನಂದೆನಲು। ಹೇಳಿದರು ತಮ್ಮ ಸಕಲ ವೃತ್ತಾಂತವನು। ಕೇಳಿ ಸಂತಾಪದಿಂದಾಗಿ॥46॥ ಹಿರಿಯ ಮಗ ದೊರೆಯಾಗಿ ಇರುವ ಈ ಊರಲ್ಲಿ। ಪರಮ ಪುಣ್ಯ ಭಾಗ್ಯಶಾಲಿಗಳೆಂದು। ಅರುಹಿದನು ಅವರಿಗೆ ವಾರ್ತೆಯನು ॥47॥ ಮಗನ ವಾರ್ತೆಯನು ಕೇಳಿ ಮನದಲಿ ಹಿಗ್ಗುತಲಾಗ। ಜನನಿ ಜನಕ ತಮ್ಮಂದಿರು ಹೆಂಡಿರು ತನ್ನ ಸತಿ-ಸುತರು ಕೇಳಿ ಹರುಷದಲಿ॥48॥ ಬಹಳ ಸಾಮುದ್ರಿಕೆ ಬಲ್ಲ ಸಿದ್ಧಾಂತಿಗಳ ಕರೆಸಿ ಮೀರಿತು ಹನ್ನೆರಡು ವರುಷ। ಮಾರಿ ಭೇಟಿಯಾಗಲು ಹೇಗೆ॥49॥ ಕೊಪ್ಪರಗಿ ತೈಲವನು ತುಂಬಿಟ್ಟು ದೇವಾಲಯದಿ ಸುತ್ತನಿಂತು ನಿನ್ನ ಮುಖವ ನೋಡಿದರೆ। ಅದಕೆ ಮತ್ತೇನು ದೋಷವಿಲ್ಲೆಂದರು॥50॥ ಊರು ಶೃಂಗರಿಸಿ ಬೀದಿ ತೋರಣ ಕಟ್ಟಿ। ಸಾಧು ಶ್ರೀಗಂಧ ಪರಿಮಳದ ಥಳಿಯನು ಕೊಟ್ಟು ಭೇರಿ ನಗಾರಿ ಹೊಯಿಸುತಲಿ॥51॥ ತೇಜಿ ಗಜಪಲ್ಲಕ್ಕಿ ಕಾಜನಂದದಿ ರಥವು ಬಾಜಾರದೊಳಗೆ ಬಾಜಬಾಜಂತ್ರಿಯ। ಊದುವ ಕಾಳಿಕಡಿಮೆ ಯಿಲ್ಲ॥52॥ ಎರಿಸಿ ಎಲ್ಲರಿಗೆ ವಸ್ತ್ರವ ಉಡಿಸಿ ದೇವಾಂಗನೆಯ। ಕಳಿಸಿದನು ಮುತ್ತು-ಮಾಣಿಕ್ಯ ದಾಭರಣ। ಇಡಿಸಿ ಹೂಮಾಲೆ ಮುಡಿಸುತಲಿ॥53॥ ಹಿಡಿಮುಡಿ ಹಾಸುತಲಿ ಹಿಡಿದರು ಛತ್ತರಿಗೆ। ಹಿಡಿಹಿಡಿ ಕೊಡುತ ಹೊನ್ನು। ಬ್ರಾಹ್ಮಣರಿಗೆಲ್ಲ ಸಡಗರದಿ ನಡೆದರು ಗುಡಿಗೆ ಆಗ॥54॥ ಎಣ್ಣೆಯೊಳು ಬಗ್ಗಿ ಎಲ್ಲರೂ ಮುಖ ನೋಡಿ। ಅಣ್ಣ-ತಮ್ಮಂದಿರು ಹೆಂಡಿರು ತನ್ನ ಸತ್ಯಿಸುತರು। ಮನ್ನಿಸಿದ ತಾಯಿ-ತಂದೆಗಳ॥55॥ತುಪ್ಪದ ದೀವಿಗೆಯು ಕರ್ಪುರ ದಾರತಿಯ। ದ್ರಾಕ್ಷಿ ಕರ್ಜೂರ ಕದಳಿ ನಾರಿಕೇಳ ಫಲ। ಸಮರ್ಪಣೆಯ ಮಾಡಿದರು ಹರಿದಾಗ ॥56॥ ಗಂಧ-ಕುಂಕುಮ ಕುಸುಮ ಅರಿಶಿಣವು ಬಂದ ಮುತ್ತೈದೆಯರಿಗೆ ಉಡಿಯ ತುಂಬುತಲಿ। ಆನಂದದಿಂದಕ್ಕ ತಂಗಿಯರ॥57॥ ಖೀರು ಮಂಡಿಗೆ ಫೇಣಿ ಕ್ಷೀರಘೃತ ಸಕ್ಕರೆಯು। ಸಾರು ಶಾಲ್ಯನ್ನ ಶಾಕ ಪಾಕಗಳಿಂದ। ಊರ ಜನರ ಉಣಿಸಿದರು॥58॥ ದಕ್ಷಿಣೆ ತಾಂಬೂಲ ತಕ್ಕೊಂಡು ಕೊಂಡಾಡುತಲಿ। ಲಕ್ಷಾಧಿಕಾರಿ ನೀನಾಗೆಂದು ಜನರೆಲ್ಲ ಮಂತ್ರಾಕ್ಷತೆ ಹಾಕಿ ಹರಸಿದರು॥59॥ ಬಣ್ಣ ಚಾವಡಿ ಚಿತ್ರ ಚಿನ್ನದ ಚೌಕಟ್ಟು। ಕನ್ನಡಿ ಮಹಾಲು ಕನಕ ಕಂಬದರ ಮನೆಯು। ತಮ್ಮವರ ಕೂಡಿ ಹೊಕ್ಕನರಮನೆಯ॥60॥ ಎಂಟು ಮಕ್ಕಳಿಗೆ ತನ್ನೆಂಟರಿಷ್ಟರ ಕೂಡಿ ಕಂಠಾಭರಣ ಕಟ್ಟಿಸಿದ ಮಾಂಗಲ್ಯವನು।ಸಂತೋಷದಿ ಮಾಡಿದರು ಮದುವೆಯನು ॥61॥ ಮೊದಲು ಶ್ರಾವಣಮಾಸ ಬುಧವಾರ ದಿನದಲಿ। ಬುಧ-ಬೃಹಸ್ಪತಿಯ ಕಥೆಯನು ಪೇಳುವೆ ನಾನು। ಮುದದಿಂದ ಕೇಳಿ ಜನರೆಲ್ಲ॥62॥ ನೇಮದಿಂದಲಿ ಈ ಕಥೆಯ ಹೇಳಿ ಕೇಳಿದ ಜನರ ಭೀಮೇಶ ಕೃಷ್ಣನುದ್ಧಾರ ಮಾಡಿ। ಕಾಮಿತ ಫಲ ಕೊಡುವನು॥63॥ಸಮಾಪ್ತ॥



## 14. ಮಹಾವೀರ ಜಯಂತಿ

### ಏನು ಧನ್ಯನೀತನೂ (ಶ್ರೀ ಗೋಮಟೇಶಾ ಸ್ತುತಿ) ರಾಗ: ಹರಿಕಾಂಬೋಜಿ

ಏನು ಧನ್ಯನೀತನೂ। ಗೋಮಟೇಶಾ ಸ್ವಾಮಿ।।ಪ।। ತ್ಯಾಗದಾ ಭೋಗದಾ।ದೊರೆಯಾದನೀ ಜಗದಾ। ಕಾಮ ಬಾಣನೆನಿಸಿ ಆದಿಯುಗದಿ ನಿರ್ಮಲಾತ್ಮನಾದ।।ಅ.ಪ।। ಧನ್ಯನಾಗಿ ಮಾನ್ಯನಾಗಿ ಶ್ರೇಷ್ಠತಪದಿ ಕರ್ಮನೀಗಿ। ಸತ್ಯ ಚರಿತ ಜ್ಯೋತಿಯಾಗಿ ವೀರಧೀರ ನೆನಿಸಿದಂತೆ।।1।। ನಿನ್ನ ಪಾದವನ್ನು ನಾನು ಧ್ಯಾನಿಸುವೆ ಕಾಪಾಡು ನೀನು। ಪಂಚ ಅಕ್ಷರ ರೂಪ ದೀಪ। ಪಾಲಿಸೆನ್ನ ಬಿಡೆನು ನಿನ್ನಾ।।2।।

### ಶ್ರೀಮದ್ ಅಖಿಲೇಂದ್ರೋತ್ತಮಾಂಗ

ಶ್ರೀಮದಖಿಲೇಂದ್ರೋತ್ತಮಾಂಗ। ಸೋಮಮಣಿ ಮಕುಟಾಂಶ। ಚಂಚತ್ ಕೋಮಲಾಂಘ್ರಿ ದ್ವಯನು। ಚಿಂತ್ಯನ ದ್ವಾಪನ ದ್ವಿತೆಯಾ। ಕಾಮ ಮದಹರನು ಅಮರ ಮುಕ್ತಿ। ಶ್ರೀ ಮುಖಾಬ್ಜ ದಿನೇಶನ್ ಅರ್ಹತ್-ಸ್ವಾಮಿ ಮುದದಿಂದೀಗೆಮಗೆ ಕೈವಲ್ಯ ಸಂಪದವ।।ಚರಣ।।

### ಹಾವೋ ಜಿನಜೀ ಥೋರೀ (ಪ್ರಭಾತ ಗೀತ್)

ಹಾವೋ ಜಿನಜೀ ಥೋರೀ-ಲಲೀನೆ।ಬೈಠಕನೆ ಮಾರೊ ಖೇಲಣೋ। ಹಾವೋ ಜಿನಜೀ ಲಲೀ-ಲಲೀನೆ। ಲಾಗುಂ ಥೋರೀ ಪಾಯೋ। ಕುಂಥುನಾಥಜೀ ನೀ ಪಾಲಖಿಡೀವೋ ರತ್ನೋ ಜಡೀ।।1।। ಹಾವೋ ಜಿನಜೀ ಥೋರಾ ದರ್ಶನನೀ ಲಾಗೀ ಪ್ರಿತಡೀ। ಹಾವೋ ಜಿನಜೀ ದರ್ಶನ ಕರವಾರಾ ನಿತ್ಯ ಮೇವ। ಕುಂಥುನಾಥಜೀ ನೀ ಪಾಲಖಿಡಿವೋ ರತ್ನೋ ಜಡೀ।।2।। ಹಾವೋ ಜಿನಜೀ ರತ್ನೋ ಜಡೀ ನೆ ಹಿರೋ, ಜಡೀ। ಹಾವೋ ಜಿನಜೀ ಮಾತೀಡೋರೀ ಲಾಗಿ ಜಕಡಾ ಜೋರೋ। ಕುಂಥುನಾಧ ಜೀ ನೀ ಪಾಲಖಿಡೀವೋ ರತ್ನೋ ಜಡೀ।।3।। ಹಾವೋ ಜನಜೀ ಸೋಲಮಾಂ ಶಾಂತಿನಾಥ ವಾಂದಶುಂ। ಹಾವೋ ಜನಜೀ ಸತ್ತರಮಾಂ ಕುಂಥುನಾಥ ದೇವೋ। ಕುಂಥುನಾಧ ಜೀ ನೀ ಪಾಲಖಿಡೀವೋ ರತ್ನೋ ಜಡೀ।।4।। ಹಾವೋ ಜೀನಜೀ ಆಂಗೀ ರಚಾವುಂ ಸವಾ ಲಾಖನೀ। ಹಾವೋ ಜೀನಜೀ ದರ್ಶನನೀ ಲಾಗೀ ಹೋಡಾ ಹೋಡೋ। ಕುಂಥುನಾಥಜೀ ನೀ ಪಾಲಖಿಡೀವೋ ರತ್ನೋ ಜಡೀ।।5।।

### ಜಿನವರೀಯಾ ಥೋರೇ ಆಂಗಣೇ

ಜಿನವರೀಯಾ ಥೋರೇ ಆಂಗಣೇ ಮೈಂ ಆಯೋ, ರೇ ಶರಣಾ। ಮನ ಮ್ಹಾರೋ ತರಸೇ, ರೋಂಜ ಥೋರಾ ದರ್ಶನ್ ರೇ ಕರವಾ...। ದುಖಡಾ ನಿವಾರೋಜೀ ಸುಖಡಾ ಕರಾವೋ ಜೀ। ಆಜ್ ಹೈ ಓ ಅರಸರ ವಿನತೀ ರಾಖೋಜೀ ಜರಾ।।1।। ಭಕ್ತಿ ಮಾಂ ಥೋರೀ, ಮೈಂ ಜಾಗು ರಾತಾ ಲಂಭೀಯಾ...। ಪಗ ಗಯೀ ಮ್ಹಾರೀ ಆ ಮೋಹ-ಮಾಯಾ ರೀ ಅಖಿಯಾಂ...। ಯೂ ನಾ ತರಸಾವೋಜೀ ದರ್ಶನ ದಿರಾವೋಜೀ। ಗೀತ ಪ್ರಭುರಾ, ಸಫಲಾ ಸಬ ಮಿಲ ಗಾಯೀ ಜೋಜೀಜರಾ।।2।। ಮನ ರಾ ಮಂದಿರ ಮಾ ಕ್ಯುಂ ಆಪ ನಾ ಪಧಾರಿಯಾ।। ಥೇ ತೋ ವಸ್ಯಾ ಹೋ ರೇ ಪ್ರಭು ಮಾರಾ ಹಿವಡೀಯಾ। ದೀವಡಾ ಪ್ರಗಟಾವು ಮೈಂ ತೋರಣ ಬಂಧಾವುಂ ಮೈಂ। ನಾ ಪಧಾರೋ ತೋ ಸುನೋ। ರಹ ಜಾಸೀ ಆಂಗಣಾ।।3।। ರಂಗ ಬಿರಂಗೀ। ಆ ಫೋಲೋಂ ಕೀ ಹೈ ಅಂಗೀಯಾ। ಚಮ ಚಮ ಚಮಕೇ ಹೈ। ಆ ಛೋಟೀ ಠೋಟೀ ಅಖಿಯಾಂ। ಶಿಷ ಝುಕಾವೋಂ ಮೈ। ದಿಲ್ ಮೇಂ ಬಸಾವೋಂ ಮೈ। ಆಜ ಮಾರೋ ಬೇಡೋ ಪಾರ ಲಗಾದೀಜೋ ಜರಾ....।।4।।

### ಹೇ ಮಾರಾ ಮನಮಾ

ಹೇ ಮಾರಾ ಮನಮಾ ವಿರಾಜತಾ ಅರನಾಥಜೀ ಜಿನವರಜೀ ಮಹಾವೀರಜೀ। ಥಾರಾ ದರ್ಶನ ಕರೀನೆ ಧಯುಂ ಪಾವನ ಆ ಮನ॥2ಸಾರಿ॥ ಥಾರಾ ಮುಖಡಾ ನೇ ಜೋವಿ ಧಯು ಜೀವನ್ ಆ ಧನ್ಯ ಮಾರಾ ಪಾರ್ಶ್ವಪ್ರಭು॥1॥ ಹೂಂ ತೋ ವೀರ್ ಪ್ರಭುಜೀ ನೀ ಭಕ್ತಿ ರೇಕರು। ಮಾರೂಂ ಜೀವನ್ ಪ್ರಭುಜೀ ಥೋರೇ ಚರಣೇ ಧರುಂ॥2ಸಾರಿ॥ ಥಾರೀ ಮುರುತೀ ನೇ ಜೋವೀ ಪ್ರಭು ಕರೂಂ ರೇ ನಮನ್। ಮಾರೂ ಮೋಹೀ ಲಿಧು ಮನ್॥2॥ ಹೂಂ ತೋ ನಾಮ್ ರಟನ್ ಕರೂಂ ಘಡೀ ರೇ ಘಡೀ। ಹಯೇ ಸಾಭಲಜೋ ದಾದಾ ಮಾರೇ ಬೀಡ್ ರೇ ಪಡೀ॥2ಸಾರಿ॥ ಥಾರೀ ಅಖಿಯೋಂಮಾ ಜೋವೀ ಛೇ ಪ್ರೇಮ್ ನೀ ಝುಡೀ। ಮಾರಾ ತಾರಣ ತರಣ॥3॥

### ವೀರ ಮೇರೇऽऽऽ ಪಥ

ವೀರ ಮೇರೇ ऽऽऽ ಹೋ.. ವೀರ ಮೇರೇ...। ವೀರ ಮೇರೇ ಪಥ ರಖಿಯೋ ಸದಾ ಮಹಾವೀರಜೀ। ತ್ರಿಶಲಾ ಕೇ ಲಾಲ್ ರಾಜ ಕುವರ ಜಪು ಮೈಂ ಜಿನವರ (3) ದಯಾಕರ ನಾಥ ದಯಾಕರ॥1॥ ಜಬ ಮಹಾವೀರ ಜೀ ಗರ್ಭ ಮೇ ಆಯೆ। ದೇವೋಂ ನೇ ಸಬ್ ರತ್ನ ಲುಟಾಯೇ। ಇಂದ್ರೋಂನೇ(3) ತೇರಾ ನವಣ ಕಿಯಾ ಮಹಾವೀರಜೀ॥2॥ ಮಹಾವೀರ ಜಗ ಜನ ಕೇ ಹೈಂ ಪ್ಯಾರೇ। ಮಾಂ ತ್ರಿಶಲಾ ಕೀ ಆಂಖೋಂ ಕೇ ತಾರೇ। ಸಿದ್ದಾರ್ಥ ತೇರೇ(3) ಪುಣ್ಯ ಪಿತಾ ಮಹಾವೀರ ಜೀ॥3॥ ಬಾರಹ ಬರಸ ತುನೆ ತಪ ಕಿಯಾ ಭಾರೀ। ತು ಹುವಾ ಕೇವಲ ಜ್ಞಾನ ಕೀ ಧಾರಾ। ಜೀವೋಂ ಕೋ(3) ಉಪದೇಶ ದಿಯೊ ಮಹಾವೀರ॥4॥

### ವೀರಾ ಕರುಣಿಸು ಸನ್ಮತಿಯಾ

**ರಾಗ: ಭೀಮಪಲಾಸ್**

ವೀರಾ ಕರುಣಿಸು ಸನ್ಮತಿಯಾ। ಮಾರವಿಜಯಶೂರಾ। ಧೀರನು ನೀನೇ॥ಪ॥ ಘೋರ ಭವಾಬ್ಧಿಯ ಸುಳಿಯೊಳು ಸಿಲುಕೀ। ಭಾರಿ ದುಃಖಿದಿ ನರಳುತಿರುವೆನಾಂ। ತೋರಿಸಿ ಚಿತ್ ಪ್ರಭೆ ಎನ್ನೆದೆಯೊಳಗೇ। ಪಾರುಗಾಣಿಸೆಂದು ಬೇಡುವೆ ನಿನ್ನಾ॥1॥ ಅಂತರಾತ್ಮನಲಿ ತನುಮಯನಾಗಿ। ಸಂತತ ಧ್ಯಾನದೀ ಕರ್ಮವನೀಗಿ। ಚಿನುಮಯನಾಗಿ ಜಗ ಬೆಳಗುತಲೀ। ಸನ್ಮತಿ ದಾತ ನೀನಾದೆ ಜಗದಲಿ॥2॥

### ಆಶಾ-ಪಾಶಾ ದೋಷ-ನಾಶಾ

ಆಶಾ-ಪಾಶಾ ದೋಷ-ನಾಶಾ। ಶ್ರೀರಮೇಶಾ। ಜಿನೇಶಾ॥ಪ॥ ಈಶ ಸುರನರೇಶ ವಂದ್ಯ। ಭಾಸುರಾಂಗನೆ ಶ್ರೀಜಿನೇಶಾ॥ಅ.ಪ॥ ಧರೆಯ ಭೋಗ ಮರೆತುಯೋಗಾಧರನು ನೀನಾದೆ ಜೀನೇಶ। ಪರಮ ಕರುಣಾಭರಣಾ ನಿನ್ನಾ ಚರಣಾ ಸ್ಮರಿಸುವೆನಾ ಜಿನೇಶ॥1॥ ಹಲವು ಜನುಮ ಗಳಲಿ ನಾನು। ತೊಳಲಿ ಬಂದಿಹೆನೂ ಜಿನೇಶ। ಮಲಿನವಾದ ಕಲಿಲಗಳಿಸೀ। ಬಳಲಿ ಬೆಂದಿಹೆನೂ ಜಿನೇಶಾ॥2॥ ಧೀರ ನಿನ್ನಾ ಭೂರಿ ಸುಖದಾ ದಾರಿ ತೋರಿಸೆಲೋ ಜಿನೇಶಾ। ಘೋರತರ ಸಂಸಾರದಿಂದಾ ಪಾರುಗಾಣಿಸೆಲೊ ಜಿನೇಶಾ॥3॥

### ಶೂರಧೀರ ನೀನೇ ಜಗದೊಳ್

**ರಾಗ: ಬೇಹಾಗ್**

ಶೂರಧೀರ ನೀನೇ ಜಗದೊಳ್ ವೀರನಾಥನೆ॥ಪ॥ ಘೋರ ಕರ್ಮದ ಜಾಲಕೆ ಸಿಲುಕಿ। ದಾರಿ ಮರೆತು ಪೋದೆ। ತೋರುತೆ ಕರುಣೆಯ ಪೊರೆಯೋ ವೀರನಾಥನೇ॥ಅ.ಪ.॥ ನಿಷ್ಠೆಯಿಂದ ಭಜಿಸುವ ಜನಕೇ। ಇಷ್ಟದಾಯಕನಾದೇ। ಶಿಷ್ಟರ ಪೊರೆದು ಜಗದೀ ಶ್ರೇಷ್ಠನೆನಿಸಿದೇ॥1॥ ಭಾವ ಭಕ್ತಿಯಿಂದ ಭಜಿಸಿ। ಭವಬಂಧನವಾಬಿಡಿಸೀ। ಪಾವನರಾಗುತೆ ಕೆಲರು ಜವನ ಗೆಲ್ದರು॥2॥

### ಮಹಾವೀರ ಮಹಾವೀರ ಶಾಂತಿ ನಿಕೇತನ

ಮಹಾವೀರ ಮಹಾವೀರ ಶಾಂತಿ ನಿಕೇತನ ಮಹಾವೀರ॥ ಕರುಣಾಸಾಗರ ಮಹಾವೀರ। ಸುಜನ ಮನೋಹರ

ಮಹಾವೀರ॥ಪ॥ ಸಿದ್ಧಾರ್ಥರಾಜನ ಸುಕುಮಾರ। ಪ್ರಿಯ ಕಾರಿಣಿಯ ಪ್ರಿಯಕುವರಾ। ಲೋಕೋದ್ಧಾರಕ ಮಹಾವೀರ। ಧರ್ಮ ಪ್ರಚಾರಕ ಮಹಾವೀರ॥1॥ ಜನ್ಮ ಜರಾಮರಣ ವಿದೂರಾ। ನಿರ್ಮಲ ತನುಮನ ದಯಾಕರಾ। ಕರ್ಮವಿದೂರಾ ಮಹಾ ವೀರ। ಸುಜ್ಞಾನ ಸಾಗರ ಮಹಾವೀರ॥2॥ ಪರಮ ಪಂಚಾಕ್ಷರ ಸ್ಮರಿಸುತಲೀ। ಅರುಹ ಅಚ್ಯುತ ನೆಂದೆನಿಸುತಲಿ। ಸತ್ಯ ಅಹಿಂಸೆಯ ಮಾರ್ಗದಲಿ। ಮೂಜಗ ಬೆಳಗಿದ ಮಹಾವೀರ॥3॥

## ಯಹ ಪರ್ವ ಪರ್ಯುಕ್ಷಣ

ಯಹ ಪರ್ವ ಪರ್ಯುಕ್ಷಣ ಜೈನೋಂಕಾ। ಅಲಬೇಲೋಕಾ ಮಸ್ತಾನೋಂ ಕಾ। ಇಸ ಧರ್ಮ ಕಾ ಯಾರೋಂ ಕ್ಯಾ ಕಹನಾ। ಯಹ ಧರ್ಮ ಹೈ ದೈನೋಂ ಕಾ ಗಹನಾ। ಹೋ... ಹೋ.... ಹೋ....॥1॥ ಯಹಾಂ ಹೋತೀ ಅಠ್ಠಾಯಿಯಾಂ ಘರ ಘರ ಮೇ। ನಿತ ಹೋತೀ ಹೈ ಪೂಜಾ ಮಂದಿರ ಮೇ। ಯಹಾಂ ಲೋಗ ಹಜಾರೋ ಆತೇ ಹೈಂ। ಪ್ರಭು ದರ್ಶನ ಕೋ ಪಾ ಜಾತೆ ಹೈ ಹೋ... ಹೋ... ಹೋ...॥2॥ ಯಹಾ ಭಕ್ತ ಝೂಮತೇ ಗಾತೇ ಹೈಂ। ಪರ್ವ ಕೀ ಖುಷಿಯಾಂ ಮನಾತೇ ಹೈ। ಇಸ ಪರ್ವಕಾ ಯಾರೋಂ ಕ್ಯಾ ಕಹನಾ। ಪುಣ್ಯ ಕಮಾತೇ ತುಮ್ ರಹನಾ ಹೋ... ಹೋ... ಹೋ...॥3॥ ಭಾದೊ ಕಾಮಹಿನಾ ಆಯಾ ಹೈ। ಭಾವೋಂ ಕೀ ಬಹಾರೇಂ ಲಾಯಾ ಹೈ। ಯಹಾಂ ಲಗತೀ ಹೈ ಹೊಡತ ಪಸ್ಯಾಕೀ ಬಜತೀ ಶಹನಾಯೀ ಶಾಸನ ಕೀ ಹೋ... ಹೋ... ಹೋ...॥4॥ ಪ್ರಭುದರ್ಶನ ಕೋನಿತ ಆತೇ ಹೈ। ಜನವರ ಕೀ ಪೂಜಾ ಕರತೇ ಹೈ। ಯಹಾಂ ನಿತ - ನಿತ ಮೇಲೇ ಲಗತೇ ಹೈ। ಪ್ರಭುಜೀ ಕೇ ದರ್ಶನ ಕರತೇ। ಹೈ। ಯಹಾಂ ನಿತ ನಿತ ಮೇಲೇ ಲಗತೇ ಹೈ। ಪ್ರಭುಜೀ ಕೇ ದರ್ಶನ ಕರತೇ ಹೈ॥ ಹೋ... ಹೋ... ಹೋ....॥5॥ ಜಿನ ಶಾಸನ ಶೋಭಾ ನ್ಯಾರೀ ಹೈ। ಹಮೇ ಪ್ರಾಣೋ ಸೇ ಭೀ ಪ್ಯಾರೀ ಹೈ। ಜಿನ ಶಾಸನ ಕಾ ತೋ ಕ್ಯಾ ಕಹನಾ। ಕುಂಥು ಮಂಡಲ ಕಾ ಯೇ ಕಹನಾ। ಹೋ... ಹೋ... ಹೋ...॥6॥

## ಕೇಂ ಆಜಾ ಜೈನೀ ಪರ್ವ

ಕೇಂ ಆಜಾ ಜೈನೀ ಪರ್ವ ಸುಹಾನಾ ಆಯಾ ರೇ॥4ಸಾರಿ॥ಕೇಂ ಆಜ ಆಯಾರೇಂ ಆಯಾರೆ ಆಯಾರೆ ಪರ್ವ ಸುಹಾನ ಆಯಾ ರೇ...॥2ಸಾರಿ॥ ನರ ಔರ್ ನಾರೀ ಸ ಧಜ್ ಕೆ ದ್ವಾರೇ ತೇರೇ ಆತೇ ರೇ। ಆಕೆ ದ್ವಾರೆ ಝುಮೇಗಾಯೆ। ಆಯಾ ಪಜುಸಣ। ಆಯಾ ಪಜುಸಣ॥4॥ ಓಂ ಹರ ಕೋಯೀ ತಪಸ್ಯಾ ಕರತಾ। ಹರ ಕೋಯೀ ಆರಾಧನಾ ಕರತಾ। ವಿರಾ....। ಬಚ್ಚೇಂಬೂಢೇ ಮಂದಿರ್ ಜಾತೆ। ಪ್ರಭುಜೀ ಕೀ ಪೂಜಾ ರಚಾತೇ... ವಿರಾ...ಹೀರೇ ಪನ್ನೇ ಕೀ ಅಂಗೀ ರಚಾತೇ। ಮಂದಿರಜೀ ಕೋ ಜಗಮಗಾತೆ। ಜಲಾತೇ ಜಲಾತೇ ಜಲಾತೇ ಜಲಾತೇ ಸಾರೇ ದೀಪಕ್॥2ಸಾರಿ॥ ಓ ನರ ಔರ್ ನಾರಿ ಸಜಧಜ॥1॥ ಓಂ... ಯೇ ಪರ್ವ ಹೈ ಸಬ್ ಜೈನೋಂ ಕಾ। ಅಲಬೇಲೋ ಮಸ್ತಾನೋಂ ಕಾ... ವಿರಾ... ಇಸ್ ಪರ್ವ ಕಾ ಕ್ಯಾ ಹೈ ಕೆಹನಾ। ಯೇ ಜೈನೇ ಕಾ ಹೈ ಗೆಹನಾ... ವಿರಾ ಲೋಗ್ ಹಜಾರೋಂ ದ್ವಾರೇ ಆತೆ। ಆಕೇ ಚರಣೋಂ ಮೇ ಶಿಷ ಝುಕಾಕೇ। ಝುಕಾಕೇ ಝುಕಾಕೇ। ಝುಕಾಕೇ। ಝುಕಾಕೇ ಕರುತೇ ವಂದನ್॥2॥

## ಜಯಜಯ ಆರತೀ (ಆರತಿ)

ಜಯ ಜಯ ಆರತೀ ಆದಿ ಜಿಣಂದಾ। ನಾಭಿರಾಯಾ ಮರುದೇವಿ ಕೋನಂದಾ॥1॥ ಪಹೇಲೀ ಆರತೀ ಪೂಜಾ ಕೀ ಜೇ। ನರಭವ ಪಾಮೀನೇ ಲಾಹೋ ಲೀಜೇ॥2॥ ದುಸರೀ ಆರತೀ ದೀನ ದಯಾಳೌ। ಘಳೆವಾ ಮಂಡಪಮಾಂ ಜಗ ಅಜುವಾಳಾ॥3॥ ತೀಸರೀ ಆರತೀ ತ್ರಿಭುವನ ದೇವಾ। ಸುರನರ ಇಂದ್ರ ಕರೇ ತೋರೀ ಸೇವಾ॥4॥ ಚೋಥೀ ಆರತೀ ಚವುಗತಿ ಚೋರೇ। ಮನವಾಂಛಿತ ಫಲ ಶಿವಸುಖ ಪೋರೇ॥5॥ ಪಂಚಮೀ ಆರತೀ ಪುಣ್ಯ ಉಪಾಯೊ। ಮುಳಚಂದೆ ಋಷಭ ಗುಣ ಗಾಯಾ॥6॥

### ದೀವ್ಹೋ ರೇ ದೀವ್ಹೋ (ಮಂಗಳ)

ದೀವ್ಹೋ ರೇ ದೀವ್ಹೋ ಪ್ರಭು ಮಂಗಲಿಕ ದೀವ್ಹೋ। ಆರತೀ ಉತಾರೀನೇ ಬಹು ಚಿರಂಜೀವ್ಹೋ।।1।। ಸೋಹಾಮಣುಂ ಘೇರ ಪರ್ವ ದಿವಾಳೀ। ಅಂಬರ ಖೇಲೇ ಅಮರಾ ಬಾಳೀ।।2।। ದೀಪಾಳ ಭಣೇ ಏಣೇ ಕುಳ ಅಜುವಾಳೀ। ಭಾವೇ ಭಗತೇ ವಿಧನ ನಿವಾರೀ।।3।। ದೀಪಾಲ ಭಣೇ ಏಣೇ ಏ ಕಾಳಿಕಾಳೆ। ಆರತೀ ಉತಾರೀ ರಾಜಾ ಕುಮಾರಪಾಳೆ।।4।। ಅಮ ಘೇರ ಮಂಗಲಿಕ ತುಮ ಘೇರ ಮಂಗಲಿಕ। ಮಂಗಲಿಕ ಚತುರ್ವಿಧ ಸಂಘನೇ ಹೋಜೋ ।।5।। ದೀವ್ಹೋ ರೇ...।।



## 15. ಶ್ರೀ ಬಸವೇಶ್ವರ ಜಯಂತಿ

### ಮರ್ತ್ಯಲೋಕದ ಮಹಾಮನೆ

ಮರ್ತ್ಯಲೋಕದ ಮಹಾಮನೆ ಹಾಳಾಗಬಾರದೆಂದು। ಕರ್ತನಟ್ಟಿದನಯ್ಯ ಒಬ್ಬ ಶರಣನ। ಆ ಶರಣ ಬಂದು ಕಲ್ಯಾಣವೆಂಬ ಶಿವಪುರವ ಕೈಲಾಸವ ಮಾಡಿ। ಜಗವರಿಯೆ ಶಿವಾಚಾರದ ಧ್ವಜವನೆತ್ತಿಸಿ। ಮರ್ತ್ಯಲೋಕ ಶಿವಲೋಕವೆರಡಕ್ಕೆ ನಿಚ್ಚಣಿಕೆಯಾದನು।।1।। ಜಗದಾರಾಧ್ಯ ಬಸವಣ್ಣ, ಪ್ರಥಮ ಗುರು ಬಸವಣ್ಣ। ಶರಣ ಸನ್ನಿಹಿತ ಬಸವಣ್ಣ, ಸತ್ಯಸಾತ್ವಿಕ ಬಸವಣ್ಣ। ಸರ್ವಾಚಾರ ಸಂಪನ್ನ ಬಸವಣ್ಣ, ಸರ್ವಾಂಗಲಿಂಗಿ ಬಸವಣ್ಣ। ಸುಜ್ಞಾನ ಭವಿತ ಬಸವಣ್ಣ, ನಿತ್ಯ ಪ್ರಸಾದಿ ಬಸವಣ್ಣ। ಸಚ್ಚಿದಾನಂದ ಮೂರ್ತಿ ಬಸವಣ್ಣ ಸದ್ಯೋನ್ಮುಕ್ತಿರೂಪ ಬಸವಣ್ಣ। ಅಖಂಡ ಪರಿಪೂರ್ಣ ಬಸವಣ್ಣ ಅಕಾಯ ಚರಿತ್ರ ಬಸವಣ್ಣ। ಅಸಾಧ್ಯ ಸಾಧಕ ಬಸವಣ್ಣ, ಅಭೇದ್ಯ ಭೇದಕ ಬಸವಣ್ಣ। ಅನಾಮಯಮೂರ್ತಿ ಬಸವಣ್ಣ ಮಹಾಮನೆಯ ಮಾಡಿದಾತ ಬಸವಣ್ಣ। ರುದ್ರ ಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ। ಶಿವಾಚಾರದ ಘನವ ಮೆರೆದಾತ ಬಸವಣ್ಣ ಚನ್ನಬಸವಣ್ಣ।।2।। ಗುಹೇಶ್ವರ ಸಾಕ್ಷಿಯಾಗಿ ನಿಮ್ಮ ಮಹಾತ್ಮೆಗೆ ನಮೋನಮೋ ಎನುತಿರ್ದೆನು ಕಾಣಾ, ಸಂಗನ ಬಸವಣ್ಣ।।

### ಓಂ ಗುರು ಓಂ ಗುರು ಓಂ ಗುರು ಬಸವ

ಓಂ ಗುರು ಓಂ ಗುರು ಓಂ ಗುರು ಬಸವ। ಸಂಗನ ಬಸವ ತವ ಶರಣಂ।।ಪ।। ಮಂಗಳ ರೂಪಿ ಜಂಗಮಮೂರ್ತಿ। ಸಂಗನ ಬಸವಾ ತವ ಶರಣಂ।।ಅ.ಪ.।। ನಮಾಮಿ ಸದ್ಗುರು ಪ್ರಣವ ಸ್ವರೂಪಿ। ಮಂತ್ರಪುರುಷನೆ ತವಶರಣಂ। ಜಗದೋದ್ಧಾರಕ ಪತಿತೋದ್ಧಾರಕ । ಜಗದಣ್ಣ ಬಸವಣ್ಣ ತವ ಶರಣಂ।।1।। ಶರಣ ರಕ್ಷಕ ಕಾರುಣ್ಯಮೂರ್ತಿ। ಮರಣವಿದೂರ ತವ ಶರಣಂ। ಸಮತಾವಾದಿ ಮನುಕುಲ ಕೀರ್ತಿ। ಜ್ಞಾನದ ದೀಪ್ತಿ ತವ ಶರಣಂ।।2।। ನಿರ್ಮಲ ಹೃದಯಿ ಚಿನ್ಮಯ ಗುರುವೆ। ಮಮತಾ ಮೂರ್ತಿ ತವ ಶರಣಂ। ಮಾತೃಸ್ವರೂಪಿ ಪಿತೃ ಸ್ವರೂಪಿ। ಜ್ಯೋತಿ ಸ್ವರೂಪಿ ತವ ಶರಣಂ।।3।। ಭವತಾಪಹಾರಕ ಶಿವಸುಖದಾಯಕ। ಪಾವನ ಪುರುಷ ತವ ಶರಣಂ। ವರಗುಣ ಸಹಿತ ನಿರುಪಮ ಚರಿತ। ನಿಜಸುಖ ಭರಿತ ತವ ಶರಣಂ।।4।। ನಿತ್ಯಾನಂದಂ ಸತ್ಯ ಸ್ವರೂಪೂಪಂ। ಭ್ರಾಂತಿ ವಿನಾಶಕ ತವಶರಣಂ। ಆನಂದರೂಪಿ ಚಿದಾನಂದ ರೂಪಿ। ಸಚ್ಚಿದಾನಂದ ತವಶರಣಂ।।

### ಅರಸಿ ತೊಳಲಿದರಿಲ್ಲ

ಅರಸಿ ತೊಳಲಿದರಿಲ್ಲ ಬಯಸಿ ಹೊಕ್ಕರಿಲ್ಲ। ತಪಸ್ಸು ಮಾಡಿದರಿಲ್ಲ; ಅದು ತಾನು ಬಹ ಕಾಲಕ್ಕಲ್ಲದೆ ಸಾಧ್ಯವಾಗದು। ಶಿವನೊಲಿದಲ್ಲದೆ ಕೈಗೂಡದು। ಇಂತೆನ್ನ ಚೆನ್ನಮಲ್ಲಿಕಾರ್ಜುನ ನೆನಗೊಲಿದನಾಗಿ। ಸಂಗನ ಬಸವಣ್ಣನ ಶ್ರೀ ಪಾದವ ಕಂಡು। ನಮೋ ನಮೋ ಎನುತಿರ್ದೆನು।।

## ಇದು ಬಸವ ಗಂಗೋತ್ರಿ

ಇದು ಬಸವ ಗಂಗೋತ್ರಿ। ಹೊಸದೊಂದು ಕವಿಸ್ಫೂರ್ತಿ। ಇದು ಶಿವದ ತಾಣ। ಋಷಿಶಾಂತಿಯ ನಿಲ್ದಾಣ।। ಸಾಗುತಿರೆ ಪೊದೆಗಳಲಿ। ಹರಿಯುತಲಿ ವಾಹಿನಿಯು। ಕೇಳುವುದು ಮಂಗಲದ ಗೀತೆಯೊಂದು। ನೂರು ಲತೆಗಳು ಇಲ್ಲಿ। ಹೂವ ಅರಳಿಸಿ ನಗಲು। ಚಿಗುರುವುದು ಮನದೊಳಗೆ ಸ್ಫೂರ್ತಿಯೊಂದು।। ಪಂಚಮದ ಸ್ವರವಿಹುದು। ಮಾಮರದ ನೆರಳಲ್ಲಿ। ಮೌನವಾಗಿಯೆ ಕೇಳು ಮನಕೆ ಶಾಂತಿ। ನಿಶ್ಶಬ್ದ ನೀ ಮರೆತು। ನೀ-ಶಬ್ದ ಮಾಡಿದರೆ। ಹರಿದು ಹೋಗುವುದಿಲ್ಲಿ ನಾದತಂತಿ।। ಹಸಿರು ತುಂಬಿದ ನೆಲದಿ। ಹೊಸೆದು ಹೋಗುವ ಗಂಗೆ। ಮನವು ನರ್ತಿಸಲಿಹುದು ಇದನು ಕಂಡು। ಮುದಗೊಳ್ಳು ಮನದೊಳಗೆ। ನೆರಳಿಹುದು ಮರದಡಿಗೆ। ನೆಮ್ಮದಿಯ ಪಡೆ ಬಸವನುಸಿರ ಉಂಡು।।

## ಜಗದಾರಾಧ್ಯ ಬಸವಣ್ಣ

ಜಗದಾರಾಧ್ಯ ಬಸವಣ್ಣ। ಪ್ರಥಮಗುರು ಬಸವಣ್ಣ। ಶರಣಸನ್ನಿಹಿತ ಬಸವಣ್ಣ। ಸತ್ಯಸಾತ್ವಿಕ ಬಸವಣ್ಣ। ನಿತ್ಯ ನಿಜೈಕ್ಯ ಬಸವಣ್ಣ। ಷಡುಸ್ಥಲ ಸಂಪನ್ನ ಬಸವಣ್ಣ। ಸರ್ವಾಚಾರ ಸಂಪನ್ನ ಬಸವಣ್ಣ। ಸರ್ವಾಂಗಲಿಂಗಿ ಬಸವಣ್ಣ। ಸುಜ್ಞಾನ ಭರಿತ ಬಸವಣ್ಣ। ನಿತ್ಯ ಪ್ರಸಾದಿ ಬಸವಣ್ಣ। ಸಚ್ಚಿದಾನಂದ ಮೂರ್ತಿ ಬಸವಣ್ಣ। ಸದ್ಯೋನ್ಮುಕ್ತಿ ರೂಪ ಬಸವಣ್ಣ। ಅಖಂಡ ಪರಿಪೂರ್ಣ ಬಸವಣ್ಣ। ಅಕಾಯಚಾರಿತ್ರ್ಯ ಬಸವಣ್ಣ। ಅಸಾಧ್ಯ ಸಾಧಕ ಬಸವಣ್ಣ। ಅಭೇದ್ಯ ಭೇದಕ ಬಸವಣ್ಣ। ಅನಾಮಯ ಮೂರ್ತಿ ಬಸವಣ್ಣ। ಮಹಾಮನೆಯ ಮಾಡಿದಾತ ಬಸವಣ್ಣ। ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ। ಶಿವಾಚಾರದ ಘನವ ಮೆರೆದಾತ ಬಸವಣ್ಣ।।

## ಕರುಣಾಳು ಬಸವಣ್ಣ ನಿನ್ನಡಿಗೆ

ಕರುಣಾಳು ಬಸವಣ್ಣ ನಿನ್ನಡಿಗೆ ಬಾಗಿ। ಹರಸೆಂದು ಬೇಡುವೆವು ಹೇ ದಿವ್ಯ ಯೋಗಿ। ಕನ್ನಡದ ಮಣ್ಣಿನಲಿಸುಮವಾಗಿ ಅರಳಿ। ಕನ್ನಡದ ನುಡಿಗಂಪ ದಿಗಂತದಲಿ ಹರಡಿ। ಮರೆವಿನಲಿ ಮೈಮರೆತ ಮಾನವರ ಎಚ್ಚರಿಸಿ। ಅರಿವುಳ್ಳ ಶರಣರ ಕಟೆದ ರೂಹಾರಿ।।1।। ಆತ್ಮವಿಶ್ವಾಸದ ಅವಿರಳದ ಬೆಳಗಿನಲಿ। ಕ್ಷಾತ್ರತೇಜದಿ ನಡೆವ ಧೈರ್ಯವಂ ನೀಡಿ। ಮತಮೌಢ್ಯದಜ್ಞಾನ ಸಂಕೋಲೆಯನೀಡಾಡಿ। ಜಾತಿಭೇಧವನಳಿದು ಎಲ್ಲರನೊಂದು ಮಾಡಿ।।2।। ದೇವನೊಬ್ಬನೆ ಎಂದು ಒತ್ತೊತ್ತಿ ಸಾರಿ। ಸ್ವಾನುಭಾವದ ಬೆಳಗ ಸುತ್ತಲೂ ಸೂರಿ। ಶಿವನ ಅಂಶವ ತಳೆದ ಮನುಕುಲವ ಮನ್ನಿಸಿ। ನವದೃಷ್ಟಿಕೋನದ ವಿಶ್ವಧರ್ಮವ ಕೊಟ್ಟ।।3।। ದೇವಪೂಜೆಯ ಒಡನೆ ನೊಂದವರ ಸಾಂತ್ವನಿಸು। ಕಾಣ್ಬದೇವರ ಬಿಟ್ಟು ಕಾಣದಕೆ ಅರಸದಿರು। ಎಂದು ಮನುಕುಲದ ಸ್ವಾತಂತ್ರ್ಯ ಸಾರಿ ಶ್ರೀ। ಗಂಧದೊಲು ಲೋಕಕಲ್ಯಾಣಕೆ ಸವೆದ।।4।।ಎನ್ನ ಬಾಳಿನ ಚಣವು ನಿನ್ನ ಸೇವೆಗೆ ಇರಲಿ। ಸನ್ನುತನೆ ಮಮ ಪ್ರಾಣ ತವ ಚರಣಸುಮಭ್ರಮರ। ನೆತ್ತರಿನ ಪ್ರತಿಬಿಂದು ತತ್ತ್ವದ ಪ್ರಸರಣಕೆ। ಸಚ್ಚಿದಾನಂದನ ಸಿರಿಕಂದ ಬಸವಣ್ಣ।।5।।

## ಸಿಂಧು ಬಲ್ಲಾಳ ಮನೆಕಟ್ಟಿ

ಸಿಂಧು ಬಲ್ಲಾಳ ಮನೆಕಟ್ಟಿ ಕೈ ಕೂಲಿಗಾರನಾಗಿ ಹೋದ। ಗಂಗೆ ವಾಳುಕರು ಮನೆಗಟ್ಟಿ ಲಿಂಗದ ಹೊಲಬ ನರಿಯದೆ ಹೋದರು। ಇವರೆಲ್ಲರು ಮನೆಯ ಮಾಡಿ ಮಹದ್ವಸ್ತುವನರಿಯದೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಸಾಯುಜ್ಯ ವೆಂಬ ಪದವಿಗೊಳಗಾದರು।।ನಿಮ್ಮ ಸಂಗನ ಬಸವಣ್ಣ ಬಂದು ಕಲ್ಯಾಣದಲ್ಲಿ ಮನೆಯ ಕಟ್ಟಿದರೆ ಮರ್ತ್ಯಲೋಕ ವೆಲ್ಲವೂ ಭಕ್ತಿ ಸಾಮ್ರಾಜ್ಯವಾಯಿತು। ಆ ಮನೆಗೆ ತಲೆಬಾಗಿ ಹೊಕ್ಕವರೆಲ್ಲರು। ನಿಜಲಿಂಗ ಲಿಂಗಫಲವ ಪಡೆದರು। ಆ ಗೃಹವ ನೋಡಬೇಕೆಂದು ನಾನು ಹಲವು ಕಾಲ ತಪಿಸಿದ್ದೆ। ಕಪಿಲಸಿದ್ಧ ಮಲ್ಲಿಕಾರ್ಜುನಾ ನಿಮ್ಮ ಶರಣ ಸಂಗನ ಬಸವಣ್ಣನ ಮಹಾಮನೆಗೆ ನಮೋ ನಮೋ ಎಂದು ಬರುತ್ತಿದ್ದೆನು।।

### ‘ಬ’ ಎಂಬಲ್ಲಿ ಎನ್ನ ಭಯವು

‘ಬ’ ಎಂಬಲ್ಲಿ ಎನ್ನ ಭಯವು ಹರಿಯಿತ್ತು। ‘ಸ’ ಎಂಬಲ್ಲಿ ಸರ್ವಜ್ಞನಾದೆನು। ‘ವ’ ಎಂಬಲ್ಲಿ ವಚಿಸುವರೆ ಚೈತನ್ಯಾತ್ಮಕನಾದೆನು॥ ಇಂತೀ ಬಸವಾಕ್ಷರ ತ್ರಯ ಎನ್ನ ಸರ್ವಾಂಗದಲ್ಲಿ ತೊಳಗಿ ಬೆಳಗುವುದ ಕಂಡು, ಆನು ನೀನು ಬಸವಾ ಬಸವಾ ಬಸವಾ ಎನ್ನುತಿರ್ದೆವಯ್ಯಾ ಗೊಹೇಶ್ವರ॥

### ಶ್ರೀ ಮಹಾ ಕಾರಣಿಕ

ಶ್ರೀ ಮಹಾ ಕಾರಣಿಕ ಪ್ರಣವ ರೂಪಿ ಬಸವ ಗುರುವೆ। ಕಾಮಿತಾರ್ಥ ಫಲವನೀವ ದೇವಕಂದ ಬಸವ ಗುರುವೆ॥ ಶಿವನ ಕುರುಣೆ ಧರಿಸಿಕೊಂಡು ಇಳೆಗೆ ಬಂದು ಬಸವ ಗುರುವೆ। ಭವದ ತಿಮಿರ ಕಳೆಯುವಂಥ ಭಾನುವಾದೆ ಬಸವ ಗುರುವೆ। ಈರು ಆರು ನೂರು ವರುಷ ನೆಡೆಯುತಿರಲು ಬಸವ ಗುರುವೆ। ಭರತ ಭೂಮಿಯಲ್ಲಿ ಮರೆವು ವ್ಯಾಪಿಸಿತ್ತು ಬಸವ ಗುರುವೆ। ವರ್ಣಭೇದ ವರ್ಗಭೇದ ತುಂಬಿ ತುಳುಕೆ ಬಸವಗುರುವ। ಪೂಣಜ್ಞಾನವೆರದ ಜನತೆ ಬಳಲುತಿತ್ತು ಬಸವ ಗುರುವೆ। ಪಂಕದಲ್ಲಿ ಬಿದ್ದ ಮುಗ್ಧ ಪಶುವಿನಂತೆ ಬಸವ ಗುರುವೆ। ಶಂಕೆಯಲ್ಲಿ ಮನುಜಕುಲವು ತೊಳಲುತಿತ್ತು ಬಸವ ಗುರುವೆ॥10॥ ಮರುಕದಿಂದ ಮೇಲಕೆತ್ತಿ ಧೈರ್ಯವಿತ್ತೆ ಬಸವ ಗುರುವೆ। ಕುರುಣಹೃದಯಿ ತ್ಯಾಗಮಯೀ ಬಿರುದ ತಾಳ್ದೆ ಬಸವ ಗುರುವೆ। ಬಾಗೆವಾಡಿ ಮಾದಿರಾಜ ಮುದ್ದು ತನುಜ ಬಸವ ಗುರುವೆ। ಅಗ್ರಪುರುಷ ಶರಣಶ್ರೇಷ್ಠ ಅಂಘ್ರಿ ಪರುಷ ಬಸವ ಗುರುವೆ। ತಾಯಿಮಾದಲಾಂಬೆಯುದರದಲ್ಲಿ ಬಂದೆ ಬಸವಗುರುವೆ। ತಾಯಿ ತಂದೆ ಸಂಗನೆಂದು ಅವನಿಗೊಲಿದೆ ಬಸವ ಗುರುವೆ। ವೇದಶಾಸ್ತ್ರ ಪುರಾಣಗಳ ಒರೆಗೆ ಇಕ್ಕೆ ಬಸವಗುರುವೆ॥ ಸ್ವಾದಸಹಿತ ವಚನ ಸುಧೆಯ ಜಗಕೆ ಇತ್ತೆ ಬಸವಗುರುವೆ॥ ಕೊರಳ ಬಳಸಿ ಇದ್ದ ಜಾತಿಪಾಶ ಕಿತ್ತೆ ಬಸವ ಗುರುವೆ।ಅರಿವಿನಿಂದ ಬೆರೆದ ಧೀರ ನಿಲುವ ತಳೆದೆ ಬಸವಗುರುವೆ॥20॥ ಗಾಂಪನಂತೆ ಮೂಢತನದ ಬಲೆಗೆ ಸಿಗದೆ ಬಸವ ಗುರುವೆ। ಸಂಪ್ರದಾಯಕಿಂತ ಸತ್ಯ ಶ್ರೇಷ್ಠವೆಂದೆ ಬಸವಗುರುವೆ॥ ಹೆತ್ತ ತಾಯಿ ತಂದೆಯರನು ತೊರೆದೆ ನೀನು ಬಸವಗುರುವೆ। ಸ್ತುತ್ಯ ಮಾರ್ಗ ಹಿಡಿದು ವಿಶ್ವ ಜ್ಯೋತಿಯಾದೆ ಬಸವ ಗುರುವೆ॥ಕೂಡಲದಾ ಕ್ಷೇತ್ರದಲ್ಲಿ ತಪವಗೈದೆ ಬಸವ ಗುರುವೆ। ಹಾಡಿ ಮೆರೆದೆ ಶಿವನ ಕರುಣೆ ಧರಿಸಿಕೊಂಡು ಬಸವ ಗುರುವೆ॥ ಜಗದ ಗುರುಗಳಾರು ನಿನಗೆ ಗುರುಗಳಲ್ಲ ಬಸವ ಗುರುವೆ। ಜಗದ ಒಡೆಯ ಸಂಗಮನಾ ಕರುಣೆ ಪಡೆದೆ ಬಸವ ಗುರುವೆ। ದೇವನಾಜ್ಞೆಯ ಹೊತ್ತು ಕಲ್ಯಾಣವ ಸೇರ್ದೆ ಬಸವ ಗುರುವೆ। ಪಾವನಿಸಿದೆ ಪಾದವಿಟ್ಟು ಪುಣ್ಯಪುರುಷ ಬಸವಗುರುವೆ॥30॥ ಮಂಗಳಾತ್ಮೆ ಗಂಗಾಂಬಿಕೆ ಮಡದಿಯಾಗೆ ಬಸವ ಗುರುವೆ। ಲಿಂಗಪಥವ ಕಾರ್ಯದಲ್ಲಿ ವ್ರತವ ತೊಟ್ಟೆ ಬಸವ ಗುರುವೆ। ಜ್ಞಾನನಿಧಿ ನೀಲಾಂಬಿಕೆ ಕೈಯ ಪಿಡಿದು ಬಸವ ಗುರುವೆ। ಸನ್ನುತಾಂಗ ಶರಣನಾಗಿ ಶಿವನ ನೆರೆದೆ ಬಸವ ಗುರುವೆ॥ ಸತಿಯ ಹಿಡಿದು ಬ್ರಹ್ಮಚರ್ಯ ವ್ರತವ ತೊಟ್ಟ ಬಸವ ಗುರುವೆ। ಸತಿಯರನ್ನೆ ತಾಯಿಯೆಂದು ನಿಜವಿರಕ್ತ ಬಸವ ಗುರುವೆ॥ ಆತ್ಮ ಲೇಸು ಜಗದಲೇಸು ಮುಖ್ಯವೆಂದೆ ಬಸವ ಗುರುವೆ। ಆತ್ಮದರಿವು ಮೂಡದವನು ವ್ಯರ್ಥವೆಂದೆ ಬಸವಗುರುವೆ॥ ಮರ್ತ್ಯದೊಳಗೆ ಮಹಾಮನೆಯ ಕಟ್ಟಿ ಮೆರೆದೆ ಬಸವಗುರುವೆ। ಸತ್ಯಶೀಲರನ್ನು ನಿನ್ನ ಬಳಿಗೆ ಸೆಳೆದೆ ಬಸವ ಗುರುವೆ॥40॥ ಅನುಭವದಾ ಮಂಟಪವನು ರಚಿಸಿ ನೀನು ಬಸವ ಗುರುವೆ। ಅನುಭವವೇ ಶಿವನನೊಲಿಪ ಮಾರ್ಗವೆಂದೆ ಬಸವ ಗುರುವೆ॥ ಜನ್ಮದಿಂದ ಯಾರು ಶ್ರೇಷ್ಠರಲ್ಲವೆಂದೆ ಬಸವ ಗುರುವೆ। ಮಾನ್ಯತೆಯು ಜ್ಞಾನದಿಂದ ಎಂದು ಸಾರಿ ಬಸವ ಗುರುವೆ॥ ಅಪ್ಪಬೊಪ್ಪ ಎಂದು ಕರೆದು ಅಂತ್ಯಜರನು ಬಸವ ಗುರುವೆ। ಒಪ್ಪವಾದ ಬಾಳನಿತ್ತು ರೂಪವಿತ್ತೆ ಬಸವ ಗುರುವೆ॥ ನಿರಾಕಾರ ದೇವನನು ಅರಿಯರೆಂದು ಬಸವ ಗುರುವೆ। ಅರುಹ ತೋರ್ದ್ವ ಕುರುಹುವನ್ನು ಕರಕೆ ಇತ್ತೆ ಬಸವ ಗುರುವೆ॥ ವಚನ ಶಾಸ್ತ್ರ ಸುಧೆಯನಿತ್ತ ಯುಗಪುರುಷಾ ಬಸವ ಗುರುವೆ। ಶುಚಿತ್ವದಾ ನವಪಥವನು ರಚಿಸಿ ಕೊಟ್ಟ ಬಸವ ಗುರುವೆ॥50॥ ಶುದ್ಧಿ ಬೇರೆ ಶುಚಿಯು ಬೇರೆ ಎಂದು ಸಾರಿ ಬಸವ ಗುರುವೆ। ಶುದ್ಧ ಗೈದೆ ಪತಿತ ಕುಲವ ದೀಕ್ಷೆ ನೀಡಿ ಬಸವ ಗುರುವೆ॥ ದಯವ ತೊರೆದರದು ಧರ್ಮವಾಗದೆಂದೆ ಬಸವ ಗುರುವೆ। ನ್ಯಾಯನಿಷ್ಠೆ ಎರಡು ಶಿವನ ನಯನವೆಂದೆ ಬಸವ ಗುರುವೆ॥ ದೇವನೊಬ್ಬ ನಾಮಹಲವು ಇದುವು ಸತ್ಯ ಬಸವ ಗುರುವೆ। ಭಾವಶುದ್ಧಿಯಿಂದ ಬೇರೆ ಮುಕ್ತಿಯಿಲ್ಲ ಬಸವ ಗುರುವೆ॥ ಕಾಯಕದಾ

ಮಾಟದಲ್ಲಿ ಕೂಟಕಂಡ ಬಸವಗುರುವೆ। ಕಾಯಕವೇ ಕೈಲಾಸ ಸೂತ್ರವಿತ್ತ ಬಸವ ಗುರುವೆ।। ಮನುಜರಲ್ಲಿ ಜಾತಿಭೇದ ಸಲ್ಲದೆನುತ ಬಸವಗುರುವೆ। ಮಾನವೀಯ ಪ್ರೇಮ ತೋರ್ದ ಶಿವಾಚಾರಿ ಬಸವ ಗುರುವೆ।।60।। ರೂಢಿಯೊಳಗೆ ಮೂಢತನವು ಕಾಡುತಿರಲು ಬಸವ ಗುರುವೆ। ದೃಢತೆಯಿಂದ ಹಿಡಿದೆ ಗಣಾಚಾರದಲಗ ಬಸವ ಗುರುವೆ। ತಾನುಭಕ್ತ ಲೋಕವೆಲ್ಲ ದೇವನೆಂದು ಬಸವ ಗುರುವೆ। ತಾನು ಉರಿದು ಬೆಳಕನಿತ್ತ ತ್ಯಾಗದೀಪ್ತಿ ಬಸವ ಗುರುವೆ।। ಕಲ್ಯಾಣದಾ ಬಿಜ್ಜರಸನ ಮಂತ್ರಿಯಾದೆ ಬಸವಗುರುವೆ। ಚಿಲ್ಲವರಿದೆ ಪವಾಡಗಳ ಜಗದ ಹಿತಕೆ ಬಸವ ಗುರುವೆ।। ಪ್ರಥಮ ಗುರುವೆ ಪ್ರಮಥ ಗುರುವೆ ಆಗದಿರು ಬಸವ ಗುರುವೆ। ಮಥನಗೈದು ಲಿಂಗವಂತ ಧರ್ಮ ಕೊಟ್ಟ ಬಸವ ಗುರುವೆ। ಸದ್ಗುರುವೇ ಮಹಾಗುರುವೆ ದೇವಗುರು ಬಸವ ಗುರುವೆ। ಚಿದ್ಗುರುವೆ ಜಗದ್ಗುರುವೆ ಪ್ರಾಣದೊಡೆಯ ಬಸವ ಗುರುವೆ।।70।। ಎಮ್ಮಗಳನು ಸಲಹಲಿಕ್ಕೆ ಮಣಿಹ ಹೊತ್ತೆ ಬಸವ ಗುರುವೆ। ಗಮ್ಯನಯ್ಯ ನೀನು ಭಕುತಿ ಅಸ್ತ್ರವಿರಲು ಬಸವ ಗುರುವೆ।। ಲಕ್ಷಯೋನಿಯೊಳಗೆ ನಾನು ತಿರುಗಿ ಬಂದೆ ಬಸವ ಗುರುವೆ। ರಕ್ಷಿಸಯ್ಯ ಜೀಯ ಎಂದು ಪಾದಹಿಡಿದೆ ಬಸವ ಗುರುವೆ।। ಮರಳಿ ಮರಳಿ ಬರಲು ಆರೆ ಮರೆವಿನಲ್ಲಿ ಬಸವ ಗುರುವೆ। ಕರುಣೆ ತೋರಿ ಬೆಳಗನಿತ್ತು ಮುಂದೆ ನಡೆಸು ಬಸವ ಗುರುವೆ।।ಸಕಲಶಕ್ತಿ ನೀನೆ ಎಂದು ಪಾದಕೊಲಿದೆ ಬಸವ ಗುರುವೆ। ಕಾಕು ಗುಣದ ಕೊಳೆಯ ಕಳೆದು ಶೋಕಹರಿಸು ಬಸವ ಗುರುವೆ।। ಹೃದಯ ಬಟ್ಟಲಲ್ಲಿ ಭಕ್ತಿ ರಸವ ತುಂಬು ಬಸವ ಗುರುವೆ। ಸ್ವಾದ ಸವಿಯಲಿಕ್ಕೆ ಒಡೆಯ ನೀನು ಬಾರೊ ಬಸವ ಗುರುವೆ।।80।। ಬೆಳೆವ ಹೃದಯದೊಳಗೆ ಇರುವ ಕಳೆಯ ತೆಗೆಯೊ ಬಸವ ಗುರುವೆ। ಸುಳಿಯರಳಿಸಿ ಬೆಳೆಸುತದನು ಫಲವ ಕೊಡಿಸೊ ಬಸವ ಗುರುವೆ।। ಮನದ ಮಲಿನ ಪಾತ್ರೆಯನ್ನು ತೊಳೆಯೊ ನೀನು ಬಸವ ಗುರುವೆ। ಊನವಿಲ್ಲದಮಲ ಕರುಣೆ ಪೂರಯಿಸೋ ಬಸವ ಗುರುವೆ।। ಅತ್ತಲಿತ್ತ ಹರಿಯದಂಥ ಚಿತ್ತ ನೋಡೊ ಬಸವ ಗುರುವೆ। ಮುತ್ತಿನಂಥ ಮನವನಿತ್ತು ಎತ್ತಿ ಕೊಳ್ಳೊ ಬಸವ ಗುರುವೆ।। ಗುರುವು ನೀನು ನರನು ನಾನು ಶಿವನ ತೋರೋ ಬಸವ ಗುರುವೆ। ಪರಮ ಪುಣ್ಯ ಪುರುಷ ನೀನು ದಿವ್ಯಯೋಗಿ ಬಸವ ಗುರುವೆ।। ಎನ್ನ ಕರ್ಣದಲ್ಲಿ ತುಂಬು ನಿನ್ನ ನಾಮ ಬಸವ ಗುರುವೆ। ಮುನ್ನ ತೊಡೆಯುತೆನ್ನ ತಪ್ಪ ಚಿನ್ನ ಮಾಡೊ ಬಸವ ಗುರುವೆ।।90।।ನಿನ್ನ ಕರುಣೆಯನ್ನು ಇತ್ತು ಎನ್ನ ಕಾಯೊ ಬಸವ ಗುರುವೆ। ಅನತವಾಗದಂಥ ಹಮ್ಮು ಈಯದಿರೋ ಬಸವಗುರುವೆ।। ನಿನ್ನ ನಾಮ ಪಠಿಸುತಿರಲು ಭವವು ಎಲ್ಲಿ ಬಸವ ಗುರುವೆ। ಬನ್ನ ಓಡಿ ಭಕ್ತಿ ತುಂಬಿ ಶಿವವು ಎಲ್ಲ ಬಸವ ಗುರುವೆ।। ವಿಳಾಸವಾದೆ ಸರುವವ್ಯಾಪ್ತಿ ಪರಮನಿಗೆ ಬಸವ ಗುರುವೆ। ಕಳುಹೆ ನಿನಗೆ ಬಿನ್ನಹವನು ದೇವನೊಲಿದ ಬಸವ ಗುರುವೆ।। ಆರುಹಂತವೇರಿ ನೀನು ಐಕ್ಯನಾದೆ ಬಸವ ಗುರುವೆ। ಧಾರುಣಿಯನು ಸಲಹಲಿಕ್ಕೆ ಭಕ್ತನಾದೆ ಬಸವ ಗುರುವೆ।। ಪಂಚಪುರುಷ ಸಿದ್ಧಿ ಪಡೆದ ಸಾರ್ವಭೌಮ ಬಸವ ಗುರುವೆ। ಮಿಂಚುತಿರುವೆ ಬೆಳಕಾಗಿ ಎಮ್ಮ ಮನದಿ ಬಸವ ಗುರುವೆ।।100।। ಮಂತ್ರ ಪುರುಷ ತಂತ್ರಸಾರ ಭ್ರಾಂತಿದೂರ ಬಸವ ಗುರುವೆ। ಮಂಥುವನು ಹರಿವ ಪ್ರಣವ ಶಕ್ತಿ ನೀನು ಬಸವ ಗುರುವೆ।। ನಿತ್ಯವಾದ ವಿಶ್ವಧರ್ಮ ಲೋಕಕಿತ್ತೆ ಬಸವ ಗುರುವೆ। ಸತ್ತು ಚಿತ್ತಾನಂದ ಪ್ರಿಯೆ ಮಾತೆಗೊಲಿದ ಬಸವ ಗುರುವೆ।। ಬಸವ ಅರಸ ಬಸವ ಲಿಂಗ ಬಸವ ಪ್ರಭುವೆ ಪಾಹಿಮಾಂ।। ಬಸವ ತಂದೆ ಬಸವ ಬಂಧು ಬಸವ ಗುರುವೆ ರಕ್ಷಮಾಂ।। ಬಸವ ಗುರುವೆ ಬಸವ ಗುರುವೆ ಬಸವ ಗುರುವೆ ಪಾಹಿಮಾಂ। ಬಸವ ಗುರುವೆ ಬಸವ ಗುರುವೆ ಬಸವ ಗುರುವೆ ರಕ್ಷಮಾಂ।।108।।ಬಸವ ನಾಮಾಮೃತವು ನಿತ್ಯದಿ ಪೊಸೆದು ನಾಲಿಗೆ ಮೇಲೆ ನೆಲೆಸಿರೆ। ಯಶದಿ ಹರಿವುವು ಕರ್ಮಬಂಧನ ಭೀತಿ ಮೃತ್ಯುಗಳು। ನಾಶವಪ್ಪನು ಭವದ ಶತ್ರುವು ಈಶನೊಲಿಮೆಯು ಹರಿದುಬಪ್ಪುದು। ಶಾಶ್ವತದ ಸುಖ ಸಿದ್ಧಿಯಹುದೈ ಬಸವನೆಂದೆನಲು।।

**ಬಸವ ಗಣಾಧಿಪತೇ ನಮೋ ಗುರು** **ರಾಗ: ಕಾಮಾಚ್‌-ಆದಿತಾಳ**

ಬಸವ ಗಣಾಧಿಪತೇ ನಮೋ... ಗುರು। ಅಸಮನಯನ ಸಮಯ ಶರಧಿ ವಿಧುಗುರು।।ಪ।। ನಿತ್ಯ ನಿರಾಮಯ ನಿರುಪಮ ನಿರ್ಗುಣ। ಮೃತ್ಯು ವಿಜಯ ಪರಮಾರ್ಥ ಚರಿತ ಗುರು।।1।। ಭಕ್ತನಿಧಾನಿ ವಿರಕ್ತಿ ಸುಪೂಜಿತ। ಮುಕ್ತಿದಘನಮಠ ಕರ್ತ ಪರಮ ಗುರು।।2।।

### ಜಯತು ಜಯತು ಬಸವ ಗುರೋ

ಜಯತು ಜಯತು ಬಸವ ಗುರೋ ಭಕ್ತ ಬಂಧೋ ಪಾಹಿಮಾಂ। ಕರುಣ ಹೃದಯ ತ್ಯಾಗಮಯ ಶರಣಲೋಲ ರಕ್ಷಮಾಂ॥ಪ॥ ದೇವಸುತ ಕಾರಣಿಕ ಪ್ರಣವರೂಪಿನ್ ಪಾಹಿಮಾಂ। ಭಾವಜಹರ ಭವದೂರಕ ಶಕ್ತಿಯುಕ್ತ ರಕ್ಷಮಾಂ। ಭ್ರಾಂತಿರಹಿತ ಭಕ್ತಿ ಸಹಿತ ಶರಣಪ್ರೀತ ಪಾಹಿಮಾಂ। ಸ್ಫೂರ್ತಿದಾತಃ ಕೀರ್ತಿಭರಿತಜ್ಞಾನಮೂರ್ತೇರಕ್ಷಮಾಂ॥1॥ ಅಭಯ ಹಸ್ತ ಶುಭದಾಯಕ ಮಂತ್ರಪುರುಷ ಪಾಹಿಮಾಂ। ಸುಭಗಗಾತ್ರ ಪರಮ ತೃಪ್ತ ಶಾಂತಮೂರ್ತೇ ರಕ್ಷಮಾಂ। ನಿರ್ಮಲಾಂಗ ಕರ್ಮರಹಿತ ಯೋಗಿರಾಜ ಪಾಹಿಮಾಂ। ಸೌಮ್ಯಲಾಸ್ಯ ವದನಸಹಿತ ನಮ್ರಮೂರ್ತೇ ರಕ್ಷಮಾಂ। ಸಾಮ್ಯವಾದಿನ್ ಕ್ರಾಂತಿನಿಧೇ ದಲಿತ ಪ್ರೀತ ಪಾಹಿಮಾಂ। ಧೀಮನ್ನ ತೇ ಸತ್ಯಜ್ಯೋತಿಃ ತತ್ತ್ವನಿಷ್ಠ ರಕ್ಷಮಾಂ। ಕರ್ಮಹರಣ ಚರಣಯುಕ್ತ ಶಿವನಯನ ಹೇ ಪಾಹಿಮಾಂ। ಸಚ್ಚಿದಾನಂದಸುತ ಬಸವ ಗುರೋ ರಕ್ಷಮಾಂ॥3॥

## 16. ಶ್ರೀ ಶಂಕರಾಚಾರ್ಯರ ಜಯಂತಿ

### ಶ್ರೀ ಶಂಕರಾಚಾರ್ಯ ನವಾವತಾರಂ

ಶ್ರೀ ಶಂಕರಾಚಾರ್ಯ ನವಾವತಾರಂ। ವೇದಾಂತ ಶಾರೀರಕ ಭಾಷ್ಯಕಾರಂ। ಚಕೋರ ಚಕ್ರೋದಿಕ ಚಂದ್ರಬಿಂಬಂ ಶ್ರೀ ಶಂಕರಾಚಾರ್ಯ ಗುರುಂನ್ನಾಮಾಮಿ॥

### ಆದಿಶಂಕರಾಚಾರ್ಯಂ

ಆದಿಶಂಕರಾಚಾರ್ಯಂ ಅದ್ವೈತಾನಂದ ಯೋಗಿಂ॥ಪ॥ ವೇದವೇದಾಂತ ವ್ಯಾಖ್ಯಾನ ಪ್ರವೀಣಂ। ವಿಜಯಾನಂದ ಗುರುಶಂಕರಂ॥1॥ ಶೃಂಗಗಿರಿಪುರ ನಿವಾಸಂ। ಷಣ್ಮತ ಸ್ಥಾಪನಾಚಾರ್ಯಂ। ಸಾಹಿತ್ಯ ಮನೋವಿಕಾಸಿನಿಂ। ಶಾರದಾದಾಸಿ ವಂದಿತಂ॥2॥

### ಶಂಕರ ಗುರೋ ಜಯ — ರಾಗ: ಶಂಕರಾಭರಣ

ಶಂಕರ ಗುರೋ ಜಯ ಶಂಕರ ಗುರೋ। ಶಂಕರ ಜಯ ಶಂಕರ ಶಂಕರ ಗುರೋ॥ಪ॥ ಗೀರ್ವಾಣಿ ವರ ಭಕ್ತಗುರೋ। ಜ್ಞಾನಮಾರ್ಗ ಸಿದ್ಧಾಂತ ಗುರೋ॥ ಷಣ್ಮತ ಸ್ಥಾಪಕ ಶಂಕರ ಗುರೋ। ಶೃಂಗೇರಿ ಪುರದಾಸ ಶಂಕರ ಗುರೋ॥ ತುಂಗಾತೀರ ವಿಹಾರ ಗುರೋ। ಭಕ್ತಾಭೀಷ್ಟದ ಕಲ್ಪತರೋ॥2॥

### ಶಂಕರ ಗುರುವರರ ಚರಣಾರವಿಂದಕೆ — ರಾಗ: ಹಿಂದೋಳ

ಶಂಕರ ಗುರುವರರ ಚರಣಾರವಿಂದಕೆ। ಸತತವು ಶರಣಾಗಿ ಶಿರಬಾಗು ಮನವೇ॥ಪ॥ ಅದ್ಭುತ ಸಾಧನ ರೂಪ ಜಗದ್ಗುರು। ಅಮರವಾಣಿಯ ನುಡಿಸುವ ಜಗದ್ಗುರು। ಅಮರರಾಗಿಹ ಅವತಾರಿ ಜಗದ್ಗುರು ಪಾಮರರನು ತಾ ಪೊರೆಯುವ ಜಗದ್ಗುರು॥1॥ ಆದಿ ಅನಾದಿ ಅನಂತರೂಪ ಜಗದ್ಗುರು। ಶಂಕರಾನಂದ ಭಾರತಿ ಜಗದ್ಗುರು। ಸಾಧು ರೂಪಧರ ಶಂಕರ ಜಗದ್ಗುರು। ಶಾರದ ದಾಸಿ ವಂದಿತ ಜಗದ್ಗುರು॥2॥

### ಶಂಕರ ಗುರುವರ ನೀನೇ — ರಾಗ: ಹಿಂದೋಳ

ಶಂಕರ ಗುರುವರ ನೀನೇ ಅಮರ ನಿನ್ನಲ್ಲಿ ಪ್ರಾರ್ಥಿಪೆ ಪೊರೆಯೋ ವರೇಣ್ಯ॥1॥ ಕಾಲಡಿಯಲ್ಲಿ ಹುಟ್ಟಿ ಕಾಲ್ ನಡುಗೆಯಲಿ ದೇಶ ಸುತ್ತಿದ ನಿನ್ನ ಪಾದವ ಪೂಜಿಪೆ॥2॥ ಮೂರು ಬಾರಿ ದೇಶ ಸುತ್ತಿ ನಾಲ್ಕು ಮಠವ ಮಾಡಿ ನಾಲ್ಕು ವೇದವ ನೀ ಸಾರಿದೆ ಜಗಕೆಲ್ಲ॥3॥ ಎಲ್ಲರೂ ಸಮರೆಂದು ಎಲ್ಲರಿಗೂ ಬೋಧಿಸಿದ ನಿನ್ನಂಥ ಯೋಗಿಯ ಇನ್ನೆಲ್ಲೂ ನಾ ಕಾಣೆ॥4॥ ನಿನ್ನನ್ನು ನೋಡುತಿರೆ ನಿನ್ನ ಪಾದದಡಿಯಲ್ಲಿ ನಾ ಮಾಡಿದ ಪಾಪ ಪರಿಹಾರವಾಯ್ತು ಕಾಣೋ॥5॥ ನಿನ್ನ ಶ್ಲೋಕ ಪಾಡುತಿರೆ ದಚ್ಚಣ್ಣನಿಗಾನಂದವಾಗಿ ಕಣ್ಗಳ ಬೆಳಕಿನ ಆರತಿ ಎತ್ತುವೆ॥6॥

### ಶಂಕರ ಗುರುವರ ಮಹಿಮಾ ಸುತರಾಂ

ಶಂಕರ ಗುರುವರ ಮಹಿಮಾ ಸುತರಾಂ। ಅತಿತರತಿ ವಾಜ್ಞನಸ ಸೀಮಾ। ಗುರು ಚರಣ ಭಕ್ತಿ ಗರಿಮಾ। ಮುಖರಯತಿತರಾಂಹಿ ಮೂಕ ಕಲ್ಪಂ॥1॥ ಕಲ್ಯಾಣಂ ತಲಯತುನಃ ಕಲ್ಯ ಕೈವಲ್ಯರೀ ಕಂದಂ ಕಲ್ಯಾಣ ಗುಣ ಗಣಾಢ್ಯಂ ಕಂಚನ ಕರ್ಮಂದಿರತ್ಯಮಖಿಲೇಡ್ಯ॥2॥ ಶ್ರೀಚಂದ್ರಮೌಳಿ ಚರಣಾಂ ಭೋಜದ್ವಯ ಬಂಬರಾಯಿತ ಸ್ವಾಂತಂ। ಭಯಭಕ್ತಿಭರಿತ ಭಾವೋ ಭಗವತ್ಪಾ ದಾನ್ ವಿಭಾವಯೇ ಹೃದಯೇ॥3॥ತತ್ವಮಸಿ ಬೋಧನ ಚಣೇ ತತ್ವಾದಿ ಮೋಹ ತಿಮಿರ ಖರ ಕಿರಣೇ ಭಕ್ತಜನ ಭರಣಧುರ್ಯೇ ಸತ್ತಂಚಿತ್ತಂಮಮಾಸ್ತು ಗುರುವರ್ಯೇ॥4॥ ಅಲ್ಪೀಕೃತ ಕಲ್ಪತರುಂ ವಿತರಣ ವಿಭವೇನ ವಿಶ್ವವಿದಿತೇನ ವಿಸ್ಮಯ ನೀಯೋದಂತಂ ವಿಶ್ವಗುರುಂ ತಂ ವಿಭಾವಯಾಮ್ಯತಃ॥5॥ ಶೃಂಗಗಿರಿ ದಿವ್ಯನಗರ ಸ್ಥಾಪಿತಮನವದ್ಯ ಶಾರದಾಪೀಠಂ ಸಂಪೂಜಯಂತಮನಘಂ ಸಂಸೇವೇ ಸಂಯಮೀಂದ್ರ ಮನವರತಂ॥6॥

### ಶಂಕರ ಗುರುದೇವಾ

ಶಂಕರ ಗುರುದೇವಾ ವಂದೇ ಶಂಕರ ಗುರುದೇವ॥ ಪಾವನಚರಣಾ। ತೋರೈಕರುಣಾ ಜ್ಞಾನಾಂಬುಧಿ ಪೂರ್ಣ॥ಪ॥ ನಿತ್ಯನಿರಂಜನಾ। ಸತ್ಯ ಸ್ವರೂಪ ಪ್ರತ್ಯಗಾತ್ಮನೀ। ಆನಂದ ರೂಪ॥ ನೀಡೈಘನಜ್ಞಾನಾ। ಬೋಧಾ ಬೇಡುವೆ ನಿನ್ನೊಳು ಗುರುವೇ॥1॥ ಆತ್ಮ ಸ್ವರೂಪವಾ ಬೋಧಿಸಿ ಎನ್ನಾ। ಮತ್ತ ಮಾಡಿನೀ ಗುರುದೇವಾ॥2॥ ನಾರಾಯಣನಡಿಯಾ ಸೇವಾಗೈದಿಹ ಶಂಕರ ಗುರುದೇವಾ। ವಂದೇ ಶಂಕರಗುರುದೇವಾ॥3॥

### ಶಿರಬಾಗಿ ಕೊಂಡಾಡಿ — ರಾಗ : ಆರಭಿ

ಶಿರಬಾಗಿ ಕೊಂಡಾಡಿ ಸ್ತುತಿಸುವೆ ಬೇಡುವೆ। ಶ್ರೀಗುರುಶಂಕರಾರ್ಯರಾ। ಪಾದಾಬ್ಜವಾ॥ಪ॥ ಕಾಮಿತಾರ್ಥವನಿತ್ತೂ। ಪ್ರೇಮದಿಂ ಸಲಹುವಾ ಆ ಮಹಿಮಗುಣಧಾಮರಾ॥1॥ ಚಿನ್ಮಯಚಂದ್ರಮೌಳೀಶ್ವರ ಪೂಜಿತಾರಾದಾ। ಶಣ್ಮತಸ್ಥಾಪನಾಚಾರ್ಯರಾ॥2॥ ಸುರಚಿರ ಶೃಂಗೇರಿ ಪುರದೊಳ್ ಮೆರೆಯುವಾ। ಚಂದ್ರಶೇಖರ ಭಾರತಿ ಪ್ರೀತರ॥3॥

### ಆರತಿಯ ಬೆಳಗುವೆವು (ಆರತಿ) — ರಾಗ: ಸುರುಟಿ

ಆರತಿಯ ಬೆಳಗುವೆವು ಶಂಕರಾಚಾರ್ಯರಿಗೆ॥ಪ॥ ಆರತಿಯ ಬೆಳಗುವೆವು। ಕಾಲಟಿಯೊಳುದ್ಭವಿಸಿ ಮಕರಿ ಕೈಯೊಳು ಸಿಕ್ಕಿ। ಮಾತೆ ಯಾಜ್ಞೆಯ ಪಡೆದು ಯತಿಯಾದ ನಿಮಗೆ॥ಅ.ಪ॥ ಕೊರಳೊಳಗೆ ರುದ್ರಾಕ್ಷಿ ಕರದಿ ಭಸ್ಮವ ಧರಿಸಿ। ಕಲಿಯುಗದೊಳವತರಿಸಿ ಶಂಭು ಶಂಕರನೆನಿಸಿ। ಮಂಡನಲಿವಾದಿಸಿ ಖಂಡಿಸಿದನದ್ವೈತ ಮೂರುತಿ। ನಿಮಗೆ ಮುದದಿಂದ ಬೆಳಗುವೆವು॥1॥ ಕೆಟ್ಟ ವಾದಿಗಳಟ್ಟಿ ಜೈಸಿದ್ಯೆ ವಾಣಿಯನು। ಸಾಧುಸಜ್ಜನ ಪ್ರಿಯ ಶ್ರೀಶಂಕರಾಚಾರ್ಯ। ಶರಣು ಬಂದಿಹ ಎನ್ನ ನುಡಿಯನಾಲಿಸು ಎಂದು। ಭಕ್ತಿಯಿಂದ ಬೆಳಗುವೆವು ಶೃಂಗೇರಿ ಪುರವಾಸ॥2॥

### ಮಂಗಳ ಗುರುವರ್ಯಾ (ಮಂಗಳ) — ರಾಗ: ಸುರುಟಿ

ಮಂಗಳ ಗುರುವರ್ಯಾ ಜಯ ಜಯ ಶಂಕರ ಯತಿವರ್ಯ। ತುಂಗಭದ್ರೆಯ ತೀರದಿ ಶೋಭಿಪ ಶೃಂಗಗಿರಿಯೊಳು ನೆಲಸಿದ ಮಹಿಮನೆ॥ಪ॥ ವೈದಿಕಧರ್ಮವನು ಧರೆಯೊಳು ಮೋದದಿ ಸಲಹೆನುತ ಆದಿತೇಯರು ದೈನ್ಯದಿ ಬೇಡಲು ತಾ। ಮೇದಿನಿಯೊಳು ನರರೂಪಿನೊಳುದಿಸಿದೆ ॥1॥ ಬ್ರಹ್ಮಕುಲದಿ ಜನಿಸಿ ತಂದೆ ಬ್ರಹ್ಮ ಪದವಿ ಕೊಡಿಸಿ। ಬ್ರಹ್ಮಚರ್ಯದಿ ಯತಿಪತಿಯಾಗುತ ಬ್ರಹ್ಮನ ಗುರುಗೋವಿಂದನೊಳುದಿಸಿದೆ॥2॥ ಕಾಶಿಯಸೇರುತಲಿ ವರ ವಿಶ್ವೇಶ್ವರನ ಮೆಚ್ಚಿಸುತಾ। ವ್ಯಾಸವಿರಚಿತ ಸೂತ್ರಕೆ ಭಾಷ್ಯವ। ಲೇಸನೆ ರಚಿಸುತ ಕೀರ್ತಿಯ ಗಳಿಸಿದೆ॥3॥ ವೇದಮತವಗೆಲಿದು ಧರೆಯೊಳು ವೇದಮತವ ಪೊರೆದು। ವಾದದಿ ಮಂಡನಮಿಶ್ರನ ಜಯಿಸುತೆ। ಮೋದದಿ ವಾಣಿಯ ನರಗೆಲಿದಾತನೆ॥4॥ ಭೂಸುರರಿಗೆ ಒಲಿದು ವರಕಾಶ್ಮೀರದೆ ಪೀಠವನು। ಏರುತ ಶಿಷ್ಯರು ನಾಲ್ವರ ಸಲಹಿದ।

ಭೂರಿಮಹಿಮ ಶ್ರೀಕಂಠನೆ ಜಯ ಜಯ।।5।।



## 17. ಶ್ರೀ ರಾಮಾನುಜಾಚಾರ್ಯರ ಜಯಂತಿ

### ಜಯಜಯ ಯತಿಸಾರ್ವಭೌಮಾ (ಶ್ರೀಭಗವದ್ರಾಮಾನುಜ ಸುಪ್ರಭಾತಂ)

ಜಯ ಜಯ ಯತಿಸಾರ್ವಭೌಮಾ ಮಲಸ್ವಾಂತ ತುಭ್ಯಂ ನಮೋ ಜಯ ಜಯ ಜನಿಸಿಂಧು ಮಗ್ನಾತ್ಮ ಸಂತಾರಕ ಗ್ರಾಮಣೀಃ। ಜಯ ಜಯ ಭಜನೀಯ ಕೂರೇಶಮುಖ್ಯೈಃ ಪ್ರಸೀದಪ್ರಭೋ। ಜಯ ಜಯ ವಿದುಷಾಂ ನಿಧೇ। ಜಾಗೃಹಿ ಶ್ರೀನಿಧೇ। ಜಾಗೃಹಿ।।1।। ಪೂರ್ಣಾರ್ಯ ಪೂರ್ಣಕರುಣಾ ಪರಿಲಬ್ಧ ಬೋಧ। ವೈರಾಗ್ಯ ಭಕ್ತಿಮುಖ ದಿವ್ಯಗುಣಾಮೃತಾಬ್ಧೇ। ಶ್ರೀಯಾಮುನಾರ್ಯ ಪದಪಂಕಜ ರಾಜಹಂಸ। ರಾಮಾನುಜಾರ್ಯ ಭಗವನ್। ತವ ಸುಪ್ರಭಾತಂ।।2।। ಆನೇತುಮದ್ಯವರದಸ್ಯ ಗಜಾದ್ರಿಭರ್ತುಃ। ಪಾನೀಯಮಚ್ಛಮತಿ ಶೀತಮಗಾಧಕೂಪಾತ್। ಧ್ವಾಂತಂ ನಿರಸ್ತಮರುಣಸ್ಯ ಕರೈಸ್ಸಮಂತಾತ್। ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ।।3।। ಶ್ರೀರಂಗ ರಾಜಪದಪಂಕಜ ಯೋರಶೇಷ। ರೈಂಕರ್ಯಮಾಕರಯಿತುಂ ಸಕುತೂಹಲಸ್ತ್ವಂ। ಉತ್ತಿಷ್ಠ ನಿತ್ಯವಿಧಿ ಮಪ್ಯಖಿಲಂಚಕರ್ತುಂ। ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ।।4।। ತ್ವಾಂ ವೀಕ್ಷಿತುಂ ಸಮುಪಯಾತಿ ವೃಷಾಚಲೇಂದ್ರಃ। ತ್ವತ್ಸಂಪ್ರಕ್ಲ್ಪ್ತವರಶಂಖ ರಥಾಂಗಪಾಣಿಃ। ಸಂಯೋಜಿತಾಮುರಸಿಮಾಂ ಭವತೈವ ಬಿಭ್ರತ್। ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ।।5।। ಶ್ರೀಮತ್ಕುರಂಗಪರಿಪೂರ್ಣ ವಿಭುಸ್ತ್ವದುಕ್ತಂ। ಶ್ರೀಭಾಷ್ಯಶಾಸ್ತ್ರಮಮಲಂ ತ್ವಯಿ ಭಕ್ತಿಯುಕ್ತಃ। ಶ್ರೋತುಂ ಸಮಿಚ್ಛತಿ ಯತೀಂದ್ರ । ಸಿತೋರ್ಧ್ವಪುಂಡ್ರಃ ತಂ ಬೋಧಯಾರ್ಥಮಖಿಲಂ ತವ ಸುಪ್ರಭಾತಂ।।ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ।।6।। ಶ್ರೀ ಭಾಷ್ಯಮಾಲಿತ್ವ ಮಾತ್ತವಿಶಾಲಲೇಖ್ಯಃ। ಶ್ರೀವತ್ಸಚಿಹ್ನಗುರುರಾನತದಿವ್ಯಗಾತ್ರಃ। ವೇದಾಂತಸೂತ್ರ ಮಪಿವಕ್ತು ಮಮುಷ್ಯಸರ್ವಂ। ಉತ್ತಿಷ್ಠ ಲಕ್ಷ್ಮಣಮುನೇ। ತವ ಸುಪ್ರಭಾತರಂ।। ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ।।7।। ಶ್ರೀ ಮಾನ್ಸಪೂರ್ಣವಟುರಾದರತಃ ಪ್ರಗೃಹ್ಯ ಶ್ರೀಪಾದುಕಾಂ ಯತಿಪತೇ ಪದಯೋಃ ಪ್ರಯೋಕ್ತುಂ। ದ್ವಾರಿಸ್ಥಿತಿಂ ವಿತನುತೇ ಪ್ರಣತಾರ್ತಿಹಾರಿನ್। ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ।।8।। ಕಾಷಾಯವಸ್ತ್ರ ಕಟಿಸೂತ್ರಕಮಂಡಲೂಶ್ಚ ಶ್ರೀದಂತಕಾಷ್ಠಮಪಿ ದೇಶಿಕ ಸಾರ್ವಭೌಮಾಃ। ಪಾಣೌನಿಧಾಯ ನಿವಸಂತಿ ವಿಶುದ್ಧಗಾತ್ರಾಃ। ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ।।9।। ತ್ವಾಂ ಬೋಧಯಂತಿಗುರವಃ ಪ್ರಥಿತಾಮಹಾಂತಃ। ಶ್ರೀವೈಷ್ಣವಾಶ್ಚ ಯಮಿನಸ್ತವ ಪಾದಭಕ್ತಾಃ। ಏಕಾಂತಿನಶ್ಚ ವಿಮಲಾಸ್ತ್ವದನನ್ಯ ಭಾವಾಃ। ತಾನ್ಪಾಲಯೋದ್ಯಯತಿಶೇಖರ ಸುಪ್ರಭಾತಂ।।10।। ಬ್ರಾಹ್ಮೇ ಪ್ರಬುಧ್ಯ ವಿಬುಧಾಸ್ಸ್ವ ಗುರೂಸ್ಪ್ರಣಮ್ಯ। ರಾಮಾನುಜಾಯ ನಮ ಇತ್ಯಸಕೃತ್ ಬ್ರುವಾಣಾಃ। ಅಷ್ಟಾಕ್ಷರಂ ಸಚರಮಂ ದ್ವಯಮುಚ್ಚರಂತಿ।ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ।।11।। ಪ್ರಾತಃ ಪಠಂತಿ ಪರಮದ್ರವಿಡ ಪ್ರಪನ್ನದಾಯತ್ರಿ। ಮಂತ್ರಶತಮಷ್ಟಶಿರಸ್ಕಮಚ್ಛಂ। ಶ್ರೀವೈಷ್ಣವಾಸ್ತವಪದಾಬ್ಜ ನಿವಿಷ್ಟಭಾವಾಃ। ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ।।12।। ಆರಾಧನಂ ರಚಯಿತುಂ ಕಮಲಾಸಖ್ಯಸ್ಯ। ಶ್ರೀಯಾದವಾಚಲಪ ತೇರ್ವಿವಿ ಧೋಪಚಾರೈ। ಪಾತುಂ ಚದೃಷ್ಟಿಕಮಲೇನ ನತಾನ ಶೇಷಾ। ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ।।13।। ಸಂಸೇವ್ಯಸಪ್ತ ಶತಸಂಯಮಿ ಸಾರ್ವ ಭೌಮ್ಯೈ। ಸದೇಶಿಕೈಸ್ಸಕಲಶಾಸ್ತ್ರವಿದಾಂ ವರಿಷ್ಠೈಃ। ಏಕಾಂತಿಭಿಃ ಪರಮಭಾಗವತೈರ್ನಿಷೇವ್ಯ। ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ।।14।। ಗದ್ಯತ್ರಯಂ ನಿಗಮಶೇಖರ ದೀಪಸಾರೌ। ವೇದಾರ್ಥ ಸಂಗ್ರಹಮಪಿ ಪ್ರಥಿತಂ ಚ ನಿತ್ಯಂ। ಗೀತಾರ್ಥ ಭಾಷ್ಯಮಪಿ ದೇಶಿಕ ಪುಂಗವಾನಾಂ। ದಾತುಂ ಪ್ರಸೀದ ಯತಿಶೇಖರ ಸುಪ್ರಭಾತಂ।।15।। ಪಾದಾಂಬುಜಂ ಯತಿಪತೇ ಶರಣಂ ವಿಹರ್ತುಂ। ಸಂಗತ್ಯ ಸಂಸರಣವಾರಿಧಿಲಂಘನೋತ್ಕಾಃ। ಆಯಾಂತಿ ಹಸ್ತಕಮಲಾಭಿಧೃತೋಪ ಚಾರಾಃ। ತಾನ್ಪಾಹಿ ತೇ ಕರುಣಯಾ ತವ ಸುಪ್ರಭಾತಂ।।16।। ಸ್ನಾತುಂ ಕವೇರತನಯಾಸಲಿಲೇಷು ಶಿಷ್ಯೈಃ। ಆಚಾರ್ಯಪೂರುಷವರುಷವರೈರ್ಯತಿ ಭಿರ್ವಿಶುದ್ಧೈಃ। ಶ್ರೀವೈಷ್ಣವೈಶ್ಚ ಸಹಸೇವ್ಯ ಮಹಾನುಭಾವೈಃ। ರಾಮಾನುಜಾರ್ಯ ಭಗವನ್ ತವ ಸುಪ್ರಭಾತಂ।।17।। ರಾಮಾನುಜಾರ್ಯ ರಮಣೀಯಗುಣಾಭಿ ರಾಮ। ರಾಗಾದಿದೂರಗ ಗುರೋ ಗುರು

ಸಾರ್ವಭೌಮ। ಸತ್ವಪ್ರಧಾನ ಶರಣಾಗತವತ್ಸಲತ್ವ। ತ್ವತ್ಪಾದಾಬ್ಜಯೋರಿಹ ಪರತ್ರಜ ಕಿಂಕರಸ್ಯಾಂ॥18॥ ॥ಇತಿ ಶ್ರೀ ಭಗವದ್ರಾಮಾನುಜ ಸುಪ್ರಭಾತಂ ಸಮಾಪ್ತಂ॥

### ಯೋ ನಿತ್ಯಮಚ್ಯುತ ಪದಾಂಬುಜ

ಯೋ ನಿತ್ಯಮಚ್ಯುತ ಪದಾಂಬುಜ ಯುಗ್ಮರುಕ್ಮವ್ಯಾಮೋಹತಸ್ತದಿತರಾಣಿ। ತೃಣಾಯ ಮೇ ನೇ। ಅಸ್ಮದ್ಗುರೋರ್ಭಗ ಎತೋಸ್ಯ ದಯೈಕ ಸಿಂಧೋ। ರಾಮಾನುಜಾಸ್ಯಾ ಚರಣೌ ಶರಣಂ ಪ್ರಪದ್ಯೇ॥

### ವಂದೇ ಶ್ರೀರಾಮಾನುಜಾಚಾರ್ಯಂ — ರಾಗ: ತೋಡಿ

ವಂದೇ ಶ್ರೀರಾಮಾನುಜಾಚಾರ್ಯಂ। ವಂದೇ ವಿಶಿಷ್ಟಾದ್ವೈತಾಚಾರ್ಯಂ॥ಪ॥ ಮಂದಹಾಸಯುತ ಮುಖಾರವಿಂದಂ। ಇಂದಿರ ರಮಣ ಪದಾಂಬುಜ ವೃಂದಂ। ಶ್ರೀತ ವಸ್ತ್ರಾಂಕಿತ ಶಂಖಚಕ್ರ ತನುಂ। ಖ್ಯಾತ ಚತುರ್ವೇದ ಸಾರಪ್ರಬಂಧಂ॥1॥ ದಂಡ ಕಮಂಡಲಂ ಕಾಷಾಯಾಂಬರಂ। ಶಂಕರಾನಂದಸುತ ಯತಿವರ ಮಣಿಂ। ವೀತರಾಗಮತಿ ಪ್ರಶಾಂತ ಹೃದಯಂ। ಸಾಧಿತ ಸಾಯುಜ್ಯ ಪದವೀ ನಿಲಯಂ॥2॥

### ಶ್ರೀರಾಮಾನುಜ ಚರಣಾಂಭೋರುಹ (ಕೀರ್ತನೆ) — ರಾಗ: ರಂಜನಿ

ಶ್ರೀರಾಮಾನುಜ ಚರಣಾಂಭೋರುಹ ಶಿರಸಾ ನಮಾಮ್ಯಹಂ ಶುಭಕರ ಚರಿತಂ॥ಪ॥ ಪರಮ ಪುರುಷ ಆದಿಶೇಷಧರ ವೇಷಾ। ಪರಮ ವಿಶಿಷ್ಟಾದ್ವೈ ೃತ ಸಾರಿ ಸುಭೋಧಂ॥ಅ.ಪ.॥ ಉಭಯ ಕಾವೇರಿ ರಂಗಪುರನಿವಾಸಂ। ಅಭಯಪ್ರದಾಯಕ ಆನಂದ ಭಾಸಂ। ಶ್ರೀವೈಷ್ಣವಕುಲ ಜನನಿಧಿ ಸ್ತೋಮಂ। ಶ್ರೀವರ ಮೀನಾಕ್ಷಿಸುತ ವಿನುತಂ॥ಚರಣ॥

### ಭಜ ಯತಿರಾಜಂ ಭಜ ಯತಿರಾಜಂ

ಭಜ ಯತಿರಾಜಂ ಭಜ ಯತಿರಾಜಂ ಭಜ ಯತಿರಾಜಂ ಭವಭೀರೋ। ಭಜ ಯತಿರಾಜಂ ಭವ ಯತಿರಾಜಂ ಭಜ ಯತಿರಾಜಂ ಭವಭೀರೋ॥ ಶ್ರೀರಂಗೇಶಜಯಾಶ್ರಯಕೇತುಃ ಶ್ರೀತಜನಸಂರಕ್ಷಣ ಜೀವಾತುಃ ಭವಭಯ ಜಲಧೇರೇಷ ಹಿ ಸೇತುಃ। ಪದ್ಮಾನೇತುಃ ಪ್ರಣತೌ ಹೇದುಃ॥1॥ ಆದೌ ಜಗದಾಧಾದರಶ್ಶೇಷಃ ತದನುಸುಮಿತ್ರಾನಂದನವೇಷಃ। ತದುಪರಿಧೃತಹಲ ಮುಸಲವಿಶೇಷಃ ತದನಂತರ ಮಭವದ್ಗುರುರೇಷಃ॥2॥ ನಷ್ಟೇ ನಯನೇ ಕಸ್ಯಾಲೋಕಃ ಚಿತ್ತೇ ಮತ್ತೇ ಕಸ್ಯ ವಿವೇಕಃ। ಕ್ಷೀಣೆ ಪುಣ್ಯೇ ಕಸ್ಸುರಲೋಕಃ ಕಾಮೇ ಧೂತೇ ಕಸ್ತವಶೋಕಃ॥3॥ ಮನ್ತ್ರದ್ರವ್ಯವಿಶುದ್ಧೋ, ಯಾಗಃ ಸರ್ವಾರಂಭವಿರಾಗಸ್ತ್ಯಾಗಃ। ಕರ್ತುಂ ಶಕ್ಯೋ ನ ಕಲೌ ಯೋಗಃ ಕಿಂತು ಯತೀಶಗುಣಾ ಮೃತಭೋಗಃ॥4॥ ಮನುಜಪತಿಂ ವಾ ದಿಗಧಿಪತಿಂ ವಾ ಜಲಜಭವಂ ವಾ ಜಗದಧಿಪಂ ವಾ। ಮಮತಾऽಹಂಕೃತಿಮಲಿನೋ ಲೋಕಃ ನಿಂದತಿ ನಿಂದತಿ ನಿಂದತ್ಯೇವ॥5॥ ಪಾಪಹತೋ ವಾ ಪುಣ್ಯಯುತೋ ವಾ ಸುರನರತಿರ್ಯಗ್ಜಾತಿಗತೋ ವಾ। ರಾಮಾನುಜಪದ ತೀರ್ಥಾನ್ಮುಕ್ತಿಂ ವಿಂದತಿ ವಿದಂತಿ ವಿಂದತ್ಯೇವ॥6॥ ಕಾಷಾಯಾಂಬರಕವಚಿತಗಾತ್ರಂ ಕಲಿತಕ ಮಣ್ಡಲುದಣ್ಡ ಪವಿತ್ರಮ್। ವಿಧೃತಶಿಖಾಹರಿಣಾಜಿನಸೂತ್ರಂ। ವ್ಯಾಖ್ಯಾತದ್ವೈಪಾಯನ ಸೂತ್ರಮ್॥7॥ ಸಂತ್ಯಜ ಸಕಲಮುಪಾಯಾಚರಣಂ ವಜ್ರ ರಾಮಾನುಜಚರಣೌ ಶರಣಮ್। ಪಶ್ಯಸಿ ತಮಸಃ ಪಾರಂ ನಿತ್ಯಂ ಸತ್ಯಂ ಸತ್ಯಂ ಪುನರಪಿಸತ್ಯಮ್॥8॥

### ಮತವೇ ಒಳ್ಳೆಯದು — ರಾಗ : ನಾಟಿ, ತಾಳ: ಝಂಪೆ

ಮತವೇ ಒಳ್ಳೆಯದು। ಭಾಗವತವು ನಮ್ಮ ಯತಿ ರಾಮಾನುಜ ಎಂಬ। ಬೇರೆ ಮನಸಿನ ಮತವೇ ಒಳ್ಳೆಯದು॥ಪ॥ ಹರಿದಾಸ ಸರ್ವೇಶತಗೆ ನಿಮ್ಮ ವೇಷಾ। ತೊರೆಯಿರಿ ನಿಮ್ಮ ದೋಷಾ। ವರ ತೀರ್ಥ ಪ್ರಸಾದವೇ ಪರಗತಿ ಎಂಬ ದಾಸ॥1॥ ಕಲಿಯೇ ಶಿಕ್ಷರ ಮಣಿಯೇ ಮೋಕ್ಷದರ । ಜಿನಿಯೇ ನಿಮ್ಮ ಶ್ರೀಮಣಿ। ತಿರುಮಂತ್ರವೇ ಕಟಿ ಎಂಬ

ದಾಸ॥2॥ ಹರಿದಾರಿ ತಿರುಕಾವಲೂರಿನ। ಪರಮ ಪದವೆಂಬ ಪಟ್ಟಣ। ಸೇರಿ ನಮ್ಮ ನೆಲೆಯಾದಿಕೇಶವ। ಸಿರಿರಂಗ ಪರರುಪಕಾರಿ॥3॥

**ಎನ್ನ ಕೊನೆ ಸಂದೇಶ** **ತಾಳ: ಸುರಭಿ, ತಾಳ: ಝಂಪೆ**

ಎನ್ನ ಕೊನೆ ಸಂದೇಶ ಕೇಳಿರಿ ಶಿಷ್ಯರೆ। ಚೆನ್ನು ಭಗವಂತನ ಆರಾಧಿಸಿರಿ ಭಕುತರೇ॥ಪ॥ ದೇವರನು ನಂಬಿ ದೇವರ ಮಹಿಮೆ ನಂಬಿ। ಆಚಾರ್ಯರ ನಂಬಿ ಭಾಗವತರನು ನಂಬಿ॥ಅ.ಪ.॥ ಜೀವಜಗ ದೇವರಾ ಮಹಾಸೃಷ್ಟಿ ಕಾಣಿರಿ। ಸೇವೆಪೂಜೆ ಧ್ಯಾನದಲಿ ಸುಜ್ಞಾನ ಪಡೆಯಿರಿ॥1॥ ಇಂದ್ರಿಯಂಗಳ ದಾಸರಾಗುವದ ತಡೆಯಿರಿ। ಸ್ವಾರ್ಥ ಸಂಪಾದನೆಯ ಸಾಧನೆ ಹಾದಿ ಬಿಡಿರಿ॥2॥ ಪರಮಾತ್ಮ ಚಿಂತನದಿ ನಿತ್ಯ ಕಾಲ ಕಳೆಯಿರಿ। ಗುರುವ ಗುಣಕೆ ಬೆಲೆ ಕೊಡಿ ಜಾತಿಯ ಕೇಳದಿರಿ॥3॥ ನಿಮ್ಮ ಸ್ಥಿತಿ ಗತಿಕರ್ಮಾನುಸಾರ ನಡೆವುದು। ನಿಜ ಶರಣನಿಗೆ ನಾಳಿನ ಚಿಂತೆಯೇ ಸಲ್ಲದು॥4॥ ಶ್ರೀಭಾಷ್ಯವನು ಚೆನ್ನಾಗಿ ಅಭ್ಯಾಸಮಾಡಿರಿ। ಶ್ರೀವೈಷ್ಣವರಿಗದ ಚೆನ್ನ ಉಪದೇಶಿಸಿರಿ॥5॥ ಆಗದಿರೆ ಅದು ದಿವ್ಯ ಪ್ರಬಂಧ ಪಠಿಸಿರಿ। ಆಳ್ವಾರುಗಳ ದಿವ್ಯದನುಭಾವ ಪಡೆಯಿರಿ॥6॥ ಶ್ರೀರಂಗ, ತಿರುಪತಿ, ಮೇಲುಕೋಟೆಯ ನೋಡಿರಿ॥7॥ ಅದೂ ಆಗದಿರೆ ನೀವಿದ್ದಲ್ಲೇ ಇದ್ದು ಧ್ಯಾನಮಾಡಿರಿ। ದಾಸಾನು ದಾಸರಾಗಿರಿ॥8॥ ಆಸ್ತಿಕರ ಸಂಗ ನಿಮ್ಮಾಣೆ ಬಿಡಬೇಡಿರಿ। ನಾಸ್ತಿಕರ ಸಂಗ ನಿಮ್ಮಾಣೆ ಮಾಡಬೇಡಿರಿ॥9॥ ತಿಳಿವಿಗೆ ಜಾತಿ ಇಲ್ಲ ಒಲವಿಗೆ ಮೈಲಿಗೆ ಇಲ್ಲ। ಜೀವ ಜೀವರುಗಳಿಗೆ ಯಾವ ಭೇದವೂ ಇಲ್ಲಾ॥10॥

**ಏನು ಮಹಿಮೆಯೋ ನಿನ್ನ (ಮಂಗಳ)** **ರಾಗ: ಆರಭಿ-ಆದಿತಾಳ**

ಏನು ಮಹಿಮೆಯೋ ನಿನ್ನ ಪಾಡಲಳವೇಸ್ವಾಮಿ। ಯತಿರಾಜ ಯತಿರಾಜ ಜಯ ಮಂಗಳೇ, ಯತಿರಾಜಯತಿರಾಜ ಶುಭಮಂಗಳಂ। ಭೂತ ಪುರಿಯಲಿ ಪುಟ್ಟಿ ಕಂಚಿಯಲಿ ಕಲಿತು, ಯಾದವರ ಅವಕೃಪೆಗೆ ಅನವರತನಾದೆ। ಕಾಂಚಿ ಪೂರ್ಣರ ಕೂಡಿ ವರದರಾಜನ ಸೇರಿ ತತ್ವವನು ನೀ ಅರಿತೆ ವಿಶಿಷ್ಟಾದ್ವೈತದ॥ ದೀನ ದಲಿತರ ಸೇವೆ ಮಾಡಲೆಂದೇ ಸ್ವಾಮಿ ಸಂಸಾರ ತೊರೆದು ಸಂನ್ಯಾಸಿಯಾದೆ। ದೇಶಸುತ್ತುತ ಬಂದೆ ಕೋಶ ಓದುತ ನಿಂದೆ ಪಾಮರರ ಕಣ್ಣೀರ ತೊಳೆಯಲೆಂದೆ॥ ಗೋಷ್ಠಿ ಪೂರ್ಣರ ಕೂಡಿ ರಹಸ್ಯ ಮಂತ್ರವ ಅರಿತು। ತವಕದಲಿ ಬಂದೆ ಗೋಪುರವ ಹತ್ತಿನಿಂದೆ ಬನ್ನಿ-ಬನ್ನಿ... ಎಂದೆ ದೀನ ದಲಿತರ ತಂದೆ ಗುಟ್ಟುರಟ್ಟನೆ ಮಾಡಿ ಮುಕ್ತಿ ಮಾರ್ಗವ ತೆರೆದೆ॥ ತೊಂಡನೂರಿಗೆ ಬಂದೆ ಬಿಟ್ಟಿದೇವನ ಕಂಡೆ ಶಿಷ್ಯನಾಗಲು ಅರಸ ವಿಷ್ಣುವರ್ಧನ ಎಂದೆ। ರೈತರೆಲ್ಲರು ಬಂದು ನೀರ ಬವಣೆಯ ಪೇಳೆ ಅವರೊಡನೆ ಕೆರೆಕಟ್ಟಿ ಹರುಷವ ತಂದೆ॥ ಕೇಶವನ ಗುಡಿಯಲ್ಲಿ ವೇಲಾಪುರಿಯಲ್ಲಿ ಶಾಸನವ ಬರೆಸಿ ಸಾಕ್ಷಿಯನು ಇರಿಸಿ। ಕುಲವೆಲ್ಲ ಒಂದೆ ಕೇಶವನೆ ತಂದೆ ಕೈಬಾಚಿ ಮುಂದೆ ಬನ್ನಿ... ಬನ್ನಿ ಎಂದೆ॥ ಮೇಲುಕೋಟೆಗೆ ಬಂದು ಚೆಲುವ ನಾರಾಯಣನ ಕಂಡು ಗುಡಿ ಕಟ್ಟಿ ಪೂಜಿಸಿದ ಕೀರ್ತಿ ಅಸದಳವೋ। ದಿಲ್ಲಿ ಯಾತ್ರೆಯ ಮಾಡಿ ಶೆಲ್ವಪಿಳ್ಳೆಯ ತಂದು ಅಂತ್ಯಜರ ಅಪ್ಪಿ ಕರೆತಂದ ವಿಜಯನಿನದು॥4॥ ಭಕ್ತಿಯೇ ಮುಕ್ತಿಗೆ ಸಾಧನವು ನಮಗೆಂದು ಅವತರಿಸಿದಾ ನಿನ್ನ ಲೀಲೆ ಹಿರಿದೋ। ಜಗವನುದ್ಧರಿಸಬಂದೆ ಯತಿರಾಜ ಗುರುವೇ ಶರಣು ಶರಣು ಎನುತಿಹರು ಭಕುತ ಬಂಧು॥ ಆದಿಶೇಷನು ನೀನೆ ರಾಮನನುಜನು ನೀನೆ ಕೋಯಿಲಣ್ಣನು ನೀನೆ ಗೋದಾಗ್ರಜ। ಇನಿತು ಪೆಸರನೂ ಪೊತ್ತು ಕಣ್ಣ ಪಾರ್ಥರ ಕೈಲಿ ಮಂಗಳವ ಪಾಡಿಸಿದ ಕೀರ್ತಿ ನಿನ್ನದು॥5॥

**ಭಗವನ್ನಾರಾಯಣ ಅಭಿಮತ (ಶ್ರೀ ಶರಣಾಗತಿ ಗದ್ಯಂ)**

"ಭಗವನ್ನಾರಾಯಣ ಅಭಿಮತ ಅನುರೂಪ ಸ್ವರೂಪ ರೂಪ ಗುಣ ವಿಭವ ಐಶ್ವರ್ಯ ಶೀಲಾದಿ ಅನವಧಿಕಾತಿಶಯ ಅಸಂಖ್ಯೆಯ ಕಲ್ಯಾಣ ಗುಣಗಣಾಂ. ಪದ್ಮ ವನಾಲಯಾಂ ಭಗವತೀಂ, ಶ್ರೀಯಂ ದೇವೀಂ, ನಿತ್ಯಾನಪಾಯಿನೀಂ, ನಿರವದ್ಯಾಂ, ದೇವದೇವ ದಿವ್ಯ ಮಹಿಷೀಂ ಅಖಿಲ ಜಗನ್ಮಾತರಮ್, ಅಸ್ಮಾನ್ಮಾತರಮ್, ಅಶರಣ್ಯಶರಣ್ಯಾಂ ಅನನ್ಯ-ಶರಣಃ ಶರಣಮ್ ಅಹಂ ಪ್ರಪದ್ಯೇ"

"ಪಾರಮಾರ್ಥಿಕ-ಭಗವಚ್ಚರಣಾರವಿನ್ದ ಯುಗಳ ಐಕಾನ್ತಿಕ ಅತ್ಯನ್ತಿಕ ಪರಭಕ್ತಿ ಪರಜ್ಞಾನ ಪರಮಭಕ್ತಿಕೃತ ಪರಿಪೂರ್ಣ ಅನವರತ ನಿತ್ಯ ವಿಶದತಮ ಅನನ್ಯ ಪ್ರಯೋಜನ ಅನವಧಿಕಾತಿಶಯ ಪ್ರಿಯ ಭಗವದನುಭವ ಜನಿತ ಅನವಧಿಕಾತಿಶಯಪ್ರೀತಿಕಾರಿಕ ಅಶೇಷಾವಸ್ಥೋಚಿತ ಅಶೇಷ ಶೇಷತೈಕರತಿರೂಪ ನಿತ್ಯಕೈಂಕರ್ಯ ಪ್ರಾಪ್ತಿ ಅಪೇಕ್ಷಯಾ ಪಾರಮಾರ್ಥಿಕೀ ಭಗವಚ್ಚರಣಾರವಿನ್ದ ಶರಣಾಗತಿಃ ಯಥಾವಸ್ಥಿತಾ ಅವಿರತಾ ಅಸ್ತು ಮೇ"

(ಲಕ್ಷ್ಮೀಃ) - "ಅಸ್ತುತೇ; ತಯೈವ ಸರ್ವಂ ಸಂಪತ್ಸ್ಯತೇ" (ಶ್ರೀರಾಮಾನುಜಃ) - ಅಖಿಲ-ಹೇಯ ಪ್ರತ್ಯನೀಕ ಕಲ್ಯಾಣೈಕತಾನ ಸ್ವೇತರ ಸಮಸ್ತವಸ್ತು ವಿಲಕ್ಷಣ ಅನನ್ತ ಜ್ಞಾನ ಆನನ್ದೈಕಸ್ವರೂಪ! ಸ್ವಾಭಿಮತ ಅನುರೂಪ ಏಕರೂಪ ಅಚಿನ್ತ್ಯ ದಿವ್ಯಅದ್ಭುತ ನಿತ್ಯ ನಿರವದ್ಯ ನಿರತಿಶಯ ಔಜ್ವಲ್ಯ ಸೌನ್ದರ್ಯ ಸೌಗನ್ಧ್ಯ ಸೌಕುಮಾರ್ಯ ಲಾವಣ್ಯ ಯೌವನದಿ ಅನನ್ತ ಗುಣನಿಧಿ ದಿವ್ಯರೂಪ!

ಸ್ವಾಭಾವಿಕ ಅನವಧಿಕಾತಿಶಯ ಜ್ಞಾನ ಬಲ ಐಶ್ವರ್ಯವೀರ್ಯ ಶಕ್ತಿ ತೇಜಃ ಸೌಶಿಲ್ಯವಾತ್ಸಲ್ಯಮಾರ್ದವ ಆರ್ಜವ ಸೌಹಾರ್ದ ಸಾಮ್ಯ ಕಾರುಣ್ಯ ಮಾಧುರ್ಯ ಗಾಂಭೀರ್ಯ ಔದಾರ್ಯ ಚಾತುರ್ಯ ಸ್ಥೈರ್ಯ ಧೈರ್ಯ ಶೌರ್ಯ ಪರಾಕ್ರಮ್ಯ ಸತ್ಯಕಾಮ ಸತ್ಯಸಙ್ಕಲ್ಪ ಕೃತಿತ್ವ ಕೃತಜ್ಞತಾದಿ ಅಸಂಖ್ಯೇಯ ಕಲ್ಯಾಣ ಗುಣ ಗಣೌಘ ಮಹಾರ್ಣವ!

ಸ್ವೋಚಿತ ವಿವಿಧ ವಿಚಿತ್ರ ಅನನ್ತ ಆಶ್ಚರ್ಯ ನಿತ್ಯ ನಿರವದ್ಯ ನಿರತಿಶಯ ಸುಗನ್ಧ ನಿರತಿಶಯ ಸುಖಸ್ಪರ್ಶ ನಿರತಿಶಯೌಜ್ವಲ್ಯ ಕಿರೀಟ-ಮಕುಟ ಚೂಡಾ ವತಂಸ ಮಕರಕುಂಡಲ ಗ್ರೈವೇಯಕ ಹಾರ ಕೇಯೂರ ಕಟಕ ಶ್ರೀವತ್ಸ ಕೌಸ್ತುಭ ಮುಕ್ತದಾಮ ಉದರ ಬಂಧನ ಪೀತಾಮ್ಬರ ಕಾಞ್ಚೀಗುಣನೂಪುರಾದಿ ಅಪರಿಮಿತ ದಿವ್ಯ ಭೂಷಣ!

ಸ್ವಾನುರೂಪ ಅಚಿಂತ್ಯಶಕ್ತಿ ಶಂಖ ಚಕ್ರ ಗಧಾ ಶಾಙ್ಗಾದಿ ಅಸಂಖ್ಯೇಯ ನಿತ್ಯ ನಿರವದ್ಯ- ನಿರತಿಶಯ ಕಲ್ಯಾಣ ದಿವ್ಯಾಯುಧ! ಸ್ವಾಭಿಮತ ನಿತ್ಯ ನಿರವದ್ಯ ಅನುರೂಪ ಸ್ವರೂಪ ರೂಪ ಗುಣ ವಿಭವ ಐಶ್ವರ್ಯ ಶೀಲಾದಿ ಅನವದಿಕಾತಿಶಯ ಅಸಂಖ್ಯೇಯ ಕಲ್ಯಾಣಗುಣಗಣ ಶ್ರೀವಲ್ಲಭ!

ಏವಂ ಭೂತ ಭೂಮಿ ನೀಳಾ ನಾಯಕ! ಸ್ವಚ್ಛಂದಾನುವೃತ್ತಿ ಸ್ವರೂಪ ಸ್ಥಿತಿ ಪ್ರವೃತ್ತಿ ಭೇದ ಅಶೇಷ ಶೇಷತೈಕರತಿರೂಪ ನಿತ್ಯ ನಿರವದ್ಯ ನಿರತಿಶಯ ಜ್ಞಾನ ಕ್ರಿಯಾ ಐಶ್ವರ್ಯಾದಿ ಅನನ್ತ ಕಲ್ಯಾಣ ಗುಣಗಣ ಶೇಷ ಶೇಷಾಶನ ಗರುಡ ಪ್ರಮುಖ ನಾನಾವಿಧ ಅನನ್ತ ಪರಿಜನ ಪರಿಚಾರಿಕಾ ಪರಿಚರಿತ ಚರಣಯುಗಳ!

ಪರಮಯೋಗಿ ವಾಙ್ ಮನಸಾ ಅಪರಿಚ್ಛೇದ್ಯ ಸ್ವರೂಪ ಸ್ವಭಾವ್ಯ ಸ್ವಾಭಿಮತ ವಿವಿಧ ವಿಚಿತ್ರ ಅನನ್ತ ಭೋಗ್ಯ ಭೋಗೋಪಕರಣ ಭೋಗಸ್ಥಾನ ಸಮೃದ್ಧ ಅನನ್ತಶ್ಚರ್ಯ ಅನನ್ತ ಮಹಾವಿಭವ ಅನನ್ತ ಪರಿಮಾಣ ನಿತ್ಯ ನಿರವದ್ಯ ನಿರತಿಶಯ ಶ್ರೀವೈಕುಂಠನಾಥ! ಸ್ವಸಂಕಲ್ಪಾನುವಿಧಾಯಿ ಸ್ವರೂಪ ಸ್ಥಿತಿ ಪ್ರವೃತ್ತಿ ಸ್ವಶೇಷತೈಕಸ್ವಭಾವ ಪ್ರಕೃತಿ ಪುರುಷ ಕಲಾತ್ಮಕ ವಿವಿಧ ವಿಚಿತ್ರ ಅನನ್ತ ಭೋಗ್ಯ ಭೋಕ್ತೃವರ್ಗ ಭೋಗೋಪಕರಣ ಭೋಗಸ್ಥಾನರೂಪ ನಿಖಿಲ ಜಗದುದಯ ವಿಭವ ಲಯ ಲೀಲ!

ಸತ್ಯಕಾಮ! ಸತ್ಯ ಸಂಕಲ್ಪ! ಪರಬ್ರಹ್ಮ ಭೂತ! ಪುರುಷೋತ್ತಮ! ಮಹಾವಿಭೂತೇ! ಸ್ರೀಮನ್! ನಾರಾಯಣ! ವೈಕುಂಠನಾಥ! ಅಪಾರಕಾರುಣ್ಯ ಸೌಶೀಲ್ಯ ವಾತ್ಸಲ್ಯ ಔದಾರ್ಯ ಐಶ್ವರ್ಯ ಸೌಂದರ್ಯ ಮಹೋದಧೇ! ಅನಾಲೋಚಿತ ವಿಶೇಷ ಲೋಕ ಶರಣ್ಯ! ಪ್ರಣತ ಆರ್ತಿಹರ! ಆಶ್ರಿತ ವಾತ್ಸಲ್ಯೈಕ ಜಲಧೇ! ಅನವರತ ವಿದಿತ ನಿಖಿಲ ಭೂತಜಾತ! ಯಥಾತ್ವ್ಯ ಅಶೇಷ ಚರಾಚರ ಭೂತ ನಿಖಿಲ ನಿಯಮನ ನಿರತ! ಅಶೇಷ ಚಿದಚಿದ್ ವಸ್ತು ಶೇಷೀಭೂತ! ನಿಖಿಲ ಜಗದಾಧಾರ! ಅಖಿಲ ಜಗತ್ ಸ್ವಾಮಿನ್! ಅಸ್ಮತ್ ಸ್ವಾಮಿನ್! ಸತ್ಯಕಾಮ! ಸತ್ಯಸಂಕಲ್ಪ ಸಕಲೇತರ ವಿಲಕ್ಷಣ! ಆರ್ಥಿಕಲ್ಪಕ! ಅಪತ್ಸಖ! ಶ್ರೀಮನ್ ನಾರಾಯಣ! ಅಶರಣ್ಯ - ಶರಣ್ಯ! ಅನನ್ಯಶರಣಃ ತ್ವಾತ್ಪದಾರವಿನ್ದ-ಯುಗಳಂ ಶರಣಮ್ ಅಹಂ ಪ್ರಪದ್ಯೇ - ಅತ್ರ ದ್ವಯಂ - "ಪಿತರಂ ಮಾತರಂ ದಾರಾನ್ ಪುತ್ರಾನ್ ಬನ್ಧೂನ್ ಸಖೀನ್ ಗೂರೂನ್ ರತ್ನಾನಿ ಧನಧಾನ್ಯಾನಿ ಕ್ಷೇತ್ರಣಿ ಚ ಗೃಹಾಣಿ ಚ॥ ಸರ್ವಧರ್ಮಾಂಶ್ಚ ಸನ್ತ್ಯಜ್ಯ ಸರ್ವಕಾಮಾಂಶ್ಚ ಸಾಕ್ಷರಾನ್। ಲೋಕವಿಕ್ರಾನ್ತ ಚರಣೌ ಶರಣಂ ತೇ ವಜ್ರಂ ವಿಭೋ॥"

ತ್ವಮೇವ ಮಾತಾ ಚ ಪಿತಾ ತ್ವಮೇವ। ತ್ವಮೇವ ಬಂಧುಶ್ಚ ಗುರುಃ ತ್ವಮೇವ। ತ್ವಮೇವ ವಿದ್ಯಾ ದ್ರವಿಣಂ ತ್ವಮೇವ। ತ್ವಮೇವ ಸರ್ವಂ ಮಮ ದೇವದೇವ॥ (ಗೀತೆ xi=44) ಪಿತಾಸಿ ಲೋಕಸ್ಯ ಚರಾಚರಸ್ಯ ತ್ವಮಸ್ಯ ಪೂಜ್ಯಶ್ಚ ಗುರುಃ ಗರೀಯಾನ್। ನ ತ್ವತ್ಸಮಃ ಅಸ್ತಿ ಅಭ್ಯಧಿಕಃ ಕುತೋನ್ಯಃ ಲೋಕತ್ರಯೇಽಪಿ ಅಪ್ರತಿಮ ಪ್ರಭಾವ। ತಸ್ಮಾತ್ ಪ್ರಣಮ್ಯ ಪ್ರಣಿಧಾಯಕಾಯಂ ಪ್ರಸಾದಯೇ ತ್ವಾಮ್ ಅಹಮ್ ಈಶಮ್ ಈಡ್ಯಮ್। ಪಿತೇವ ಪುತ್ರಸ್ಯ ಸಖೇವ ಸಖ್ಯುಃ। ಪ್ರಿಯಃ ಪ್ರಿಯಾಯಾ ಅರ್ಹಸಿ ದೇವ

ಸೋಢುಂ॥
ಮನೋವಾಕ್ಕಾಯೈಃ ಅನಾದಿಕಾಲ ಪ್ರವೃತ್ತ ಅನಸ್ತ ಅಕೃತ್ಯಕರಣ ಭಗವದಪಚಾರ ಭಾಗವತಾಪಚಾರ ಅಸಹ್ಯಾಪಚಾರರೂಪ ನಾನಾವಿಧ ಅನನ್ತಾ ಪಚಾರನ್, ಆರಬ್ಧಕಾರ್ರ್ಯಾನ್ ಅನಾರಬ್ದ ಕಾರ್ಯನ್, ಕೃತಾನ್, ಕ್ರಿಯಮಾಣಾನ್, ಕರಿಷ್ಯ ಮಾಣಾಂಶ್ಚ ಸರ್ವಾನ್ ಅಶೇಷತಃ ಕ್ಷಮಸ್ವ। ಅನಾದಿಕಾಲ ಪ್ರವೃತ್ತ, ವಿಪರೀತಜ್ಞಾನಮ್ ಆತ್ಮ ವಿಷಯಂ ಕೃತ್ಸ್ನಜಗದ್ವಿಷಯಂ ಚ ವಿಪರೀತವೃತ್ತಂ ಚ ಅಶೇಷವಿಷಯಮ್ ಅದ್ಯಾಪಿ ವರ್ತಮಾನಂ ವರ್ತಿಷ್ಯಮಾಣಂ ಚ ಸರ್ವಂ ಕ್ಷಮಸ್ವ.
ಮದೀಯ ಅನಾದಿಕರ್ಮ ಪ್ರವಾಹ ಪ್ರವೃತ್ತಾಂ, ಭಗವತ್ ಸ್ವರೂಪ ತಿರೋಧಾನಕರೀಂ, ವಿಪರೀತಜ್ಞಾನ ಜನನೀಂ ಸ್ವವಿಷಯಾಯಾಶ್ಚ ಭೋಗ್ಯ ಬುದ್ಧೇಃ ಜನನೀಂ, ದೇಹೇನ್ದ್ರಿಯತ್ವೇನ ಭೋಗ್ಯತ್ವೇನ ಸೂಕ್ಷ್ಮರೂಪೇಣ ಚ ಅವಸ್ಥಿತಾಂ ದೈವೀಂ ಗುಣಮಯೀಂ, ಮಾಯಾಂ-"ದಾಸಾಭೂತಃ ಶರಣಾಗತಃ ಅಸ್ಮಿ ತವಾಸ್ಮಿ ದಾಸಃ"-ಇತಿ ವಕ್ತಾರಂ ಮಾಂ ತಾರಯ.
"ತೇಷಾಂ ಜ್ಞಾನೀ ನಿತ್ಯಯುಕ್ತಃ ಏಕಭಕ್ತಿಃ ವಿಶಿಷ್ಯತೇ ಪ್ರಿಯೋ ಹಿ ಜ್ಞಾನಿನಃ ಅತ್ಯರ್ಥಂ ಅಹಂ, ಸಚಮಮ ಪ್ರಿಯಃ॥
ಊದಾರಾಃ ಸರ್ವ ಏವ ಏತೇ ಜ್ಞಾನೀ ತು ಆತ್ಮೈವ ಮೇ ಮತಂ। ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವ ಅನುತ್ತಮಾಂ ಗತಿಂ॥
ಬಹೂನಾಂ ಜನ್ಮ ನಾಮ್ ಅನ್ತೇಜ್ಞಾನವಾನ್ ಮಾಂ ಪ್ರಪದ್ಯತೇ। ವಾಸುದೇವಃ ಸರ್ವಮ್, ಇತಿ ಸ ಮಹಾತ್ಮಾ ಸುದುರ್ಲಭಃ॥
ಇತಿ ಶ್ಲೋಕತ್ರಯೋದಿ ಜ್ಞಾನಿನಂ ಮಾ ಕುರುಷ್ವ." ಪುರುಷಃ ಸಪರಃ ಪಾರ್ಥ ಭಕ್ತ್ಯಾ ಲಭ್ಯಸ್ತು ಅನನ್ಯಯಾ। ಭಕ್ತ್ಯಾತ್ವನ್ಯಯಾ ಶಕ್ಯ ಮದ್ಭಕ್ತಿಂ ಲಭತೇ ಪರಾಮ್। ಇತಿಸ್ಥಾನ ತ್ರಯೋದಿತ ಪರಭಕ್ತಿಂ ಯುಕ್ತ ಮಾಂ ಕುರುಷ್ವ"ಪರಭಕ್ತಿ ಪರಜ್ಞಾನ ಪರಮಭಕ್ತ್ಯೈಕ ಸ್ವಭಾವಂ ಮಾಂ ಕರುಷ್ವ.
"ಪರಭಕ್ತಿ ಪರಜ್ಞಾನ ಪರಮಭಕ್ತಿ ಕೃತ ಪರಿಪೂರ್ಣ ಅನವರತ ನಿತ್ಯ ವಿಶದತಮ ಅನನ್ಯ ಪ್ರಯೋಜನ ಅನವಧಿಕಾತಿಶಯ ಪ್ರಿಯ ಭಗವದನುಭವಃ ಅಹಂ, ತಥಾವಿಧ ಭಗವದನುಭವ ಜನಿತ ಅನವಧಿಕಾತಿಶಯ ಪ್ರೀತಿಕಾರಿತ ಅಶೇಷಾವಸ್ಥೋಚಿತ ಆಶೇಷ ಶೇಷತೈಕ ರತಿರೂಪ ನಿತ್ಯಾಕಿಂಕರೋ ಭವಾನಿ"
(ಶ್ರೀಮನ್ನಾರಾಯಣಃ) - "ಏವಂಭೂತ ಮತ್ಕೈಂಕರ್ಯ ಪ್ರಾಪ್ತಿ ಉಪಾಯತಯಾ ಅವಕ್ಲೃಪ್ತ ಸಮಸ್ತ ವಸ್ತು ವಿಹೀನೋಽಪಿ, ಅನನ್ತ ತದ್ವಿರೋಧಿ ಪಾಪಾಕ್ರಾನ್ತೋಽಪಿ, ಅನನ್ತ ಮದಪಚಾರ ಯುಕ್ತೋಽಪಿ, ಅನನ್ತ ಮದೀಯಾಪಚಾರ ಯುಕ್ತೋಽಪಿ. ಅನನ್ತ ಅಸಹ್ಯಾಪಚಾರ ಯುಕ್ತೋಽಪಿ ಏತತ್ಕಾರ್ಯ ಕಾರಣಭೂತ ಅನಾದಿ ವಿಪರೀತಾಹಂಕಾರ ವಿಮೂಢ ಆತ್ಮ ಸ್ವಭಾವೋಽಪಿ, ಏತದುಭಯ ಕಾರ್ಯ ಕಾರಣಭೂತ ಅನಾದಿ ವಿಪರೀತ ವಾಸನಾ ಸಂಬದ್ಧೋಽಪಿ, ಏತದನುಗುಣ ಪ್ರಕೃತಿವಿಶೇಷ ಸಂಬದ್ಧೋಪಿ, ಏತನ್ಮೂಲ ಆದ್ಯಾತ್ಮಿಕ ಆಧಿಭೌತಿಕ ಆಧಿದೈವಿಕ ಸುಖ ದುಃಖ ತದ್ಧೇತು ತದಿತರ ಉಪೇಕ್ಷಣೀಯ ವಿಷಯ ಅನುಭವ.
ಜ್ಞಾನಸಂಕೋಚರೂಪ ಮಚ್ಚರಣಾರವಿನ್ದ ಯುಗಲ ಐಕಾನ್ತಿಕ ಅತ್ಯಸ್ತಿಕ ಪರಭಕ್ತಿ ಪರಜ್ಞಾನ ಪರಮಭಕ್ತಿ ವಿಘ್ನ ಪ್ರತಿಹತೋಽಪಿ, ಯೇನ ಕೇನಾಪಿ ಪ್ರಕಾರೇಣ ದ್ವಯವಕ್ತಾ ತ್ವಂ ಕೇವಲಂ ಮದೀಯಯಾ ಏವದಯಯಾ ನಿಃಶೇಷ ವಿನಷ್ಟ ಸಹೇತುಕ ಮಚ್ಚರಣಾರವಿನ್ದ ಯುಗಲ ಐಕಾನಿಕ ಅತ್ಯನ್ತಿಕ ಪರಭಕ್ತಿ ಪರಜ್ಞಾನ ಪರಮಭಕ್ತಿ ವಿಘ್ನಃ, ಮತ್ಪ್ರಸಾದ ಲಬ್ಧ ಮಚ್ಚರಣಾರ ವಿನ್ದ ಯುಗಲ ಐಕಾನ್ತಿಕ ಆತ್ಯಂತಿಕ ಪರಭಕ್ತಿ ಪರಜ್ಞಾನ ಪರಮಭಕ್ತಿಃ ಮತ್ಪ್ರಸಾದಾತ್ ಏವ ಸಾಕ್ಷಾತ್ಕೃತ ಯಥಾವಸ್ಥಿತ ಮತ್ಸ್ವರೂಪ ರೂಪ ಗುಣ ವಿಭೂತಿ ಲೀಲೋಪಕರಣ ವಿಸ್ತಾರಃ, ಅಪರೋಕ್ಷಸಿದ್ಧ ಮನ್ನಿಯಾಮ್ಯತಾ ಮದ್ದಾಸ್ಯೈಕಸ್ವಭಾವ ಆತ್ಮ ಸ್ವರೂಪಃ ಮದೇಕಾನುಭಾವಃ, ಮದ್ದಾಸ್ಯೈಕಪ್ರಿಯಃ, ಪರಿಪೂರ್ಣ ಅನವರತ ನಿತ್ಯ ವಿಶದತಮ ಅನನ್ಯ ಪ್ರಯೋಜನ ಅನವಧಿಕಾತಿಶಯ ಪ್ರಿಯ ಮದನುಭವಃ ತ್ವಂ ತಥಾವಿಧ ಮದುನುಭವ ಜನಿತ ಅನವಧಿಕಾತಿಶಯ ಪ್ರೀತಿಕಾರಿತ ಅಶೇಷಾವಸ್ಥೋಚಿತ ಅಶೇಷಶೇಷತೈಕರತಿ ರೂಪ ನಿತ್ಯಕಿಜ್ಕರೋರಭವ॥ "ಏವಂ ಭೂತೋಽಸಿ॥" "ಅಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕ ದುಃಖ ವಿಘ್ನಗನ್ಧ ರಹಿತಃ ತ್ವಂ ದ್ವಯಮ್ ಅರ್ಥಾನುಸನ್ಧಾನೇನ ಸಹ, ಸದಾ ಏವಂ ವಕ್ತಾ ಯಾವಚ್ಛರೀರಪಾತಮ್ ಅತ್ರೈವ ಶ್ರೀರಂಗೇ ಸುಖಮ್ ಅಸ್ವ!" "ಶರೀರಪಾತ ಸಮಯ ತು ಕೇವಲಂ ಮದೀಯಯಾ ಏವ ದಯಯಾ ಅತಿಪ್ರಬುದ್ಧಃ ಮಾಮ್ ಏವ ಅವಲೋಕಯನ್ ಅಪ್ರಚ್ಯುತಪೂರ್ವಸಂಸ್ಕಾರ ಮನೋರಥಃ, ಜಿರ್ಣಮ್ ಇವ ವಸ್ತ್ರಂ ಸುಖೇನ ಇಮಾಂ ಪ್ರಕೃತಿಂ ಸ್ಥೂಲಸೂಕ್ಷ್ಮ ರೂಪಾಂ, ವಿಸೃಜ್ಯ, ತದಾನೀಮ್ ಏವ ಮತ್ಪ್ರಸಾದ ಲಬ್ಧಮಚ್ಚರಣ ಅರವಿನ್ದಯುಗಲ ಐಕಾನ್ತಿಕ ಆತ್ಯನ್ತಿಕ ಪರಭಕ್ತಿ ಪರಜ್ಞಾನ ಪರಮ ಭಕ್ತಿಕೃತ ಪರಿಪೂರ್ಣ ಅನವರತ ನಿತ್ಯ ವಿಶದತಮ ಅನನ್ಯ ಪ್ರಯೋಜನ ಅನವಧಿಕಾತಿಶಯ ಪ್ರಿಯ ಮದನುಭವ ಜನಿತ

ಅನವಧಿಕಾತಿಶಯ ಪ್ರೀತಿಕಾರಿತ ಅಶೇಷಾವಸ್ಥೋಚಿತ ಆಶೇಷ ಶೇಷತೈಕರತಿ ರೂಪ ನಿತ್ಯ ಕಿಙ್ಕರೋ ಭವಿಷ್ಯಸಿ॥
"ಮಾ ತೇ ಭೂತ್ ಆತ್ರ ಸಂಶಯಃ॥ 1. ಅನೃತಂ ನೋಕ್ತ ಪೂರ್ವಂ ಮೇ, ನಚ ವಕ್ಷ್ಯೇ ಕದಾಚನ! 2. ರಾಮೋ ದ್ವಿಃ ನ ಅಭಿಭಾಷತೇ; 3. ಸಕೃದೇವ ಪ್ರಪನ್ನಾಯ ತವ ಅಸ್ಮಿ ಇತಿ ಚ ಯಾಚತೇ। ಅಭಯಂ ಸರ್ವಭೂತೇಭ್ಯೋ ದಾದಾಮಿ ಏತದ್ವ್ರತಂ ಮಮ॥ ಸರ್ವಧರ್ಮಾನ್ ಪರಿತ್ಯಜ್ಯ ಮಾಮ್ ಏಕಂ ಶರಣಂ ವ್ರಜ। ಅಹಂ ತ್ವಾ ಸರ್ವಪಾಪೇಭ್ಯಃ ಮೋಕ್ಷಯಿಷ್ಯಾಮಿ ಮಾ ಶುಚಃ॥
- ಇತಿ ಮಯಾ ಏವ ಹಿ ಉಕ್ತಂ.
ಅತಃ ತ್ವಂ ತವ ತತ್ವತಃ ಮತ್ ಜ್ಞಾನ ದರ್ಶನ ಪ್ರಾಪ್ತಿಷು ನಿಃಸಂಯಶಃ ಸುಖಮ್ ಆಸ್ವ॥ ಅಂತ್ಯಕಾಲೇ ಸ್ಮೃತಿಃ ಯಾ ತು ತವ ಕೈಂಕರ್ಯ ಕಾರಿತಾ। ತಾಮೇನಾ ಭಗವಾನ್ ಆದ್ಯಕ್ರಿಯಾಮಾಣಾಂ ಕುರುಷ್ವ ಮೇ॥
ಇತಿ ಶ್ರೀ ಭಗವಾದ್ರಾಮಾನುಜ ವಿರಚಿತೇ ಗದ್ಯತ್ರಯೇ ಶರಣಾಗತಿ ಗದ್ಯಾಖ್ಯಂ ಪೃಥುಗದ್ಯಮ್॥



## 18. ಬುದ್ಧಜಯಂತಿ

### ನ ಬ್ರಹ್ಮ ಲೋಕೇ ನ ಚ ದೇವಲೋಕೇ

ನ ಬ್ರಹ್ಮ ಲೋಕೇ ನ ಚ ದೇವಲೋಕೇ ನ ಯಕ್ಷ ಗಂಧರ್ವಮನುಷ್ಯಲೋಕೇ। ಲೋಕಸ್ಯ ಜಾತಿಜರಾಪನೇತಾ ನಾನ್ಯೋಽಸ್ತಿ ತ್ವತ್ತೋ ಹೀ ಮನುಷ್ಯಚಂದ್ರ॥1॥ ವಂದಿತಸ್ತ್ವಂ ಸುರೈಃ ಸೇಂದ್ರೈಃ ಋಷಿಭಿಶ್ಚಾಪಿ ಪೂಜಿತಃ। ವೈದ್ಯಃಸರ್ವಸ್ಯ ಲೋಕಸ್ಯ ವಂದೇಽಹಮಪಿ ತ್ವಾಂ ವಿಭೋ॥2॥ ಲೋಕೇ ಕ್ಲೇಷಾಗ್ನಿ ಸಂತಪ್ತೇ ಪ್ರಾದುಭೂತೋ ಮಹಾಹ್ರದಃ। ನಮೋಸ್ತು ಬೋಧಿಸತ್ವಾಯ ಸಂಬುದ್ದಾಯ ನಮೋ ನಮಃ॥3॥ ಅಜ್ಞಾನತಿಮಿರೇ ಲೋಕೇ ಪ್ರಾತುರ್ಭೂತಃ ಪ್ರದೀಪಕಃ। ನಮೋಽಸ್ತು ಬೋಧಿಸುತ್ತಾ ವ್ವಯ ಸಂಬುದ್ದಾಯ ನಮೋ ನಮಃ॥ ಶೋಕಸಾಗರಕಾಂತಾರೇ ಯಾನಶ್ರೇಷ್ಠಸ್ವರೂಪಕಃ। ನಮೋಸ್ತು ಬೋಧಿತ್ವಾಯ ಸಂಬುದ್ಧಾಯ ನಮೋ ನಮಃ॥4॥ ಶೋಕಸಾಗರಕಾಂತಾರೇ ಯಾನಶ್ರೇಷ್ಠಸ್ವರೂಪಕಃ। ನಮೋಽಸ್ತು ಬೋಧಿಸತ್ವಾಯ ಸಂಬುದ್ದಾಯ ನಮೋ ನಮಃ॥5॥ ಕ್ಲೇಶಬಂಧನ ಬದ್ದಾನಾಂ ಪ್ರಾದುರ್ಭೂತಃ ಪ್ರಮೋಚಕಃ। ನಮೋಽಸ್ತು ಬೋಧಿಸತ್ವಾಯ ಸಂಬುದ್ದಾಯ ನಮೋ ನಮಃ॥6॥ ಜರಾವ್ಯಾಧಿಕಿಲ್ಬಿಷಾಣಾಂ ಪ್ರಾದುರ್ಭೊತೋ ಭಿಷಗ್ವರಃ। ನಮೋಸ್ತು ಬೋಧಿಸತ್ವಾಭೂರ್ಯ ಸಂಬುದ್ದಾಯ ನಮೋ ನಮಃ॥7॥

### ನಿಜಭೋಗ ಭಾಗ್ಯಗಳನಿಹ ದುಃಖನಾಶನಕೆ ರಾಗ: ರೇವತಿ

ನಿಜಭೋಗ ಭಾಗ್ಯಗಳನಿಹ ದುಃಖನಾಶನಕೆ ದಿಗುಬಲಿಯಾಗಿಸಿದನಾ ತ್ಯಾಗಮೂರ್ತಿ। ಮಾರಮದಮರ್ಧನವ ಮೆರೆದು ತೃಷೆಯ ಹರಿದು ಮುಕ್ತಿಮಾರ್ಗವನರಸಿ ಸಾಧಿಸಿದ ಸಿದ್ದಂ। ನಿರ್ವಾಣಲಂಪಟಂ ಶೀಲಮೇ ಸಂಸಾರ ಸಾರ ಸರ್ವಸ್ವಮೆಂದುಲಿದು ಆಚರಿಸಿ। ಗೋತ್ರಗೀತ್ರವ ನೊತ್ತಿ ಸರ್ವಸಮತೆಯನೆತ್ತಿ ಸದ್ಧರ್ಮವನೆ ಬಿತ್ತಿದಾ ಧರ್ಮದಾನಿ। ವಜ್ರಾಸನಾಸೀನನಾಗಿ ಕುಳಿತಂದು, ಭೋದಿಯನು ವಶಗೈವ ಧ್ಯಾನಕ್ಕೆ ಸಂದು। ಪಡೆದ ಪ್ರಜ್ಞಾಶೀರ್ಷದಿಂದೊಗೆದು ಬಂದ ಬುದ್ಧಶಾಸನಮರ್ಕ ಕರದೀಪಮೆನಗೆ॥

### ಬುದ್ಧ ಚಂದ್ರೋದಯದಿ ರಾಗ: ಕಾಮವರ್ಧಿನಿ

ಬುದ್ಧ ಚಂದ್ರೋದಯದಿ ಹಿಗ್ಗಿ ನಮ್ಮೆದೆ ಕಡಲು। ಶಾಂತಿ ಶೀಕರವನಿದೋ ಚೆಲ್ಲುತಿಹುದು। ಜಗವ ಗೆಲ್ಲುತಿಹುದು॥1॥
ನೂರು ಸಾಸಿರ ದಳದಿ ಬುದ್ಧ ಪದ್ಮವು ಅರಳೆ। ಭಕುತ ಭೃಂಗವು ಬಂದು ಮುತ್ತುತಿಹುದು। ಸುತ್ತ ಸುತ್ತುತಿಹುದು॥2॥
ಜ್ವಾಲೆ ಮೇಲುದ ಹೊದೆದು। ಅಗ್ನಿ ದೇವನೆ ನಡೆದು। ಕರ್ಮ ಕಾನನವನ್ನು ದಹಿಸಲೆಂದು। ನಡೆದು ಬರುವನಿಂದು॥3॥

## ಮರಳಿ ಚಿಗುರಿ ಬಾ
**ರಾಗ: ಸಾರಂಗ**

ಮರಳಿ ಚಿಗುರಿ ಬಾ ವೃಕ್ಷ। ನಿನ್ನನಾಶ್ರಯಿಸಿ ಸಿದ್ದಾರ್ಥ ಅಮರ ಕೀರ್ತಿ ಪಡೆದ।। ಅಶೋಕನ ರಾಣಿಯ ಕೋಪಾಗ್ನಿಯಿಂ ದಹಿಸಿದ। ಅಮರಕಥೆಯ ನುಡಿಯೆ ಬಾ।।1।। ಶಿಶುನಾಗರಾಜರ ಉಗ್ರ ದ್ವೇಷವು ವಿಷಾಗ್ನಿಯಾಗಿ ಜಡ ಸುಡಲು। ನಿನ್ನ ದುಃಖವನು ತೋಡು ಬಾ।। ಶಾಂತಿ ಭೋಧೆಗೆ ನಾಂದಿ ನೀನಾಗಿ। ನಿರ್ಜೀವ ನಿಕ್ಷೇಪವಾಗಿ। ನಿನ್ನ ಭೀತಿಯ ತೋರುಬಾ।।2।। ಸಂಘ ಮಿತ್ರೆಯಿಂದ ನೀ ಹೋದೆ। ದೂರದ ಶ್ರೀಲಂಕಾ ದ್ವೀಪಕೆ। ಹೆಸರು ಹೇಳಲು ನೀನು ಮರಳಿ ಬಾ।। ಸುಜಾತಳ ಪ್ರಿಯ ವೃಕ್ಷವೇ। ಹಸಿರನು ತುಂಬಿ ಪುನಃ। ಶ್ರೀಶಾಂತಿಯ ಜಗಕೆ ಕೊಡು ಬಾ।।3।।

## ಪರಮ ಪವಿತ್ರ ಸುಧರ್ಮದ ಸ್ಥಾಪಕ (ಲಾವಣಿ)

ಪರಮ ಪವಿತ್ರ ಸುಧರ್ಮದ ಸ್ಥಾಪಕ। ಗೌತಮ ಬುದ್ಧನ ಕಥೆಯಾ ಕೇಳಿರಿ। ಲೋಕದ ಕಷ್ಟವ ನೀಗಿಸ ಬಂದ। ಮಾನವ ಶ್ರೇಷ್ಠನ ಜೀವನ ಕಥೆಯಾ।।1।। ನರಮೃಗ ಪಕ್ಷಿ ರೂಪವ ಧರಿಸಿ। ಜನ್ಮ ಜನ್ಮದಲಿ ಧರೆಯಲಿ ಹುಟ್ಟಿ। ಜೀವ ದಯೆಯ ಗುರಿಯನು ತೋರುತ। ಜಗದಲಿ ಪ್ರೀತಿಯ ನೆಲೆಸಲು ಬಂದಾ।।2।। ಬಾಳಿನ ಬವಣೆಯ ನೋಡಿಚಿತ್ರವ। ಅರಮನೆ ಸುಖವನು ಬಾಲ್ಯದಿ ತೊರೆದ। ಗುರುವನು ಅರಸುತ ಸುತ್ತಿದ ದೇಶವ। ಎಲ್ಲೆಡೆ ಹೋದರು ಸೋಲನು ಕಂಡ।।3।। ನೆಮ್ಮದಿಗಾಗಿ ಚಿಂತನೆ ಮಾಡುತ। ಮರದಡಿ ಕುಳಿತಾಗ ಜ್ಞಾನವ ಪಡೆದ। ಬಾಳಿನ ಗುರಿಯನು ಜಗಕೆ ಸಾರುತ। ತಂದನು ಶಾಂತಿ ಶ್ರೀ ಕೀರ್ತಿ ಸುಖವಾ।।4।।

## ಬೋಧಿ ವೃಕ್ಷದಡಿ ಧ್ಯಾನದಿ

ಬೋಧಿ ವೃಕ್ಷದಡಿ ಧ್ಯಾನದಿ। ಬೋಧಿ ವೃಕ್ಷದಡಿ ಧ್ಯಾನದಿ ಮುಳುಗಿಹ। ಯೋಗಿವರ್ಯನೆ ನೀನಾರು। ತಪದಿಂ ತಾಪದಿಂ ದೇಹವು ಸೊರಗಿದೆ। ಜ್ಯೋತಿಯು ಹಣೆಯಲಿ ಬೆಳಗುತಿದೆ।।1।। ಹೊರಗಡೆ ಕಾಂಬುದು ಜೋಗಿಯ ವೇಷ ಮುಖದಲಿ ರಾಜಕುಮಾರನ ತೇಜ। ಯಾರ ಭವನವನು ಅಂಧಕಾರದಲಿ। ಮುಳುಗಿಸಿ ಬಂದಿಹೆ ಪೇಳೆಲೆ ಜವದಿ।।2।। ಜ್ಞಾನ ಲಾಭವೋ ದೇಹ ಪಾತವೋ। ಆಗಲಿ ಒಂದು ಎರಡಲಿಂದು। ಪಣವ ತೊಟ್ಟು ನೀ ಬಸವಳಿದಿರಲು। ಕಲ್ಲೂ ಕರಗುತ ನೀರಾಗುವುದು।।3।। ತಾಪತ್ರಯದಲಿ ಬೆಂದಿಹ ಜನರನು। ಉದ್ಧರಿಸಲು ನೀ ಬಂದಿಹೆಯೇನು। ವಿಶ್ವಪ್ರೇಮವ ಪ್ರಚಾರಗೈಯಲು। ನಿಜಸುಖವನು ನೀ ತ್ಯಜಿಸಿಹೆಯೇನು।।4।।

